





# ಅಪರೂಪದ ಚಿತ್ರ ಕಲಾವಿದ ಕರಿಯಪ್ಪ ಹಂಚಿನಮನಿ



ಚಿತ್ರ ಕಲಾವಿದ ಕರಿಯಪ್ಪ ಹಂಚಿನಮನಿಯವರು ಹಾವೇರಿ ಜಿಲ್ಲೆಯ ಕಡೂರು ಎಂಬ ಚಿಕ್ಕ ಹಳ್ಳಿಯವರು. ರಟ್ಟಿಹಳ್ಳಿಯ ಕಲಾಶಾಲೆಯಲ್ಲಿ ಕಲಾಶಿಕ್ಷಣ ಪಡೆದು ತಮ್ಮ ಅದ್ವಿತೀಯ ಚಿತ್ರಕಲಾ ಪ್ರತಿಭೆಯಿಂದ ಇಂದು ಖ್ಯಾತನಾಮರಾಗಿದ್ದಾರೆ. ಹಂಚಿನಮನಿಯವರ ತಂದೆ ಹನುಮಂತಪ್ಪನವರು ಹಾಡುಗಾರಿಕೆ, ರಂಗಭೂಮಿಯಲ್ಲಿ ತೊಡಗಿಕೊಂಡಿದ್ದರು.

ಪ್ರಸ್ತುತ ಪೊಲೀಸ್ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿದ್ದರೂ ಚಿತ್ರಕಲೆ ಅವರ ಹವ್ಯಾಸ. ಅವರು ರಚಿಸಿರುವ ಚಿತ್ರಗಳು ಭಾರತದಲ್ಲಿಯೇ ಅಲ್ಲದೆ ಅಮೆರಿಕ, ರಷ್ಯಾ, ಮತ್ತಿತರ ದೇಶಗಳಲ್ಲಿ ಪ್ರದರ್ಶನ ಕಂಡಿವೆ.

**(ಈ ಸಲದ 'ಹೊಸತು' ಜನವರಿ ವಿಶೇಷ ಸಂಚಿಕೆಯ ಮುಖಪುಟದ ಚಿತ್ರದ ಕಲಾವಿದ ಶ್ರೀ ಕರಿಯಪ್ಪ ಹಂಚಿನಮನಿಯವರು)**





# ಹೊಸತು




## ನೆಮ್ಮದಿಯ ನಾಳೆ ನಮ್ಮದು




**ಚಿತ್ರಗಳು :** ಕಮಲಂ ಅರಸು, ನಾಮದೇವ ಕಾಗದಗಾರ, ವಿ. ಗೋಪಾಲ್, ಸುನಿಲ್ ಮಿಶ್ರಾ, ಗೋಪಿ ಹಿರೇಬೆಟ್ಟು, ಸೃಜನ್, ಜಿ. ಎಂ. ಬೊಮ್ನಳ್ಳಿ
**ಮುಖಪುಟ :** ನರೇಗಾ ಯೋಜನೆಯಡಿಯ ದುಡಿಮೆಯ ಚಿತ್ರ
**ವಿನ್ಯಾಸ :** ನವಕರ್ನಾಟಕ ವಿನ್ಯಾಸ
**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು

ಸುಪ್ರೀಮ್ ಕೋರ್ಟಿನ ನಾಲ್ಕು ಮಂದಿ ಹಿರಿಯ ನ್ಯಾಯಾಧೀಶರುಗಳು ಪತ್ರಿಕಾ ಸಮ್ಮೇಳನ ನಡೆಸಿದ್ದು ಭಾರಿ ಚರ್ಚೆಗೆ ಗ್ರಾಸ. ಬಹುದಿನಗಳಿಂದ ಒಳಗೇ ಕುದಿಯುತ್ತಿದ್ದ ಅಸಮಾಧಾನ ಆಸ್ಫೋಟಗೊಂಡಿತು ಅಷ್ಟೆ. ಇದಕ್ಕೆ ಮುಖ್ಯ ಕಾರಣ ನ್ಯಾಯಪೀಠಗಳ ರಚನೆಯಲ್ಲಿ ತಾರತಮ್ಯ ಹಾಗೂ ವಿಶೇಷವಾಗಿ ಸಿಬಿಐ ನ್ಯಾಯಾಲಯದ ನ್ಯಾಯಾಧೀಶ ಬಿ. ಎಚ್. ಲೋಯಾ ಅವರ ಅಸಹಜ ಸಾವಿನ ಪ್ರಕರಣದ ವಿಚಾರಣೆ. ಸಾರಾಂಶದಲ್ಲಿ ಮುಖ್ಯ ನ್ಯಾಯಾಧೀಶರು ಸರಕಾರಕ್ಕೆ ಆಸಕ್ತಿ ಇರುವ ಮೊಕದ್ದಮೆಗಳಲ್ಲಿ ಪೀಠ ರಚಿಸುವಾಗ ಹಿರಿಯ ನ್ಯಾಯಮೂರ್ತಿಗಳನ್ನು ಕಡೆಗಣಿಸಿ, ಬೇಕಾಬಿಟ್ಟಿ ಮಾಡಲಾಗಿದೆ ಎಂಬುದೇ ಆಪಾದನೆ.

ಏನಿದು ಲೋಯಾ ನಿಗೂಢ ಸಾವಿನ ವಿಚಾರ? ಇದು ಹದಿನೈದು ವರ್ಷಗಳ ಹಿಂದೆ ಗುಜರಾತ್ ಮಾರಣಹೋಮಕ್ಕೆ ಸಂಬಂಧಿಸಿದ್ದು. ಅಮಿತ್ ಷಾ ಆಗ ಗುಜರಾತಿನ ಗೃಹಸಚಿವರು. ಮೋದಿ–ಅಮಿತ್ ಷಾ ಜೋಡಿ ಯಾವತ್ತೂ ಹಿಟ್ಲರ್–ಗೋರಿಂಗ್ ಇದ್ದಂತೆ. ಅಮಿತ್ ಷಾ ಮುಖ್ಯ ಆಪಾದಿತರಾಗಿದ್ದ ಸೊಹ್ರಾ ಬುದ್ದೀನ್ ನಕಲಿ ಎನ್‌ಕೌಂಟರ್ ಪ್ರಕರಣದ ವಿಚಾರಣೆ ನಡೆಸುತ್ತಿದ್ದ ನ್ಯಾಯಾಧೀಶ ಲೋಯಾ ಅವರ ದಿಢೀರ್ ಸಾವು. ದೇಶದಲ್ಲಿ ಅಧಿಕಾರ ನಡೆಸುತ್ತಿರುವ ಭಾಜಪ ಪಕ್ಷದ ಅಧ್ಯಕ್ಷ ಅಮಿತ್ ಷಾ. ಮೋದಿ, ಅಮಿತ್ ಷಾ ದೇಶದ ಅತ್ಯಂತ ಪ್ರಭಾವಿ ರಾಜಕಾರಣಿಗಳು. ಸರಕಾರ ಹಾಗೂ ಪಕ್ಷದ ವಹಿವಾಟನ್ನು ನಿರ್ವಹಿಸುತ್ತಿರುವವರು. ಮುಂಬಯಿ ವಿಶೇಷ ಸಿಬಿಐ ನ್ಯಾಯಾಲಯದ ಲೋಯಾ ಅವರ ಮುಂದೆ ಪ್ರಮುಖ ಆರೋಪಿಯಾಗಿ ಅಮಿತ್ ಷಾ ಕಟೆಕಟೆಯಲ್ಲಿ ನಿಂತಿದ್ದವರು. ಸುಪ್ರೀಮ್ ಕೋರ್ಟು ಆದೇಶದ ಮೇರೆಗೆ ಮುಂಬಯಿಯಲ್ಲಿ ವಿಚಾರಣೆ. ೨೦೧೪ರಲ್ಲಿ ಮೋದಿ ಸರಕಾರ ಅಧಿಕಾರ ವಹಿಸಿಕೊಂಡಮೇಲೆ ಅಮಿತ್ ಷಾ ಭಾಜಪ ಅಧ್ಯಕ್ಷ. ಆರೋಪಿ ಷಾ ನ್ಯಾಯಾಲಯದ ಮುಂದೆ ಹಾಜರಾಗದೆ ಏನಾದರೂ ನೆಪಹಾಕಿ ತಪ್ಪಿಸಿ ಕೊಳ್ಳುತ್ತಿದ್ದರು. ನ್ಯಾಯಾಧೀಶರ ವರ್ಗವಾಗಿ ಲೋಯಾ ನೇಮಕಗೊಂಡು ವಿಚಾರಣೆ ಮುಂದುವರಿಸಿದರು. ಲೋಯಾ ಸಂಶಯಾಸ್ಪದವಾಗಿ ಸಾವನ್ನಪ್ಪಿದರು. ತೆರವಾದ ಜಾಗಕ್ಕೆ ನ್ಯಾಯಾಧೀಶ ಎಂ. ಬಿ. ಗೋಸಾಯಿ ಎಂಬುವರು ಬಂದರು. ಹದಿನೈದು ದಿನ ವಿಚಾರಣೆ ನಡೆಸಿ ಅಮಿತ್ ಷಾರನ್ನು ದೋಷಮುಕ್ತರನ್ನಾಗಿಸಿದರು. ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸಲಿಲ್ಲ. ಇದು ಹಿನ್ನೆಲೆ. ಹಾಗಾಗಿ, ಲೋಯಾ ಸಾವಿನ ಸಂಶಯ ಈಗ ಸರ್ವೋಚ್ಚ ನ್ಯಾಯಾಲಯದ ಮುಂದಿದೆ. ನ್ಯಾಯಮೂರ್ತಿಗಳ ಪತ್ರಿಕಾ ಸಮ್ಮೇಳನದ ನಂತರ ಈ ವಿಷಯ ಪ್ರಸ್ತಾಪಕ್ಕೆ ಬಂದಮೇಲೆ ಲೋಯಾ ಅವರ ಪುತ್ರ, ಇನ್ನೂ ಕಾಲೇಜು ವಿದ್ಯಾರ್ಥಿಯನ್ನು ಹಿಡಿದು ತಂದು ಆತನ ಕೈಯಲ್ಲಿ ತನ್ನ ತಂದೆ ಸಾವು ಸಹಜ ಎಂದು ಹೇಳಿಸಿಯಾಯಿತು. ಇವೆಲ್ಲದರ ಹಿಂದೆ ಯಾರ ಕೈವಾಡವಿದೆ ಎಂಬುದನ್ನು ಊಹಿಸಿಕೊಳ್ಳಬಹುದು.

✳ ✳ ✳

ಕರ್ನಾಟಕದಲ್ಲಿ ಚುನಾವಣೆಗಳು ನಡೆಯಲು ನೂರಕ್ಕೂ ಹೆಚ್ಚು ದಿನಗಳಿವೆ. ಆದರೆ ಅಧಿಕಾರದ ಗದ್ದುಗೆ ಏರುವುದಕ್ಕೆ ಹಂಬಲಿಸುತ್ತಿರುವ ಕಾಂಗ್ರೆಸ್, ಭಾಜಪ, ಜೆಡಿಎಸ್‌ಗಳು ಈಗಾಗಲೇ ಪ್ರಚಾರ ಪ್ರಾರಂಭಿಸಿವೆ ಮತದಾರರನ್ನು ಒಲಿಸಿಕೊಳ್ಳಲು. ಸಾಧನಾ ಸಮಾವೇಶ, ಪರಿವರ್ತನಾ ರ್‍ಯಾಲಿ, ಸಭೆ ಸಮಾರಂಭಗಳು, ಯಜ್ಞ–ಯಾಗಾದಿಗಳು ಭರದಿಂದ ಸಾಗಿವೆ. ಈ ಮಧ್ಯೆ ಹೊಸ ಹೊಸ ಪಕ್ಷಗಳು ತಲೆ ಎತ್ತುತ್ತಿವೆ. ಸಿನಿಮಾ ತಾರೆಯರನ್ನು ಬಳಸಿಕೊಳ್ಳಲು ಬಲೆ ಬೀಸಲಾಗುತ್ತಿದೆ. ಉತ್ತರ ಕರ್ನಾಟಕದ ಮತದಾರರನ್ನು ಒಲಿಸಿಕೊಳ್ಳಲು ಕಳಸಾ–ಬಂಡೂರಿ ನಾಲಾ ಯೋಜನೆ ಮತ್ತು ಲಿಂಗಾಯತ–ವೀರಶೈವ ಪ್ರತ್ಯೇಕ ಧರ್ಮವನ್ನು ಕೆದಕಲಾಗಿದೆ. ಇವೆರಡೂ ಕೂಡ ಚುನಾವಣೆಯವರೆಗೆ ಜೀವಂತ.

ಮಹದಾಯಿ ಅಥವಾ ಮಾಂಡೋವಿ ನದಿ ನೀರನ್ನು ಗೋವಾ ಕರ್ನಾಟಕ

(೬ನೇ ಪುಟಕ್ಕೆ )



ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೧೯ ಸಂಚಿಕೆ-೭ ಫೆಬ್ರವರಿ ೨೦೧೮

■ **ಗೌರವ ಸಂಪಾದಕ**

ಜಿ. ರಾಮಕೃಷ್ಣ

■ **ಸಂಪಾದಕ-ಮುದ್ರಕ-ಪ್ರಕಾಶಕ**

ಸಿದ್ದನಗೌಡ ಪಾಟೀಲ

■ **ಸಹಸಂಪಾದಕರು**

ಎಂ. ಅಬ್ದುಲ್ ರೆಹಮಾನ್ ಪಾಷ

ಇಂದಿರಾ ಕುಮಾರಿ

ಸಿ. ಆರ್. ಕೃಷ್ಣರಾವ್

ಎನ್. ಗಾಯತ್ರಿ

ಎಸ್. ಸುರೇಂದ್ರ

■ **ವ್ಯವಸ್ಥಾಪಕ**

ಎ. ರಮೇಶ ಉಡುಪ

■ **ಮುದ್ರಣ**

ಶ್ರೀ ವಿನಾಯಕ ಪ್ರಿಂಟರ್ಸ್

೭೩೮/೧೦, ೬೦ನೇ ಅಡ್ಡರಸ್ತೆ

೫ನೇ ಬ್ಲಾಕ್, ರಾಜಾಜಿನಗರ

ಬೆಂಗಳೂರು – ೫೬೦ ೦೧೦

■ **ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**

೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೯೫

ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – ೫೬೦ ೦೦೧

ದೂರವಾಣಿ : ೨೨೧೬೧೯೧೧, ೨೨೧೬೧೯೧೨

**e-mail : navakarnataka@gmail.com**

**hosathu@gmail.com**

**hosathu.nkp@gmail.com**

**URL : www.navakarnataka.com**

**http : //navakarnataka.blogspot.in**

**http : //hosathumonthly.blogspot.in**




# ಸಂಪಾದಕೀಯ

## ರೊಟ್ಟಿ ಮತ್ತು ಪ್ರಭುತ್ವ

'ಪ್ರಜಾಪ್ರಭುತ್ವ ಎನ್ನುವುದು ಒಂದು ಸುಂದರವಾದ ನುಡಿಗಟ್ಟು. ಆದರೆ ವರ್ಗ, ವರ್ಣಗಳಿಂದ ಕೂಡಿದ, ವರ್ಗ, ವರ್ಣಗಳ ನಡುವೆ ತೀವ್ರವಾದ ಅಂತರ್ ಸಂಘರ್ಷ ಚಾಲ್ತಿಯಲ್ಲಿರುವ ಸಮಾಜದಲ್ಲಿ 'ಪ್ರಜಾಪ್ರಭುತ್ವ' ಎನ್ನುವ ಪರಿಕಲ್ಪನೆ ತೀವ್ರವಾದ ವಿಶ್ಲೇಷಣೆಗೊಳಪಡುತ್ತದೆ. ರೊಟ್ಟಿ ಸಂಪಾದಿಸಲು ಮತ್ತು ರೊಟ್ಟಿ ಕಸಿಯಲು ನಡೆಯುತ್ತಿರುವ ಸಂಘರ್ಷದಲ್ಲಿ ವಿಭಜನೆಗೊಂಡ ಪ್ರಜೆಗಳಿರುವ ನಾಡಿನಲ್ಲಿ ಪ್ರಭುತ್ವ ಯಾವ ಪ್ರಜೆಗಳ 'ಪ್ರಜಾಪ್ರಭುತ್ವ' ಆಗಿರುತ್ತದೆ ಎನ್ನುವುದು ಮುಖ್ಯವಾಗುತ್ತದೆ. ಪ್ರಭುತ್ವವನ್ನು ಕೈವಶ ಮಾಡಿಕೊಂಡು ಅದೇ ಪ್ರಭುತ್ವದ ಮೂಲಕ ಸಾಮಾಜಿಕ, ನೈಸರ್ಗಿಕ ಸಂಪತ್ತಿನ ಮೇಲೆ ಒಡೆತನ ಸಾಧಿಸುವುದು ಒಂದು ವರ್ಗದ ಉದ್ದೇಶವಾದರೆ, ಒಂದು ರೊಟ್ಟಿಗಾಗಿ, ಕನಿಷ್ಠ ನೆಮ್ಮದಿಯ ಬದುಕಿಗಾಗಿ ಚಡಪಡಿಸುವ ಬಹುಸಂಖ್ಯಾತ ಜನಸಾಮಾನ್ಯರು ತಾವೇ ಆಯ್ಕೆ ಮಾಡುವ ಪ್ರಭುತ್ವ ತಮ್ಮ ಮೂಲ ಆಶಯಗಳಿಗೆ ಸ್ಪಂದಿಸಬೇಕೆಂದು ನಿರೀಕ್ಷಿಸುತ್ತಾರೆ. ಪ್ರಭುತ್ವವನ್ನು ಕೈವಶ ಮಾಡಿಕೊಳ್ಳಬೇಕಾದರೆ ಅದರ ಬೀಗದ ಕೈ ಇರುವುದು ಪ್ರಜೆಗಳ ಕೈಯ್ಯಲ್ಲಿಯೇ. ಆದ್ದರಿಂದ ಅಷ್ಟರಮಟ್ಟಿಗೆ ಅದನ್ನು ಪ್ರಜಾಪ್ರಭುತ್ವ ಎನ್ನಬಹುದು. ಪ್ರಜೆಗಳ ಒಂದು ಮತದಲ್ಲಿರುವ ಈ ಪ್ರಭುತ್ವದ ಮಂತ್ರದಂಡ ಪಡೆಯಲು ನಡೆಯುತ್ತಿರುವ ನಿರಂತರ ಸಂಘರ್ಷ ಇಂದು ಸಾಮಾಜಿಕ ಸಂಘರ್ಷವಾಗಿ ಪರಿವರ್ತನೆಯಾಗಿದೆ. ಆ ಒಂದು ಮತ ಪಡೆಯಲು ಜನರ ಮೂಲಭೂತ ಸಮಸ್ಯೆಗಳ ಕುರಿತು ಚರ್ಚೆಯಾಗದೆ ಧರ್ಮ, ಜಾತಿಗಳ ಹೆಸರಿನಲ್ಲಿ ಜನರನ್ನೇ ವಿಭಜಿಸಿ, ಸಂಘರ್ಷ ಸೃಷ್ಟಿಸಿ ಪರೋಕ್ಷವಾಗಿ ಪ್ರಭುತ್ವವನ್ನು ಕೈವಶಮಾಡಿಕೊಳ್ಳುವ ಮಾರ್ಗ ಇಂದು ರಾಜಕಾರಣದ ಆಶಯವಾಗಿದೆ. ಅದಕ್ಕಾಗಿ ನಡೆವ ದಾಳಿಗಳು, ಕೊಲೆಗಳು, ಯುದ್ಧಗಳು ಇಂದು ಸಾಮಾಜಿಕ ನೆಮ್ಮದಿಯನ್ನೇ ನಾಶಪಡಿಸಿವೆ. ಇಲ್ಲಿರುವ ಮೂಲ ಪ್ರಶ್ನೆ ಪ್ರಭುತ್ವ ಜನರ ರೊಟ್ಟಿಯ ಪರವಾಗಿರಬೇಕೋ ಅಥವಾ ಒಂದು ವರ್ಗದ ಲೂಟಿಯ ಪರವಾಗಿರಬೇಕೋ ಎನ್ನುವುದು. ಲೂಟಿಯ ಪರವಾಗಿರುವವರನ್ನು ದೇಶಪ್ರೇಮಿಗಳನ್ನಾಗಿ, ರೊಟ್ಟಿಯ ಪರವಾಗಿರುವವರನ್ನು ದೇಶದ್ರೋಹಿಗಳನ್ನಾಗಿ ಬಿಂಬಿಸಿ ಅವರನ್ನು ದೈಹಿಕವಾಗಿ ಇಲ್ಲವಾಗಿಸುವುದು ಫ್ಯಾಸಿಸಂ.

ಫ್ಯಾಸಿಸಂ ಹಲವಾರು ದೇಶಗಳಲ್ಲಿ ಹಲವಾರು ರೂಪದಲ್ಲಿ ಜಾರಿಯಾಗಿದೆ. ಅದರ ರೂಪ ಮೊದಲು ಗೋಚರವಾಗುವುದು ಜನಪರ ಚಿಂತಕರಿಗೆ. ಅದಕ್ಕಾಗಿ ಮೊದಲ ದಾಳಿ ಚಿಂತಕರ ಅಭಿವ್ಯಕ್ತಿಯ ಮೇಲೆಯೇ ನಡೆಯುತ್ತದೆ. ಅವರು ಜನಪರವಾದ, ರೊಟ್ಟಿಯ ಪರವಾದ ಚಿಂತನೆಯನ್ನು ನಿಲ್ಲಿಸದಿದ್ದರೆ ಅವರ ಹತ್ಯೆಯಾಗುತ್ತದೆ. ಇತ್ತೀಚೆಗೆ ಹತ್ಯೆಯಾದ ನಾಲ್ಕು ಹೆಸರುಗಳನ್ನು ನೋಡಿದರೆ ಇದು ವೇದ್ಯವಾಗುತ್ತದೆ. ದಾಭೋಲ್ಕರ್, ಪನ್ಸಾರೆ, ಕಲಬುರ್ಗಿ, ಗೌರಿ ಈ ನಾಲ್ಕೂ ಜನ, ಜನರ ಪರವಾಗಿ ಮಾತನಾಡಿದವರು. ಅವರ ಹತ್ಯೆಯಾಯಿತು. ಇಂದು ದೇಶದಾದ್ಯಂತ ಇಂಥ ಚಿಂತಕರ ಮೇಲೆ ದಾಳಿ, ಬೆದರಿಕೆ, ಅವಮಾನ ನಿರಂತರವಾಗಿ ನಡೆಯುತ್ತಿದೆ. ಎರಡನೇ ಜಾಗತಿಕ ಮಹಾಯುದ್ಧದ ಮುಂಚೆ ಜರ್ಮನಿಯಲ್ಲಿ ಆ ದೇಶದ ಜನರನ್ನು ತನ್ನ ನಿಯಂತ್ರಣದಲ್ಲಿಟ್ಟುಕೊಳ್ಳಲು ಆಳುವ ವರ್ಗ ಜನರ ಮಧ್ಯೆ ಸೃಷ್ಟಿಸಿದ ಸಂಘರ್ಷಗಳು ಮತ್ತು ಪ್ರಭುತ್ವದ ಚಿಂತನೆಗೆ ಎದುರಾದ ಚಿಂತಕರನ್ನು ಸದೆಬಡಿದ ವಿಧಾನಗಳನ್ನು ಗಮನಿಸಿದರೆ ಇಂದು ನಮ್ಮ ದೇಶದಲ್ಲಿ ಅದರಲ್ಲೂ ನಮ್ಮ ರಾಜ್ಯದಲ್ಲಿ ನಡೆಯುತ್ತಿರುವ ಆತಂಕಕಾರಿ ಬೆಳವಣಿಗೆಗಳು ಅರ್ಥವಾಗುತ್ತವೆ. ನಾಲ್ಕು ಜನ ಚಿಂತಕರ ಹತ್ಯೆಯಾದ ತಕ್ಷಣ ಜನಪರ ಚಿಂತಕರು ಹೆದರಿ ತಮ್ಮ ಅಭಿವ್ಯಕ್ತಿಯನ್ನು ನಿಲ್ಲಿಸಲಿಲ್ಲ. ಆದರೆ ಈ ಸಂಘರ್ಷ ಇಲ್ಲಿಗೇ ನಿಲ್ಲುವುದಿಲ್ಲ. ನಮ್ಮ ದೇಶದ ಪ್ರಭುತ್ವ ಇನ್ನೂ ಪೂರ್ತಿಯಾಗಿ ಫ್ಯಾಸಿಸ್ಟ್‌ರ ಕೈವಶವಾಗಿಲ್ಲ. ಅಕಸ್ಮಾತ್ ಹಾಗೇನಾದರೂ ಆದರೆ ಈಗ ಕೆಲವು ಸಂಘಟನೆಗಳ ಹೆಸರಿನಲ್ಲಿ ನಡೆಯುತ್ತಿರುವ ಈ ದಾಳಿ, ಕೊಲೆಗಳು ಅಧಿಕೃತವಾಗಿ ಸರಕಾರಿ ಪೊಲೀಸ್ ಪಡೆಗಳಿಂದಲೇ ನಡೆಯುತ್ತವೆ. ಅದರ ಕೆಲವು ಮಾದರಿಗಳು ಗುಜರಾತ್ ರಾಜ್ಯದಲ್ಲಿ ವರದಿಯಾಗಿವೆ. ಜನಪರ, ಪ್ರಗತಿಪರ ಚಿಂತಕರನ್ನು ನಿಯಂತ್ರಿಸುವ ವಿಧಾನಗಳು ಭಿನ್ನವಾಗಬಹುದು. ಆದರೆ ಫ್ಯಾಸಿಸ್ಟ್‌ರಿಗೆ ಸತ್ಯ ಹೇಳುವ, ಜನಪರವಾಗಿ ಮಾತನಾಡುವ, ಸೌಹಾರ್ದತೆಗಾಗಿ ತುಡಿಯುವ ಚಿಂತಕರೇ ಪ್ರಧಾನ ವೈರಿಗಳಾಗುತ್ತಾರೆ. ಫ್ಯಾಸಿಸ್ಟ್‌ರು ಎಷ್ಟೇ ದಾಳಿ, ದಬ್ಬಾಳಿಕೆ ಮಾಡಿದರೂ ಅದನ್ನೆದುರಿಸಿ ತಮ್ಮ ಜನಪರ ಚಿಂತನೆಗೆ ಬದ್ಧರಾದ ಮಹಾನ್ ಚಿಂತಕರ ಪರಂಪರೆ ದೊಡ್ಡದಿದೆ.

ಫ್ಯಾಸಿಸ್ಟ್‌ರ ಕೆಂಗಣ್ಣಿಗೆ ಗುರಿಯಾಗಿ, ಗಡಿಪಾರಾದರೂ ತಾನು ನಂಬಿದ ಚಿಂತನೆಗೆ ಬದ್ಧನಾಗಿ ಬದುಕಿದ, ವಿಶ್ವದ ರಂಗಭೂಮಿಗೆ ಹೊಸ ತಿರುವು ಕೊಟ್ಟ ಬೆರ್ಟೋಲ್ಟ್ ಬ್ರೆಕ್ಟ್‌ನನ್ನು ಇಂಥ ಸಂದರ್ಭದಲ್ಲಿ ಸ್ಮರಿಸಬೇಕು. ಮೂಲತಃ ಜರ್ಮನ್ ದೇಶದವನಾದ ಬ್ರೆಕ್ಟ್ ಹುಟ್ಟಿದ್ದು ೧೮೯೮ ಫೆಬ್ರವರಿ ೧೦ರಂದು. ನಿಧನರಾದದ್ದು ೧೯೫೬ ಆಗಸ್ಟ್ ೧೪ರಂದು. ಬ್ರೆಕ್ಟ್ ಜನಿಸಿ ಈ ಫೆಬ್ರವರಿಗೆ ೧೨೦ ವರ್ಷವಾಯಿತು. ಬ್ರೆಕ್ಟ್ ಕಮ್ಯುನಿಸ್ಟ್ ಪಕ್ಷದ ಸದಸ್ಯನಾಗಿರಲಿಲ್ಲವಾದರೂ ಮಾರ್ಕ್ಸ್‌ವಾದಿಯಾಗಿದ್ದ. ಕವಿ, ನಾಟಕಕಾರ, ರಂಗಕರ್ಮಿಯಾಗಿದ್ದ ಬ್ರೆಕ್ಟ್ ಚಿಂತನೆ ಜರ್ಮನಿಯ ಅಧಿಕಾರಾರೂಢ ಫ್ಯಾಸಿಸ್ಟ್‌ರಿಗೆ ಸಹ್ಯವಾಗಲಿಲ್ಲ. ವಿಶ್ವಕ್ಕೆ ಎಪಿಕ್ ಥೇಟರ್‌ನ ಮಾದರಿಯನ್ನು ಕೊಟ್ಟ ಈ ಮಹಾನ್ ಚಿಂತಕನನ್ನು ದೇಶದಿಂದಲೇ ಹೊರಹಾಕಲಾಯಿತು. ಆ ದೇಶದ ಬಂಡವಾಳಶಾಹಿ ಪ್ರಭುತ್ವ ಕಾರ್ಲ್ ಮಾರ್ಕ್ಸ್‌ನನ್ನೇ

ದೇಶ ಬಿಟ್ಟು ಓಡಿಸಿತ್ತು. ೧೯೩೩ರಲ್ಲಿ ಜರ್ಮನಿಯ ನಾಝಿಗಳ ಸರಕಾರ ಜನಪರ ಚಿಂತಕರ ಮೇಲೆ ದಾಳಿ, ಬಂಧನ ನಡೆಸಿದಾಗಲೇ ಬ್ರೆಕ್ಟ್ ತಾನು ಹುಟ್ಟಿ ಬೆಳೆದ ದೇಶ ಬಿಡಬೇಕಾಯಿತು. ಸ್ವಿಟ್ಜರ್‌ಲೆಂಡ್, ಅಮೆರಿಕಾ ಹೀಗೆ ವಿವಿಧ ರಾಷ್ಟ್ರಗಳಲ್ಲಿ ವಾಸ ಮಾಡಿದ ಬ್ರೆಕ್ಟ್ ದೇಶಬಿಟ್ಟು ಹೋದನೇ ಹೊರತು ತನ್ನ ಚಿಂತನೆಗಳನ್ನು ಬಿಡಲಿಲ್ಲ. ಲೈಫ್ ಆಫ್ ಗೆಲಿಲಿಯೋ, ಮದರ್ ಕರೇಜ್ ಆ್ಯಂಡ್ ಹರ್ ಚಿಲ್ಡ್ರನ್, ದಿ ಗುಡ್ ಪರ್ಸನ್ ಆಫ್ ಸೇಜುವಾನ್, ದಿ ಕಕೇಶಿಯನ್ ಚಾಕ್ ಸರ್ಕಲ್. ಇಂಥ ಹಲವಾರು ನಾಟಕಗಳನ್ನು ರಚಿಸಿದ. ಬ್ರೆಕ್ಟ್‌ನ ಹೆಚ್ಚಿನ ನಾಟಕಗಳು, ಕವನಗಳು ಕನ್ನಡವನ್ನೂ ಒಳಗೊಂಡಂತೆ ವಿಶ್ವದ ಬಹುತೇಕ ಭಾಷೆಗಳಲ್ಲಿ ಅನುವಾದಗೊಂಡಿವೆ, ಪ್ರಯೋಗ ಕಂಡಿವೆ. ಕನ್ನಡ ರಂಗಭೂಮಿಗೆ ಬ್ರೆಕ್ಟ್‌ನ ನಾಟಕ, ರಂಗಪ್ರಯೋಗ ಹೊಸ ಚಾಲನೆಯನ್ನೇ ಕೊಟ್ಟಿವೆ.

ಫ್ಯಾಸಿಸ್ಟ್ ಹಿಟ್ಲರ್ ಎರಡನೇ ಜಾಗತಿಕ ಮಹಾಯುದ್ಧದಲ್ಲಿ ಸೋತು, ಆತ್ಮಹತ್ಯೆ ಮಾಡಿಕೊಂಡ ನಂತರ ಮತ್ತೆ ಜರ್ಮನಿಗೆ ಹೋಗಿ ಬ್ರೆಕ್ಟ್ ತನ್ನ ಪ್ರೀತಿಯ ರಂಗಭೂಮಿ ಕಟ್ಟುವ ಕೆಲಸ ಮುಂದುವರೆಸಿದ. ಬ್ರೆಕ್ಟ್ ತೀರಿಹೋದ ೬೨ ವರ್ಷಗಳ ನಂತರವೂ ತನ್ನ ಚಿಂತನೆಗಳಿಂದಾಗಿ ಇಂದಿಗೂ ಪ್ರಸ್ತುತನಾಗಿದ್ದಾನೆ. ಫ್ಯಾಸಿಸ್ಟ್‌ರು, ಅವರ ಪ್ರಭುತ್ವ ಜನರ ರೊಟ್ಟಿಯ ಪರವಾಗಿರುವ ಚಿಂತಕರ ಮೇಲೆ ದಾಳಿ ಮಾಡಬಹುದು. ಕೊಲೆ ಮಾಡಬಹುದು. ಆದರೆ ಅವರ ಚಿಂತನೆಗಳನ್ನು ಕೊಲೆ ಮಾಡಲು ಸಾಧ್ಯವಿಲ್ಲ.

ಮೂಢನಂಬಿಕೆಯನ್ನು ವಿರೋಧಿಸಿ ದೊಡ್ಡ ಆಂದೋಲನವನ್ನೇ ನಡೆಸಿದ ಮಹಾರಾಷ್ಟ್ರದ ನರೇಂದ್ರ ದಾಭೋಲ್ಕರ್ ಅವರನ್ನು ಕೊಲ್ಲಲಾಯಿತು. ಆದರೆ ಅವರ ನಿಧನಾನಂತರ ಅವರೇ ರೂಪಿಸಿದ ಮೌಢ್ಯ ನಿಯಂತ್ರಣ ಕಾನೂನನ್ನು ಜಾರಿಗೆ ತರುವುದು ಮಹಾರಾಷ್ಟ್ರ ಸರಕಾರಕ್ಕೆ ಅನಿವಾರ್ಯವಾಯಿತು. ಡಾ॥ ಎಂ. ಎಂ. ಕಲಬುರ್ಗಿಯವರ ಹತ್ಯೆಯ ನಂತರ ಅವರ ಚಿಂತನೆ ಕುರಿತ ಕೃತಿಗಳು ಪ್ರಕಟವಾದವು. ಕರ್ನಾಟಕದಲ್ಲೂ ಮೌಢ್ಯ ನಿಷೇಧ ಕಾನೂನು ಜಾರಿಯಾಯಿತು. ಪನ್ಸಾರೆ, ಗೌರಿ ಪರವಾದ ಅಭಿಪ್ರಾಯಗಳು ಬಲಗೊಂಡವು. ಯಾವುದೇ ಪ್ರಭುತ್ವ ಬಂದರೂ ಜನಪರವಾದ ಚಿಂತನೆಗಳು, ಜನರ ರೊಟ್ಟಿಗಾಗಿ ನಡೆವ ಹೋರಾಟಗಳು ನಿಲ್ಲುವುದಿಲ್ಲ. ಭಾರತದಲ್ಲಿ ಈಗ ಪ್ರಭುತ್ವ ನಿಯಂತ್ರಿಸುತ್ತಿರುವ ಫ್ಯಾಸಿಸ್ಟ್‌ರು ಕೇವಲ ಜನಪರ ಚಿಂತಕರ ಮೇಲೆ ಮಾತ್ರ ದಾಳಿ ಮಾಡುತ್ತಿಲ್ಲ. ದಲಿತರ, ಅಲ್ಪಸಂಖ್ಯಾತರ, ಹಿಂದುಳಿದವರ, ಮಹಿಳೆಯರ ಮೇಲೆಲ್ಲ ದಾಳಿ ನಡೆಸಿದ್ದಾರೆ. ಅದೇ ಸಂದರ್ಭದಲ್ಲಿ ಜನಪರ ಹೋರಾಟಗಳು ತೀವ್ರಗೊಳ್ಳುತ್ತಿವೆ. ಜನಪರ ಚಿಂತಕರು ಎದೆಗುಂದಿಲ್ಲ. ಫ್ಯಾಸಿಸ್ಟ್‌ರ ಯಜಮಾನ ಹಿಟ್ಲರ್ ಆತ್ಮಹತ್ಯೆ ಮಾಡಿಕೊಂಡಿದ್ದು ಫ್ಯಾಸಿಸಂನ ಸೋಲು, ಇತಿಹಾಸದಲ್ಲಿ ಒಂದು ಮಹತ್ವದ ಘಟನೆ. ಹಸಿವಿನ ವಿರುದ್ಧ, ರೊಟ್ಟಿಯ ಪರವಾಗಿ ಹೋರಾಡುವವರು ಪ್ರಭುತ್ವವನ್ನು ಕೈವಶಮಾಡಿಕೊಳ್ಳುವವರೆಗೆ ಈ ಸಂಘರ್ಷ ನಡೆದೇ ಇರುತ್ತದೆ. ಜನರ ಪರವಾಗಿ ಚಿಂತಿಸಿದ ಚಿಂತಕರು ಶಾಶ್ವತವಾಗಿ ಜನರ ಸ್ಮರಣೆಯಲ್ಲಿರುತ್ತಾರೆ.

ಸಿದ್ದನಗೌಡ ಪಾಟೀಲ

## ವ್ಯವಸ್ಥೆಯಲ್ಲಿ ಭ್ರಷ್ಟಾಚಾರ – ಜನ ಜಾಗೃತರಾಗಿರಬೇಕು

ಸುಪ್ರೀಂ ಕೋರ್ಟಿನ ನ್ಯಾಯಾಧೀಶರುಗಳು ನಡೆಸಿದ ಪತ್ರಿಕಾ ಸಮ್ಮೇಳನ ನ್ಯಾಯಾಂಗದಲ್ಲಿ ಎಲ್ಲವೂ ಸರಿಯಿಲ್ಲ, ಅದರಲ್ಲೂ ರಾಜಕೀಯ ಪ್ರಭಾವ ಮೆರೆಯುತ್ತಿದೆ ಎಂಬುದನ್ನೂ ಎತ್ತಿ ತೋರಿಸಿತು. ಭ್ರಷ್ಟಾಚಾರ ಎನ್ನುವುದು ನ್ಯಾಯಾಧೀಶರುಗಳನ್ನು ಬಿಡಲಿಲ್ಲ. ನ್ಯಾಯಾಧೀಶ ದಿನಕರನ್ ಪ್ರಕರಣ ಇದಕ್ಕೆ ಸಾಕ್ಷಿ. ಸ್ವತಂತ್ರ ಭಾರತದಲ್ಲಿ ಭ್ರಷ್ಟಾಚಾರ ಎನ್ನುವುದು ಪ್ರಾರಂಭದಿಂದಲೂ ಇದೆ. ನೆಹರೂ ಸಂಪುಟದ ಹಣಕಾಸಿನ ಸಚಿವ ಟಿ. ಟಿ. ಕೃಷ್ಣಮಾಚಾರಿ ಅಕ್ರಮ ಜರುಗಿಸಿದರೂ ಶಿಕ್ಷೆಗೆ ಅರ್ಹರಾಗಲಿಲ್ಲ, ಅಧಿಕಾರ ಕಳೆದುಕೊಂಡರು, ಅಷ್ಟೆ. ಅಲಹಾಬಾದ್ ಹೈಕೋರ್ಟಿನ ತೀರ್ಪಿನಿಂದ ಕಂಗೆಟ್ಟ ಪ್ರಧಾನಿ ಇಂದಿರಾ ಗಾಂಧಿ ದೇಶದ ಮೇಲೆ ತುರ್ತು ಪರಿಸ್ಥಿತಿ ಹೇರಿ ಕಳಂಕಿತರಾದರು. ಬೋಫೋರ್ಸ್ ಪ್ರಕರಣವು ರಾಜೀವ ಗಾಂಧಿಗೆ ಅಂಟಿಕೊಂಡಿತು ಸಾಕಷ್ಟು ದೀರ್ಘಕಾಲ. ಇವೆಲ್ಲ ಈಗ ಇತಿಹಾಸದ ಪುಟ ಸೇರಿವೆ.

ಸರಕಾರಿ ಅಧಿಕಾರಿಗಳು, ರಾಜಕಾರಣಿಗಳು, ಮಠಾರಿಗಳು ಮೊದಲಾದವರು ನಡೆಸಿರುವ ಭ್ರಷ್ಟಾಚಾರ ಸಾವಿರಾರು. ಅದರಲ್ಲಿ ಸಿಕ್ಕಿಬಿದ್ದಿರುವವರು ಮಾತ್ರ ಕಡಿಮೆ, ಶಿಕ್ಷೆಗೆ ಗುರಿಯಾಗಿರುವವರು ಇನ್ನೂ ಕಮ್ಮಿ, ಜೈಲು ಶಿಕ್ಷೆಗೆ ಗುರಿಯಾಗಿರುವವರು ಮಾತ್ರ ಬೆರಳೆಣಿಕೆಯಷ್ಟು. ಇದರಲ್ಲಿ ರಾಜಕಾರಣಿಗಳೂ ಸೇರಿದ್ದಾರೆ. ವರ್ಷಗಟ್ಟಲೆ ಎಳೆಯುವ ಇಂಥ ಪ್ರಕರಣಗಳಲ್ಲಿ ದೋಷಮುಕ್ತರಾಗುವವರೇ ಹೆಚ್ಚು. ಯುಪಿಎ ಸರಕಾರದ ಬಹುದೊಡ್ಡ ೨ಜಿ ಹಗರಣದ ಎಲ್ಲ ಅಪರಾಧಿಗಳೂ ದೋಷಮುಕ್ತರಾದ್ದು ಇತ್ತೀಚಿನ ಉದಾಹರಣೆ. ಕರ್ನಾಟಕದಲ್ಲಿ ಜೈಲು ಶಿಕ್ಷೆ ಅನುಭವಿಸಿದ್ದ ಯಡಿಯೂರಪ್ಪ ಈಗ ರಾಜ್ಯದ ಮುಖ್ಯಮಂತ್ರಿಯಾಗಲು ಪ್ರಯತ್ನಿಸುತ್ತಿದ್ದಾರೆ. ಬಳ್ಳಾರಿಯ ಅಕ್ರಮ ಗಣಿಗಾರಿಕೆ ಧಣಿ ಜನಾರ್ಧನ ರೆಡ್ಡಿ ಮೊದಲಾದವರು ಆರಾಮವಾಗಿ ಈಗ ಜಾಮೀನಿನ ಮೇಲಿದ್ದು, ದೋಷಮುಕ್ತರಾಗುವುದನ್ನು ಎದುರು ನೋಡುತ್ತಿದ್ದಾರೆ.

ಭಾರತೀಯರಾದ ನಾವು ಲಂಚಗುಳಿತನಕ್ಕೆ ಒಗ್ಗಿಹೋಗಿದ್ದೇವೆ. ಒಂದು ರೀತಿಯಲ್ಲಿ ಅದು ನಮ್ಮ ಜೀವನದ ಭಾಗವಾಗಿಬಿಟ್ಟಂತಾಗಿದೆ. ಭಾರತೀಯ ಜನತಾ ಪಕ್ಷ ಅಧಿಕಾರಕ್ಕೆ ಬಂದದ್ದೂ ಕೂಡ ಭ್ರಷ್ಟಾಚಾರದ ವಿರುದ್ಧ ದನಿ ಎತ್ತಿಯೇ. ಮೋದಿ ಅಧಿಕಾರಕ್ಕೆ ಬಂದಮೇಲೆ ಅದು ತಲೆಕೆಳಗಾಗುತ್ತಿದೆ. ಚುನಾವಣೆಯ ಕಾಲದಲ್ಲಿ ನೀಡಿದ ಆಶ್ವಾಸನೆಗಳೆಲ್ಲ ಮೂಲೆಗುಂಪಾಗಿವೆ. ಇತರ ವಿಷಯಗಳಲ್ಲಿ, ಮುಖ್ಯವಾಗಿ ಅಲ್ಪಸಂಖ್ಯಾತರಾಗಿರುವವರ ಮೇಲೆರಗುವುದರಲ್ಲಿ ಅಸಹಿಷ್ಣುತೆ ತಾಂಡವವಾಡುತ್ತಿದ್ದರೂ, ಭ್ರಷ್ಟತೆಯ ಬಗ್ಗೆ ಸಹಿಷ್ಣುತೆ ಇದೆ. ಭಾಜಪದ ಅಧ್ಯಕ್ಷ ಅಮಿತ್ ಷಾ ಪ್ರಕರಣವೇ ಅದಕ್ಕೆ ಉದಾಹರಣೆ. ಷಹಾಬುದ್ದೀನ್ ಎನ್‌ಕೌಂಟರ್ ಪ್ರಕರಣ, ನ್ಯಾಯಮೂರ್ತಿ ಲೋಯಾ ಅಸಹಜ ಸಾವಿನ ಪ್ರಕರಣ



ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



■ ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ₹ ೨೦/- |
| ವಾರ್ಷಿಕ ಚಂದಾ | ₹ ೨೫೦/- |
| ಮೂರು ವರ್ಷಕ್ಕೆ | ₹ ೫೦೦/- |

■ ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ , ಗಾಂಧಿನಗರ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೫೧೩೮೨

ಕೆಂಪೇಗೌಡ ರಸ್ತೆ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೦೩೧೦೬

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೧೦೦೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೯೪೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨-೨೨೪೩೦೨

ಇವರ ಬೆನ್ನೇರಿದೆ. ಇದರಿಂದ ದೋಷಮುಕ್ತರಾಗಲು ಅವರು ಹರಸಾಹಸ ಮಾಡುತ್ತಿದ್ದಾರೆ. ಅಮಿತ್ ಷಾ ಪುತ್ರ ಜೇ ಷಾ ವ್ಯವಹಾರಗಳು ದಿಢೀರ್ ಎಂದು ಶ್ರೀಮಂತವಾಗಿವೆ. ಮೋದಿ ಸರಕಾರ ಬಂದಮೇಲೆ ಈತನ ಟೆಂಪಲ್ ಎಂಟರ್‌ಪ್ರೈಸಸ್ ಪ್ರೈವೇಟ್ ಲಿಮಿಟೆಡ್‌ನ ಸಂಪಾದನೆ ೧೬,೦೦೦ ಪಟ್ಟು ಏರಿದೆ. ಅದನ್ನು ಹಾಗೇ ಮುಚ್ಚಿಹಾಕುವುದರಲ್ಲಿ ಭಾಜಪ ಸಫಲವಾಗಿದೆ.

ಅಧಿಕೃತ ಅಂಕಿಅಂಶಗಳ ಪ್ರಕಾರ ೨೦೧೫ರಲ್ಲಿ ಭ್ರಷ್ಟಾಚಾರದ ವಿಚಾರಣೆಯ ಸಂಖ್ಯೆ ೬,೬೬೩, ೨೦೧೬ರಲ್ಲಿ ೬,೫೦೨, ೨೦೧೭ರ ಜೂನ್‌ವರೆಗೆ ೬,೪೧೪ ಆಗಿತ್ತು. ಆದರೆ ಶಿಕ್ಷೆಗೆ ಅರ್ಹರಾದವರ ಸಂಖ್ಯೆ ಕ್ರಮವಾಗಿ ೪೩೪,೫೦೩,೧೯೯ (ಜೂನ್ ೨೦೧೭ರವರೆಗೆ). ಇದು ಸಚಿವರು ಪಾರ್ಲಿಮೆಂಟಿನಲ್ಲಿ ನೀಡಿದ ಅಂಕಿಅಂಶಗಳು. ರಾಜಕಾರಣಿಗಳು, ಅಧಿಕಾರಿಗಳು ಇಂಥ ಭ್ರಷ್ಟಾಚಾರದ ಪ್ರಕರಣಗಳಲ್ಲಿ ಬಚಾವಾಗುವುದಕ್ಕೆ ದಾರಿ ಕಂಡುಕೊಂಡಿರುತ್ತಾರೆ. ವಕೀಲರ ದಂಡೇ ಇರುತ್ತದೆ ಅವರ ಬೆಂಬಲಕ್ಕೆ. ಎಲ್ಲವನ್ನೂ ಕ್ರಮಬದ್ಧವಾಗಿಸಿ ಸಾರಿಸಿಬಿಡುತ್ತಾರೆ. ಕೆಳಗಿನಿಂದ ಮೇಲಿನವರೆಗೆ, ಎಂದರೆ ಸರಕಾರದ ಕನಿಷ್ಠ ಪೇದೆಯಿಂದ ಹಿಡಿದು ಮಂತ್ರಿಯವರೆಗೆ ಲಂಚಗುಳಿತನ ಹರಡಿಕೊಂಡಿದೆ. ಕೈಬೆಚ್ಚಗೆ ಮಾಡದೆ ಸರಕಾರಿ ಕಚೇರಿಯಲ್ಲಿ ಯಾವ ಅರ್ಜಿಯು ಮುಂದೆ ಸಾಗುವುದಿಲ್ಲ. ಇಂಥ ಪರಿಸ್ಥಿತಿಯಿಂದ ಬಿಡುಗಡೆ ಎಂದು? ಜನ ಜಾಗೃತರಾಗಿ, ಸಂಘಟಿತರಾಗುವವರೆಗೆ ಇದು ತಾಂಡವವಾಡುತ್ತಿರುತ್ತದೆ. ಇಡೀ ವ್ಯವಸ್ಥೆಯನ್ನೇ ಬದಲಿಸುವಂಥ ಕ್ರಾಂತಿಕಾರಿ ಪರ್ಯಾಯ ವ್ಯವಸ್ಥೆಯ ಸ್ಥಾಪನೆಯಾಗುವವರೆಗೆ ಇದರಿಂದ ಮುಕ್ತಿ ಇಲ್ಲ.

---

*(ಈ ತಿಂಗಳು ೩ನೇ ಪುಟದಿಂದ...)*

ಮತ್ತು ಮಹಾರಾಷ್ಟ್ರಗಳು ಉಪಯೋಗಿಸಿಕೊಳ್ಳುತ್ತಿವೆ, ಹಂಚಿಕೊಳ್ಳುತ್ತಿವೆ. ಈ ನದಿಯ ನೀರಿನ ಹಂಚಿಕೆ ವಿವಾದ ನ್ಯಾಯಾಧಿಕರಣದ ಮುಂದೆ ಇದೆ. ಫೆಬ್ರವರಿ ತಿಂಗಳಲ್ಲಿ ಅಂತಿಮ ವಿಚಾರಣೆ ನಡೆಯುವ ಸಾಧ್ಯತೆ ಇದೆ. ಆದರೆ ಕರ್ನಾಟಕದಲ್ಲಿ ಚುನಾವಣೆಗಳು ಸಮೀಪಿಸುತ್ತಿರುವುದರಿಂದ ವಿವಾದ ಮುಗಿಲು ಮುಟ್ಟುತ್ತಿದೆ. ಮುಖ್ಯವಾಗಿ ಗೋವಾ ಮತ್ತು ಕರ್ನಾಟಕ ರಾಜ್ಯಗಳ ರಾಜಕೀಯ ನಾಯಕರುಗಳು ಬಾಯಿಗೆ ಬಂದಂತೆ ಮಾತನಾಡತೊಡಗಿದ್ದಾರೆ. ಹಿಂಬಾಗಿಲಿನಿಂದ ಅಧಿಕಾರಕ್ಕೇರಿದ ಗೋವಾ ಮುಖ್ಯಮಂತ್ರಿ ಮನೋಹರ ಪರಿಕ್ಕರ್‌ಗೆ ಅಧಿಕಾರ ಉಳಿಸಿಕೊಳ್ಳುವ ತವಕ, ಕರ್ನಾಟಕದ ಮುಖ್ಯಮಂತ್ರಿ ಸಿದ್ದರಾಮಯ್ಯಗೆ ಮತ್ತೆ ಕಾಂಗ್ರೆಸ್ಸನ್ನು ಅಧಿಕಾರಕ್ಕೆ ತರುವ ಹಂಬಲ, ಕಾಂಗ್ರೆಸ್ ಮುಕ್ತ ಕರ್ನಾಟಕವಾಗಿಸಿ, ದಕ್ಷಿಣ ಭಾರತದಲ್ಲಿ ನೆಲೆಯೂರುವುದಕ್ಕೆ ಭಾಜಪದ ಕನಸು. ಹಾಗಾಗಿ ವಿವಾದಗಳನ್ನು ಸೃಷ್ಟಿಸಿ ಪ್ರಯೋಜನ ಪಡೆದುಕೊಳ್ಳುವ ರಾಜಕೀಯ.

ಕರ್ನಾಟಕ ಕಳಸಾ–ಬಂಡೂರಿ ನಾಲೆ ನಿರ್ಮಾಣ ಯೋಜನೆಗೆ ಮುಂದಾದದ್ದೆ ವಿವಾದಕ್ಕೆ ಕಾರಣ. ಮಹದಾಯಿ ನದಿಗೆ ಹರಿಯುವ ಉಪನದಿಯ ನೀರನ್ನು ತಡೆಗಟ್ಟಿ ಮಲಪ್ರಭಾ ನದಿಗೆ ಬಿಡುವ ಯೋಜನೆಯೇ ಕಳಸಾ–ಬಂಡೂರಿ ನಾಲಾ ಯೋಜನೆ. ಇದಕ್ಕೆ ಗೋವಾದ ತೀವ್ರವಾದ ವಿರೋಧ. ವಿವಾದ ನ್ಯಾಯಾಧಿಕರಣದ ಮುಂದಿದೆ. ಉತ್ತರ ಕರ್ನಾಟಕದ ಪಶ್ಚಿಮ ಘಟ್ಟದ ಕಾನನಗಳಲ್ಲಿನ ದೇವಗನ್ ಎಂಬಲ್ಲಿ ಹುಟ್ಟಿ ೮೦ ಕಿ. ಮೀ. ಹರಿಯುವ ನದಿ ಮಹದಾಯಿ. ಗೋವಾದ ಮಟ್ಟಿಗೆ ಅದು ಜೀವನದಿ. ಈ ನೀರಿನ ಬಳಕೆ ಕುರಿತ ವಿವಾದ ನಲವತ್ತು ವರ್ಷ ಹಳೆಯದು. ೨೦೦೨ರಲ್ಲಿ ಕರ್ನಾಟಕ ಕಳಸಾ–ಬಂಡೂರಿ ನಾಲಾ ಯೋಜನೆಯನ್ನು ಕುಡಿಯುವ ನೀರಿಗಾಗಿ ರೂಪಿಸಿತು. ವಾಜಪೇಯಿ ನೇತೃತ್ವದ ಎನ್‌ಡಿಎ ಸರಕಾರ ಕರ್ನಾಟಕದ ಯೋಜನೆಗೆ ಅನುಮೋದನೆ ನೀಡಿತ್ತು. ಆದರೆ ಗೋವಾ ಪ್ರತಿಭಟಿಸಿದ್ದರಿಂದ ವಿವಾದ ಸೃಷ್ಟಿಯಾಯಿತು. ೨೦೧೦ರಲ್ಲಿ ಕೇಂದ್ರ ಸರಕಾರ ಮಹದಾಯಿ ನ್ಯಾಯಾಧಿಕರಣ ರಚಿಸಿತು. ೨೦೧೮ರ ಆಗಸ್ಟ್ ತಿಂಗಳಲ್ಲಿ ಈ ನ್ಯಾಯಾಧಿಕರಣದ ಅವಧಿ ಅಂತ್ಯಗೊಳ್ಳಲಿದೆ. ಅಷ್ಟರಲ್ಲಿ ತೀರ್ಪು ಹೊರಬೀಳಬೇಕು.

✶ ✶ ✶

ಎಲ್ಲ ಶಿಷ್ಟಾಚಾರಗಳನ್ನು ಬದಿಗೊತ್ತಿ ಪ್ರಧಾನ ಮಂತ್ರಿ ವಿಮಾನ ನಿಲ್ದಾಣಕ್ಕೆ ಹೋಗಿ ಅತಿಥಿಯನ್ನು ಆತ್ಮೀಯವಾಗಿ ಬರಮಾಡಿಕೊಳ್ಳುವುದು ಅಪರೂಪ ವೇನಲ್ಲ. ಅದು ಸಂಬಂಧಪಟ್ಟ ದೇಶಗಳ ಮಧ್ಯೆ ಇರುವ ಸ್ನೇಹದ ಸೂಚಕ. ಅಂಥ ಸಂಬಂಧವನ್ನು ಹುಟ್ಟುಹಾಕಿದ್ದಾರೆ ಪ್ರಧಾನಿ ಮೋದಿ ಇಸ್ರೇಲಿನೊಂದಿಗೆ. ಇಸ್ರೇಲಿನ ಪ್ರಧಾನ ಮಂತ್ರಿ ನೆತಾನ್ಯಹು ಭಾರತಕ್ಕೆ ಆರು ದಿನಗಳ ಪ್ರವಾಸಕ್ಕೆ ಆಗಮಿಸಿದ್ದರು. ಅವರನ್ನು ಪ್ರಧಾನಿ ಮೋದಿ ವಿಮಾನ ನಿಲ್ದಾಣಕ್ಕೆ ಹೋಗಿ ಅಪ್ಪಿಕೊಂಡು ಸ್ವಾಗತಿಸಿದರು. ಮೋದಿ ಇಸ್ರೇಲಿಗೆ ಹೋದಾಗ ನೆತಾನ್ಯಹು ಅದೇ ರೀತಿ ವಿಮಾನ ನಿಲ್ದಾಣದಲ್ಲಿ ಸ್ವಾಗತ ನೀಡಿದ್ದರು. ಭಾರತದ ಪ್ರಧಾನಿಯಾಗಿ ಮೋದಿ ಇಸ್ರೇಲಿಗೆ ನೀಡಿದ ಮೊದಲ ಭೇಟಿ ಅದು. ಇಸ್ರೇಲಿನೊಂದಿಗೆ ರಾಯಭಾರಿ ಸಂಬಂಧಗಳನ್ನು ಸ್ಥಾಪಿಸಿತ್ತು, ಸಂಬಂಧ ಬೆಳೆಸಿದ್ದು ಎನ್‌ಡಿಎ ಸರಕಾರ ಅಧಿಕಾರಕ್ಕೆ ಬಂದಮೇಲೆ. ಅದುವರೆಗೆ ಭಾರತ ಪ್ಯಾಲೆಸ್ಟೈನ್ ವಿಮೋಚನಾ ಹೋರಾಟ ಸಂಸ್ಥೆಯೊಂದಿಗೆ ಮಾತ್ರ ಸಂಬಂಧ ಹೊಂದಿದ್ದು, ಅದಕ್ಕೆ ರಾಯಭಾರಿ ಸ್ಥಾನಮಾನ ನೀಡಿತ್ತು, ವಿಶ್ವಸಂಸ್ಥೆ ಕೂಡ ಈ ಸಂಸ್ಥೆಗೆ ಮನ್ನಣೆ ನೀಡಿ ಪ್ರಾತಿನಿಧ್ಯ ನೀಡಿದೆ. ಪ್ಯಾಲೆಸ್ಟೈನ್ ವಿಮೋಚನಾ ಸಂಸ್ಥೆ ಅಲಿಪ್ತ ಚಳವಳಿಯ ಪೂರ್ಣ ಸದಸ್ಯತ್ವ ಪಡೆದುಕೊಂಡಿತ್ತು, ಅದರ ಕಾರ್ಯಗಳಲ್ಲಿ ಸಕ್ರಿಯವಾಗಿ ತೊಡಗಿಕೊಂಡಿತ್ತು.

ಈಚೆಗೆ ಅಮೆರಿಕದ ಅಧ್ಯಕ್ಷ ಡೊನಾಲ್ಡ್ ಟ್ರಂಪ್ ಅಮೆರಿಕದ ರಾಯಭಾರಿ ಕಚೇರಿಯನ್ನು ಟೆಲ್‌ಅವಿವ್ (ಇಸ್ರೇಲಿನ ರಾಜಧಾನಿ)ನಿಂದ ಜೆರೂಸಲೆಮ್‌ಗೆ ವರ್ಗಾಯಿಸುವ ನಿರ್ಧಾರ ಪ್ರಕಟಿಸಿ ಹೊಸ ವಿವಾದ ಹುಟ್ಟುಹಾಕಿದರು. ವಿಶ್ವಸಂಸ್ಥೆಯ ಭದ್ರತಾ ಮಂಡಳಿ ಯಲ್ಲಿ ಈ ನಿರ್ಧಾರ ವಿರೋಧಿಸಿ ಮಂಡನೆಯಾದ ನಿರ್ಣಯವನ್ನು ವೀಟೋ ಚಲಾಯಿಸಿ ತಡೆಯಿತು. ಆದರೆ ಮಹಾಸಭೆ ಅತ್ಯಧಿಕ ಬಹುಮತದಿಂದ ನಿರ್ಣಯ ಅನುಮೋದಿಸಿತು. ಇಡೀ ಮಧ್ಯ ಏಷಿಯಾದ ರಾಷ್ಟ್ರಗಳಲ್ಲಿ ಟ್ರಂಪ್ ನಿರ್ಧಾರದ ವಿರುದ್ಧ ಕಿಚ್ಚು ಹಬ್ಬಿತು. ಈ ಹಿನ್ನೆಲೆಯಲ್ಲಿ ಇಸ್ರೇಲಿ ಪ್ರಧಾನಿ ಭೇಟಿ ನೀಡಿದ್ದು ಕುತೂಹಲಕಾರಿ. ಭಾಜಪದ ಮಟ್ಟಿಗೆ ಇಸ್ರೇಲಿನೊಂದಿಗೆ ಸಂಬಂಧದ ಬೆಸುಗೆ ಹಿಂದುತ್ವದ ಪ್ರತಿಪಾದನೆ, ಮುಸ್ಲಿಂ ರಾಷ್ಟ್ರಗಳಿಗೆ ವಿರೋಧ. ಆರು ದಿನಗಳ ಪ್ರವಾಸ ಕಾಲದಲ್ಲಿ ಹಲವು ಒಪ್ಪಂದಗಳಿಗೆ ಸಹಿ ಹಾಕಲಾಗಿದೆ. ೧೩೦ ಮಂದಿ ನಿಯೋಗವನ್ನು ನೆತಾನ್ಯಹು ಕರೆತಂದಿದ್ದರು. ರಕ್ಷಣಾ ಸಾಮಗ್ರಿಗಳ ವಿಚಾರದಲ್ಲಿ ಪಾಲುಗಾರಿಕೆ ಬಹುಮುಖ್ಯವಾದ್ದು. ಮೋದಿ ಸರಕಾರ ಇನ್ನು ಪ್ಯಾಲೆಸ್ಟೈನ್ ಅರಬ್ಬರ ಹೋರಾಟಕ್ಕೆ ಬೆಂಬಲವನ್ನು ಕೈಬಿಟ್ಟಂತೆಯೆ.

✶ ✶ ✶

ಕೊನೆಗೂ 'ಪದ್ಮಾವತಿ' ಚಿತ್ರ 'ಪದ್ಮಾವತ್' ಆಗಿ ಹೊಸ ಅವತಾರದಲ್ಲಿ ತೆರೆಕಾಣುತ್ತಿದೆ. ಆದರೆ ಅದಕ್ಕೆ ವಿರೋಧ ಮಾತ್ರ ಹಿಂದುತ್ವವಾದಿಗಳ ಕುಮ್ಮಕ್ಕಿನಿಂದ ಮುಂದುವರಿಯುತ್ತಿದೆ. ಸೆಂಟ್ರಲ್ ಫಿಲ್ಮ್ ಸೆನ್ಸಾರ್ ಬೋರ್ಡ್ ಚಿತ್ರ ಬಿಡುಗಡೆಗೆ ಪರವಾನಗಿ ನೀಡಿದೆ. ರಾಜಸ್ತಾನ ಸರಕಾರ ಮತ್ತು ಗುಜರಾತ್ ಸರಕಾರಗಳು 'ಪದ್ಮಾವತ್' ಚಿತ್ರದ ಪ್ರದರ್ಶನಕ್ಕೆ ಅವಕಾಶ ನೀಡುವುದಿಲ್ಲ ಎಂದು ಹೇಳಿವೆ. ಮುಂದೆ ಚಿತ್ರ ತಯಾರಕರು ಹಿಂದೂ ಸಂಘಟನೆಗಳ ಪೂರ್ವಾನುಮತ ಪಡೆದು ಚಿತ್ರ ತಯಾರಿಸಬೇಕಾಗುವುದೇನೋ. ಅಂತೂ ಹಿಂದುತ್ವ ವಾದಿಗಳ ಮುಂದೆ ಅಭಿವ್ಯಕ್ತಿ ಸ್ವಾತಂತ್ರ್ಯ ಅತಂತ್ರ.

✶ ✶ ✶

ಜನವರಿ ೧೪ರಂದು ಉತ್ತರ ಪ್ರದೇಶದ ಭಾರತೀಯ ಜನತಾ ಪಕ್ಷದ ಶಾಸಕ ಸುರೇಂದ್ರ ಸಿಂಗ್ ಒಬ್ಬ ಉಗ್ರವಾದಿಯಂತೆ ಪ್ರಶ್ನಾರ್ಹವಾದ ಹೇಳಿಕೆ ನೀಡಿ ನಮ್ಮ ದೇಶದ ಅಲ್ಪಸಂಖ್ಯಾತ ಸಮುದಾಯಗಳಲ್ಲಿ ಒಂದಾದ ಮುಸಲ್ಮಾನ ಬಣಕ್ಕೆ ಭಾರಿ ಬೆದರಿಕೆಯನ್ನೊಡ್ಡಿದ್ದಾರೆ. "ಭಾರತವು ಒಮ್ಮೆ 'ಹಿಂದೂ ರಾಷ್ಟ್ರ' ಆದ ನಂತರ ಹಿಂದೂ ಸಂಸ್ಕೃತಿಯನ್ನು ಅಂತರ್ಗತಗೊಳಿಸಿಕೊಳ್ಳುವ ಮುಸ್ಲಿಮರು ಮಾತ್ರ ಈ ದೇಶದಲ್ಲಿ ಉಳಿಯಲು ಸಾಧ್ಯ... ಮುಸ್ಲಿಮರಲ್ಲೂ ಕೆಲವರು ದೇಶಭಕ್ತರಿದ್ದಾರೆ... ಆರ್.ಎಸ್.ಎಸ್. ಸ್ಥಾಪನೆಯಾಗಿ ೨೦೨೫ಕ್ಕೆ ನೂರು ವರ್ಷ ಪೂರೈಸುತ್ತದೆ. ಅದಕ್ಕೂ ಒಂದು ವರ್ಷ ಮುನ್ನವೇ, ಅಂದರೆ ೨೦೨೪ರ ವೇಳೆಗೆ, ಭಾರತವು ಹಿಂದೂ ರಾಷ್ಟ್ರವಾಗಲಿದೆ." ಅವರ ಹೇಳಿಕೆಯ ಒಂದು ಭಾಗ ಇದು. ಇಷ್ಟು ಪ್ರಬುದ್ಧರೂ ಜ್ಯೋತಿಷ್ಯ ಪ್ರವೀಣರೂ ಆದ ಶಾಸಕರನ್ನು ಹೊಂದಿರುವ ಅವರ ಪಕ್ಷವೇ ಧನ್ಯ. ಅವರ ಪಕ್ಷದ ಮುಂದಿನ ಕಾರ್ಯಸೂಚಿಯನ್ನವರು ಹೊರಗೆಡಹಿದ್ದಾರೆ. "ಈ ದೇಶದಲ್ಲಿ ಉಳಿಯಲು" ಸಾಧ್ಯವಾಗದಂತಹ ಸನ್ನಿವೇಶವನ್ನು ರಚಿಸುವುದು ತಮ್ಮ ಪಕ್ಷದ ಉದ್ದೇಶವೆಂದು ಮುಸಲ್ಮಾನರಿಗೆ ಎಚ್ಚರಿಕೆ ನೀಡುವ ಕೃಪೆ ತೋರಿದ್ದಾರೆ ಈ ಶಾಸಕ. ದೇಶದ ಜನರನ್ನು ಉಚ್ಚಾಟಿಸಲು ಸಂವಿಧಾನವು ಅವರ ಪಕ್ಷಕ್ಕೆ

ಅವಕಾಶ ನೀಡಿದೆಯೇ, ಇಲ್ಲದಿದ್ದರೆ ಅವರ ಪಕ್ಷವು ಸಂವಿಧಾನವನ್ನು ಮಾರ್ಪಡಿಸಲು ಮುನ್ನುಗ್ಗುತ್ತದೆಯೆ? ಅಥವಾ, ಸಂವಿಧಾನವನ್ನು ನಗಣ್ಯವಾಗಿಸಿ ಅಯೋಧ್ಯೆಯಲ್ಲಿ ಮಸೀದಿಯನ್ನು ಉರುಳಿಸಿದಂತೆ ಈ ಜನರ ರುಂಡಗಳನ್ನು ಉರುಳಿಸಲು ತರಬೇತಿ ನೀಡುತ್ತದೆಯೇ? ಸಂವಿಧಾನದಲ್ಲಿ ರಾಷ್ಟ್ರ, ರಾಷ್ಟ್ರೀಯ ಸಂಹಿತೆ ಮತ್ತು ರಾಷ್ಟ್ರೀಯತೆಯ ಕಲ್ಪನೆಗಳನ್ನು ಗಾಳಿಗೆ ತೂರಿ ಪ್ರಜೆಗಳನ್ನು ಹೊರಹಾಕುತ್ತೇವೆನ್ನುವುದು ಕೆಟ್ಟ ಸಂಸ್ಕೃತಿ ಮತ್ತು ಬೇಜವಾಬ್ದಾರಿತನ. "ಪಾಕಿಸ್ತಾನಕ್ಕೆ ಹೋಗಿ ಹಾಳಾಗಿ, ಇಲ್ಲವೇ ಸ್ಮಶಾನಕ್ಕೆ ಹೋಗಿ" ಎಂಬ ಘೋಷಣೆಯನ್ನು ಶಾಸಕ ಸಿಂಗ್ ಅವರ ಪಕ್ಷ ಈಗಾಗಲೇ ಬಹಳ ವರ್ಷಗಳಿಂದ ಬಳಸುತ್ತಿದೆ. ಬೇರೊಂದು ದೇಶಕ್ಕೆ ಹೋಗಲು ಯಾರಿಗೇ ಆದರೂ ನಿರ್ದಿಷ್ಟ ಪರವಾನಗಿ ಬೇಕು. ಅದು ದೊರೆಯದಿದ್ದರೆ ನಮ್ಮ ದೇಶದ ಭೂಭಾಗವನ್ನು ಎಲ್ಲಾದರೂ ನಿರ್ವಸಿತರಿಗೆ ಬಿಟ್ಟು ಕೊಡುವ ಪ್ರಸಂಗ ಬಂದೊದಗಬಹುದು. ದೇಶವನ್ನು ತುಂಡರಿಸಲು ಸಿಂಗ್ ಪಕ್ಷವು ಉದ್ದೇಶಿಸಿದೆಯೆ?

ಇನ್ನೊಂದು ವಿಷಯವಿದೆ : "ಹಿಂದೂ ಸಂಸ್ಕೃತಿಯನ್ನು ಅಂತರ್ಗತಗೊಳಿಸಿಕೊಳ್ಳುವುದು" ಎಂದರೇನು? ಸಿಂಗ್ ಮಹಾಶಯ ಆ ಸಂಸ್ಕೃತಿಯನ್ನು ಸಮಗ್ರವಾಗಿ ವ್ಯಾಖ್ಯಾನಿಸಿದ್ದಾರೆಯೆ? ವಿಶ್ವಕ್ಕೆ ತಿಳಿದಿರುವಂತೆ ನಮ್ಮದು ಬಹುಮುಖೀ ಸಂಸ್ಕೃತಿ. ವೇದವು ಅಪೌರುಷೇಯ ಎಂದು ಹೇಳುವವರಿಂದ ಹಿಡಿದು ದೇವರಲ್ಲಿ ನಂಬಿಕೆ ಎನ್ನುವುದು ಮಹಾಮೋಸ ಎನ್ನುವವರವರೆಗೆ ನಮ್ಮ ಪರಂಪರೆಯಲ್ಲಿ ನೂರಾರು ಚಿಂತನೆಗಳಿವೆ, ಆಚರಣೆಗಳಿವೆ, ಆಚರಣೆಗೆ ವಿರೋಧಗಳಿವೆ. ನಮ್ಮ ದೇಶದ ಬುಡಕಟ್ಟು ಜನರು ತಾವು ಹಿಂದೂಗಳೆಂದು ಭಾವಿಸಿಲ್ಲ. ಈಗೀಗ ಲಿಂಗಾಯತರು ಸಹ ತಾವು ಹಿಂದೂಗಳಲ್ಲ ಎಂದು ಹೇಳಲಾರಂಭಿಸಿದ್ದಾರೆ. ಅವರು ಅಂತರ್ಗತಗೊಳಿಸಿಕೊಳ್ಳುವುದು ತಥಾಕಥಿತ ಹಿಂದೂ ಸಂಸ್ಕೃತಿಯನ್ನಲ್ಲ. ಆಗ ಅವರನ್ನು ಎಲ್ಲಿಗೆ ಓಡಿಸಬೇಕು? ದೇಶದ ಸಮಗ್ರತೆಗೆ ಭಂಗ ತರುವ ಮಾತನ್ನು ಶಾಸಕ ಸಿಂಗ್ ಆಡಿದ್ದಾರೆ. ಇಂತಹ ದುಷ್ಪ್ರಜೆಗಳ ನಡುವೆ ಪ್ರಜೆಗಳಾದ ನಾವೆಲ್ಲಾ ಇದ್ದೇವಲ್ಲ ಎಂದು ಸಂಕೋಚವಾಗುತ್ತದೆ. ಭಾಜಪವು ತಮ್ಮ ಪಕ್ಷದ ಶಾಸಕನ ಮಾತನ್ನು ಅಲ್ಲಗಳೆದಿಲ್ಲ, ನಿರಾಕರಿಸಿಲ್ಲ ಎಂಬುದನ್ನು ಗಮನಿಸಬೇಕು. ಸಂವಿಧಾನವನ್ನು ಮಾನ್ಯ ಮಾಡದ ಜನರ ಪಕ್ಷಕ್ಕೆ ದೇಶದ ಚುನಾವಣೆಗಳಲ್ಲಿ ಸ್ಪರ್ಧಿಸಲು ಅವಕಾಶ ನೀಡಕೂಡದು. ಸಂವಿಧಾನದ ಕೆಲವು ವಿಚಾರಗಳ ಬಗ್ಗೆ ತಕರಾರಿದ್ದರೆ ಅಡ್ಡಿಯಿಲ್ಲ, ಆದರೆ ಅದರ ಮೂಲಭೂತ ಅಂಶಗಳನ್ನು ಸಾರಾಸಗಟಾಗಿ ತಳ್ಳಿಹಾಕುವವರನ್ನು ದೇಶದ್ರೋಹಿಗಳು ಎನ್ನಬೇಕು. ಅದು ಬಿಟ್ಟು ಯಾರೋ ವಿದ್ಯಾರ್ಥಿಗಳನ್ನು ದೇಶದ್ರೋಹಿಗಳೆಂದು ಭಾಜಪ ಪದೇ ಪದೇ ಹೆಸರಿಸುತ್ತಿರುತ್ತದಲ್ಲಾ, ಏನೆನ್ನೋಣ! ನಮ್ಮ ದೇಶದ ಕೆಲವು ಜನರು ಈಗಲೇ ವಿಶ್ವಸಂಸ್ಥೆಗೆ ದೂರು ಸಲ್ಲಿಸುವ ಯತ್ನದಲ್ಲಿ ಮಗ್ನರಾಗಬೇಕೆ? ರೋಹಿಂಗ್ಯಾಗಳಿಗೆ ನಮ್ಮ ದೇಶವು ಪ್ರವೇಶ ನೀಡಲಿಲ್ಲ, ನಮ್ಮ ದೇಶದ ಭವಿಷ್ಯದ 'ರೋಹಿಂಗ್ಯಾ'ಗಳಿಗೆ ಯಾವ ದೇಶವು ಆಶ್ರಯ ನೀಡುತ್ತದೆಯೆಂದು ಭಾಜಪ ನಿರೀಕ್ಷಿಸುತ್ತದೆ?

* * *

ಶ್ರೀ. ಪ್ರಕಾಶ ರೈ ಅವರು ಸಿರ್ಸಿಯಲ್ಲಿ ಉಪನ್ಯಾಸ ನೀಡಿದ್ದ ಸ್ಥಳವನ್ನು ಭಾಜಪದ ಕಾರ್ಯಕರ್ತರು ಹಸುವಿನ ಗಂಜಳ ಹಾಕಿ ತೊಳೆದು ಶುದ್ಧಗೊಳಿಸಿದರು ಎಂದು ವರದಿಯಾಗಿದೆ. ರೈ ಅವರು ಊರಿನಲ್ಲಿ ಓಡಾಡಿದ್ದ ಸ್ಥಳಗಳನ್ನೂ ಹಾಗೇ ಗಂಜಳ ಪ್ರೋಕ್ಷಿಸಿ ಶುದ್ಧಗೊಳಿಸಿದ್ದರೆ ಒಳ್ಳೆಯದಿರುತ್ತಿತ್ತು. ಗಂಜಳ ಹಾಕಿ ತೊಳೆದ ಮೇಲೆ ಮತ್ತೆ ನೀರಿನಲ್ಲಿ ತೊಳೆಯಬೇಕಾದೀತು ಎಂಬ ಕಾರಣಕ್ಕೆ ಅದನ್ನು ಮಾಡಿಲ್ಲ. ಅಷ್ಟು ಗಂಜಳ ಸಂಗ್ರಹಿಸುವ ಕಾರ್ಯವನ್ನು ನೆರವೇರಿಸುವುದೂ ಸ್ವಲ್ಪ ಮುಜುಗರದ ವಿಷಯವಿರಬೇಕು. ಗಂಜಳವನ್ನೋ ಅಥವಾ ಅಷ್ಟೇ ಪರಿಣಾಮಕಾರಿಯಾದ ಬೇರಾವುದಾದರೂ ಗೋಮಾತೆಯ ಉತ್ಪನ್ನವನ್ನೋ ಬಳಸಿ ನಮ್ಮ ಕಾರ್ಯಕರ್ತರು ತಮ್ಮ ಮಿದುಳುಗಳನ್ನು ಶುದ್ಧಿಗೊಳಿಸಿಕೊಂಡಿದ್ದರೆ ಈ ಪಂಚಾಯಿತಿ ಇರುತ್ತಿರಲಿಲ್ಲ. ಯಾವನೋ ರಾಜನ ಕಥೆ ಹೇಳುತ್ತಾರಲ್ಲ : ಅವನು ಓಡಾಡುವ ಕಡೆಗಳಲ್ಲೆಲ್ಲಾ ಚರ್ಮದ ಹಾಸು ಹಾಸಬೇಕೆಂದು ಆಣತಿ ನೀಡಿದ್ದ; ಅದು ಅಸಾಧ್ಯವೆಂದು ತಿಳಿದ ಕಾರ್ಯಕರ್ತ ರಾಜನಿಗೆ ಒಂದು ಜೊತೆ ಚಪ್ಪಲಿ ಹೊಲಿಸಿಕೊಟ್ಟ. ನಮ್ಮ ಮನಸ್ಸುಗಳು ತೀರಾ ಕಲುಷಿತವಾಗಿವೆ; ಮನಸ್ಸನ್ನು ಗಂಜಳದಿಂದ ತೊಳೆಯಲಾಗುವುದಿಲ್ಲವಾದ್ದರಿಂದ ಶಂಕರಾಚಾರ್ಯರು ಹೇಳಿದ್ದಂತೆ ಪ್ರಜ್ಞೆಯನ್ನು ಸ್ವಚ್ಛವಾಗಿರಿಸಿಕೊಂಡರೆ ಸಾಕು. ಭಾಜಪದವರು ಅದಕ್ಕಾಗಿ ಒಂದು ಶಿಬಿರ ಏರ್ಪಡಿಸಿಕೊಳ್ಳುವುದು ಆರೋಗ್ಯಕರ. ಏನಿಲ್ಲವೆಂದರೆ ಗಂಜಳವು ಗೊಬ್ಬರದ ಘನತೆಯನ್ನು ಹೆಚ್ಚಿಸುವುದಕ್ಕೆ ಉಪಯೋಗವಾಗುತ್ತದೆ.

ಒಟ್ಟಿನಲ್ಲಿ ಸಿರ್ಸಿಯ ಭಾಜಪ ಕಾರ್ಯಕರ್ತರು ತಮ್ಮ ಸಾಂಸ್ಕೃತಿಕ ಗುರು ಡಾ॥ ಎಸ್. ಎಲ್ ಭೈರಪ್ಪನವರ ಮಾರ್ಗದರ್ಶೀ ಸೂತ್ರಗಳನ್ನು ಅನುಷ್ಠಾನಕ್ಕೆ ತಂದಿದ್ದಾರೆ. ಅವರು 'ದಾಟು' ಕಾದಂಬರಿಯಲ್ಲಿ ದಲಿತರ ಪ್ರವೇಶದಿಂದ 'ಅಶುದ್ಧ'ಗೊಂಡಿದ್ದ ದೇವಸ್ಥಾನವನ್ನು ತೊಳೆದು ಶುದ್ಧೀಕರಿಸುವ ಪ್ರಸಂಗವಿದೆ. (ದೇವಸ್ಥಾನ ಪ್ರವೇಶಿಸಿದ್ದ ದಲಿತನೊಬ್ಬನು ಮೂರ್ಛೆ ಹೋಗಿಬಿಡುವ ಪ್ರಸಂಗವೂ ಇದೆ). ಪ್ರಕಾಶ ರೈ ಒಂದರ್ಥದಲ್ಲಿ ದೇವಸ್ಥಾನದಷ್ಟೇ ಅಪವಿತ್ರರಾಗಿ ಬಿಟ್ಟಿದ್ದಾರೇನೋ!

* * *

ಆಧಾರ ಗುರುತು ಚೀಟಿಯ ಬಗೆಗಿನ ಎಲ್ಲ ಶಂಕೆಗಳೂ, ಆಕ್ಷೇಪಗಳೂ ನಿರಾಧಾರವಾದುವೆಂದು ಕೇಂದ್ರ ಸರ್ಕಾರವು ಹೇಳುತ್ತಲೇ ಬಂದಿದೆ. ಕಾಂಗ್ರೆಸ್ ಪಕ್ಷವು ಅಧಿಕಾರದಲ್ಲಿದ್ದಾಗ ಆಕ್ಷೇಪಗಳನ್ನೆತ್ತಿದ್ದ ಭಾರತೀಯ ಜನತಾ ಪಕ್ಷವು ಎಂತಹ ಪ್ರಬಲ ಸಾಕ್ಷ್ಯಾಧಾರಗಳಿಂದ ಆಕ್ಷೇಪವೆತ್ತಿದ್ದರೂ ಈಗ ಅವನ್ನು ಮುಲಾಜಿಲ್ಲದೆ ತಳ್ಳಿಹಾಕುತ್ತಿದೆ. ಒಂದು ವಾರವಿಡೀ ರಾಷ್ಟ್ರೀಯ ಸಮಾಚಾರಗಳಲ್ಲಿ ಕೇಂದ್ರಬಿಂದುವಾಗಿ ಪರಿಣಮಿಸಿದ್ದ ಸರ್ವೋಚ್ಚ ನ್ಯಾಯಾಲಯವು ಈಗ ಆಧಾರದ ಆಧಾರಗಳನ್ನು ಕುರಿತು ವಿಚಾರಣೆಯನ್ನು ಗಂಭೀರವಾಗಿ ಆರಂಭಿಸಿದೆ. ಆಧಾರದಡಿ ಸಂಗ್ರಹಿಸಲಾಗಿರುವ ಎಲ್ಲರ ಬಗೆಗಿನ ಮಾಹಿತಿಯು ಎಲ್ಲರಿಗೂ ಲಭ್ಯ ಎನ್ನುವ ಸನ್ನಿವೇಶ ಇಂದು ಕಾಲ್ಪನಿಕವಾಗಿ ಉಳಿದಿಲ್ಲ. ಯಾರೋ ಒಬ್ಬ ವ್ಯಕ್ತಿಯು ಆಧಾರದ ಸರ್ಕಾರಿ ಮಾಲಿಕರ "ಗುಪ್ತ" ಸಂಗ್ರಹದಿಂದ ಕೋಟಿಗಟ್ಟಲೆ ಜನರ ಇಡೀ ಮಾಹಿತಿಯನ್ನು ಸಾರ್ವಜನಿಕರಿಗೆ ಹಂಚಲು ಯಶಸ್ವೀ ಪ್ರಯೋಗ ಮಾಡಿ ಗೆದ್ದಿರುವುದಾಗಿ ವರದಿಯಾಗಿದೆ. ಸರ್ಕಾರಕ್ಕೆ ನಾಚಿಕೆ ಇದ್ದರೆ ಅದೊಂದೇ ಕಾರಣದಿಂದ ಖಾಸಗಿ ಮಾಹಿತಿಯ ಕೇಂದ್ರೀಕೃತ ಸಂಗ್ರಹದ ಯೋಜನೆಯನ್ನು ಕೈಬಿಡಬೇಕು. ಯಾವನದೋ ಹೆಂಡದ ಬಿಲ್ ಎಷ್ಟಾಯಿತೆಂದು ತಿಳಿಯುವ ಕುತೂಹಲವಿದ್ದರೆ ಇಡೀ ಲೋಕವು ಅದನ್ನು ತಿಳಿದು ಹಿಗ್ಗಲು ಇಲ್ಲವೇ ಕುಗ್ಗಲು ಈಗ ಸಾಧ್ಯವಾಗಿಬಿಟ್ಟಿದೆ. ಅಂಬಾನಿಯ ವ್ಯವಹಾರಗಳು ಮಾತ್ರ ಲೋಕಕ್ಕೆ ಪೂರ್ತಿ ತಿಳಿಯುವುದಿಲ್ಲ, ಏಕೆಂದರೆ ಆತ 'ಆಧಾರ'ರಹಿತ ವಹಿವಾಟುಗಳನ್ನೇ ಹೆಚ್ಚಾಗಿ ಮಾಡುವುದು. ಸರ್ವೋಚ್ಚ ನ್ಯಾಯಾಲಯದಲ್ಲಿ ನ್ಯಾಯಾಧೀಶರೊಬ್ಬರು ಕೇಳಿದರಂತೆ : "ಮಕ್ಕಳೂ ಸೇರಿದಂತೆ ಪ್ರತಿಯೊಬ್ಬ ಪ್ರಜೆಯೂ ತನ್ನ ಬಯೋಮೆಟ್ರಿಕ್ ಮಾಹಿತಿಯನ್ನು ಸಾರ್ವಜನಿಕ ಹಿತಾಸಕ್ತಿಯ ಹೆಸರಿನಲ್ಲಿ ರಾಜ್ಯಪ್ರಭುತ್ವದೊಡನೆ ಹಂಚಿಕೊಳ್ಳಬೇಕೆಂದು ನಿರ್ಬಂಧ ಹೇರುವುದು ಸರಿಯೇ?" ಎಂದು. ಆ ಪ್ರಶ್ನೆಗೆ ಅವರ ಮತ್ತು ಅವರೊಡನೆ ವಿಚಾರಣೆಯನ್ನು ನಡೆಸುತ್ತಿರುವ ಇತರ ನ್ಯಾಯಮೂರ್ತಿಗಳ ಉತ್ತರವೇನೆಂದು ಸಾರ್ವಜನಿಕರು ತಿಳಿಯಬಯಸುತ್ತಾರೆ. ಒಂದೊಂದು ಮನೆಗೂ ಕನ್ನ ಹಾಕಿ ಏನೇನನ್ನೋ ಕದ್ದುದಕ್ಕೆ ಸಮಾನವಾಗಿ ಹೋಗಿದೆ ಈ ಆಧಾರದ ರಂಪಾಟ. ಸರ್ಕಾರವು ಈ ಅನಿಷ್ಟ ವೃತ್ತಿಗೆ ಏಕೆ ಕೈಹಾಕಬೇಕಿತ್ತು? ನಾಳೆ ಆ ಇಡೀ ವ್ಯಕ್ತಿಗತ ಮಾಹಿತಿಗಳನ್ನೂ ಸರ್ಕಾರವು ಟ್ರಂಪ್ ಮತ್ತು ನೆತನ್ಯಾಹು ಇತ್ಯಾದಿಗಳಿಗೆ ಹಂಚಲು ಹೇಸದಿರಬಹುದು. ಲೋಕಸಭೆಯ ಶಾಸನವಿಲ್ಲದೆಯೇ ಆಧಾರದ ಆಧಾರಸ್ತಂಭ ನಿಂತಿದೆ! ಇದು ಪಾರ್ಲಿಮೆಂಟ್ ಸದಸ್ಯರ ಮಿದುಳನ್ನು ಹೊಕ್ಕಿರಬೇಕಾಗಿತ್ತು, ಆದರೆ ಅವರ ಮಿದುಳು ಬಂಡೆಗಳು ಅದನ್ನೆಲ್ಲಾ ಒಳಹೋಗಲು ಬಿಟ್ಟಿಲ್ಲ. "ನನ್ನ ಬಗೆಗಿನ ಮಾಹಿತಿ ಕೊಡಲು ನಿರಾಕರಿಸುತ್ತೇನೆ" ಎಂದು ಹೇಳುವ ಹಕ್ಕು ಪ್ರಜೆಗಳಿಗಿಲ್ಲವಂತೆ; ಏಕೆಂದರೆ ಅವರು ಡಕಾಯಿತರಾಗಿರಬಹುದು, ಆದ್ದರಿಂದಲೇ ಮುಚ್ಚಿಡುತ್ತಿದ್ದಾರೆಂಬ ಸಂಶಯ ಸರ್ಕಾರಕ್ಕೆ. ವಿಶ್ವಕ್ಕೆಲ್ಲಾ ತಿಳಿದ ಡಕಾಯಿತರು ನಮ್ಮ ನಡುವೆ ಇದ್ದಾರೆ, ಆದರೆ ಅವರ ಆಧಾರದ ಆಧಾರದಿಂದ ಅದನ್ನು ತಿಳಿಯಲಾಗುತ್ತಿಲ್ಲ, ತಿಳಿದರೂ ಅರುಣ ಜೇಟ್ಲಿ ಏನೂ ಮಾಡಲಾರರು! ಯಾವುದೋ ಕಾಲೇಜಿನಲ್ಲಿ ಅಧ್ಯಾಪಕರು ವೇಳೆಗೆ ಸರಿಯಾಗಿ ಬರುತ್ತಿದ್ದಾರೋ ಇಲ್ಲವೋ ಎಂದು ತಿಳಿಯುವ ಬಯೋಮೆಟ್ರಿಕ್ ತರಹದ್ದಲ್ಲ ಈ ಆಧಾರ. ಏಕೆಂದರೆ ಅಲ್ಲಿ ಮಾಹಿತಿಯು ಕಾಲೇಜಿನಲ್ಲಷ್ಟೇ ಉಳಿಯುತ್ತದೆ ಮತ್ತು ಬಳಕೆಗೆ ಸಿಗುತ್ತದೆ; ಆದರೆ ಈ ಸರ್ಕಾರದ ಆಧಾರವು ನೂರು ಕೋಟಿ ಜನರ ಮಾಹಿತಿಯನ್ನು ರಾಜನಾಥಸಿಂಗರಿಗೆ ನೀಡುತ್ತದೆ ಮತ್ತು ಅವರು ಅದನ್ನು ವಿಶ್ವಕ್ಕೆ ಹಂಚಬಹುದು, ಇಲ್ಲವೇ ಇಷ್ಟಬಂದವರು ತಮ್ಮ ತಾಂತ್ರಿಕ ಪರಿಣತಿಯಿಂದ ಅದನ್ನು ರಾಜನಾಥಸಿಂಗರಿಂದ ಕದಿಯಬಹುದು.

ಇದೆಂತಹ ಸರ್ಕಾರವಪ್ಪಾ ಎನಿಸಿದರೆ ಮೂಗಿನ ಮೇಲೆ ಬೆರಳಿಟ್ಟುಕೊಳ್ಳಿ, ತೆಪ್ಪಗೆ ಕುಳಿತುಕೊಳ್ಳಿ, ಎನ್ನುತ್ತಾರೆ ರಾಜನಾಥ ಸಿಂಗ್.




**ದಲಿತ ಪ್ರಜ್ಞೆಯ ದನಿ – ಜ್ಯೋತಿಬಾ ಫುಲೆ**

(ಜೀವನ ಚರಿತ್ರೆ)

*ಡಾ॥ ಎಚ್. ಎಸ್. ಅನುಪಮಾ*




**ಪುಟ :** ೧೨೦

**ಬೆಲೆ : ರೂ.** ೯೦

**ಲಡಾಯಿ ಪ್ರಕಾಶನ,** ಗದಗ

*ಜ್ಯೋತಿಬಾ ಫುಲೆ, ಭಾರತ ದೇಶ ಕಂಡ ಅತ್ಯಂತ ಪ್ರತಿಭೆ ಉಳ್ಳ ಮತ್ತು ಸಾಮಾಜಿಕ ಹೋರಾಟಗಾರರಾಗಿದ್ದರು. ಅಂಬೇಡ್ಕರ್ ಅವರು ಫುಲೆಯವರನ್ನು 'ಮಹಾಶೂದ್ರ' ಎಂದು ಕರೆದು, ಅವರು ಬುದ್ಧ, ಕಬೀರ್ ಮತ್ತು ಫುಲೆ ತನ್ನ ಮೂಲ ಪ್ರೇರಕಶಕ್ತಿಗಳು ಎಂದಿದ್ದಾರೆ. ಮಹಾರಾಷ್ಟ್ರ, ಪೇಶ್ವೆಯರ ಕಾಲದಲ್ಲಿ ದಲಿತರು ಮತ್ತು ಶೂದ್ರರ ಪಾಲಿಗೆ ನರಕವಾಗಿ ಮಾರ್ಪಟ್ಟಿದ್ದರ ಕಾರಣ ಆ ನೆಲದಿಂದ ಫುಲೆ, ಅಂಬೇಡ್ಕರ್ ಹುಟ್ಟಿಬಂದಿದ್ದರು. ಅವರಿಬ್ಬರ ಸಾಮಾಜಿಕ ಹೋರಾಟಗಳು ಭಾರತದ ಸಾಮಾಜಿಕ ದಿಕ್ಕನ್ನೇ ಬದಲಿಸಿದವು. ಫುಲೆ ಕೇವಲ ಒಬ್ಬ ಮನುಷ್ಯನಾಗಿರದೆ ಒಂದು ಶಕ್ತಿಯಾಗಿ ಬೆಳೆದುನಿಂತಿದ್ದರು. ಈ ಇಬ್ಬರು ಮಹನೀಯರ ಹೋರಾಟದಿಂದ ಭಾರತದ ದಿಕ್ಕೆ ಬದಲಾಗಿ ದಲಿತ ಸಂಘಟನೆಗಳು ಮತ್ತು ದಲಿತ ಸಾಹಿತ್ಯವೂ ಕೊನರಿತು. ಫುಲೆ ಅವರು ತಮ್ಮ ಪತ್ನಿ ಸಾವಿತ್ರಿ ಫುಲೆಯವರೊಂದಿಗೆ ಭಾರತದಲ್ಲಿ ಮೊದಲ ಬಾರಿಗೆ ಹೆಣ್ಣು ಮಕ್ಕಳಿಗೆ, ಶೂದ್ರರಿಗೆ, ಅಸ್ಪೃಶ್ಯರಿಗೆ ಶಾಲೆಗಳನ್ನು ಸ್ಥಾಪಿಸಿ ಮಾತು ಬರುವಂತೆ ಮಾಡಿದ್ದರು. ಬ್ರಾಹ್ಮಣರ ವಿಧವೆ ಹೆಣ್ಣು ಮಕ್ಕಳಿಗೆ ಒಂದು ಆಶ್ರಮವನ್ನೇ ಸ್ಥಾಪಿಸಿದ್ದರು. ಫುಲೆ ಅವರು ತಮ್ಮ ಜೀವನ ಚರಿತ್ರೆ ಬರೆಯಲಿಲ್ಲ. ಆದರೆ ಅವರ ಕೆಲಸಗಳಿಂದ ಅವರೊಬ್ಬ ಶಿಕ್ಷಣ ತಜ್ಞರಾಗಿ, ರೈತರ ಬಂಧುವಾಗಿ, ಬರಹಗಾರರಾಗಿ ವೈಚಾರಿಕ–ವೈಜ್ಞಾನಿಕ ದೃಷ್ಟಿಕೋನ ಬೆಳೆಸಿಕೊಂಡು ಅಪ್ರತಿಮ ಸಮಾಜ ಸುಧಾರಕರಾಗಿ ಕೆಲಸ ಮಾಡಿದ್ದರು. ಫುಲೆ ಪುಣೆಯ ಕಮೀಷನರ್ ಆಗಿಯೂ ಸೇವೆ ಸಲ್ಲಿಸಿದ್ದರು. ಅನುಪಮಾ ಅವರು ಫುಲೆ ಅವರ ಬಗ್ಗೆಯೂ ಇಲ್ಲಿ ಒಂದಷ್ಟು ವಿವರಗಳನ್ನು ಕೊಟ್ಟಿದ್ದಾರೆ.*

**ಅರಿವಿನ ನೆಲೆಗಳು** (ಲೇಖನಗಳ ಸಂಗ್ರಹ) ರಾಜೇಂದ್ರ ಚೆನ್ನಿ

**ಪುಟ :** ೧೬೮ **ಬೆಲೆ : ರೂ. ೧೪೦**

**ಲಡಾಯಿ ಪ್ರಕಾಶನ,** ಪ್ರಸಾದ್ ಹಾಸ್ಟೆಲ್, ಗದಗ

*ಪ್ರೊ. ರಾಜೇಂದ್ರ ಚೆನ್ನಿ ಅವರ 13 ಲೇಖನಗಳ ಈ ಸಂಗ್ರಹ ಹಲವು ಸಾಂಸ್ಕೃತಿಕ ಆಯಾಮಗಳನ್ನು ನಮ್ಮ ಕಣ್ಣುಗಳ ಮುಂದೆ ತೆರೆದಿಡುತ್ತದೆ. ಅಂದು ಕಲ್ಯಾಣದಲ್ಲಿ ನಡೆದ ಬಸವಣ್ಣನ ಕೊಲೆಯಿಂದ ಹಿಡಿದು ಇಂದಿನ ಕಲಬುರ್ಗಿಯವರ ಕೊಲೆಯವರೆಗಿನ ಬೆಳವಣಿಗೆಗಳು ಇಲ್ಲಿ ಅನಾವರಣಗೊಂಡಿವೆ. 'ಸಂಸ್ಕೃತಿಗಳು: ಯಾವುದು ಪ್ರಧಾನ, ಯಾವುದು ಅಧೀನ' ಎನ್ನುವ ಲೇಖನದಲ್ಲಿ, ಭಾರತೀಯ ಸಂಸ್ಕೃತಿಯೆಂಬ ಪರಿಕಲ್ಪನೆಯನ್ನು ರಾಜಾ ರಾಮಮೋಹನ ರಾಯ್, ಸ್ವಾಮಿ ವಿವೇಕಾನಂದ, ದಯಾನಂದ ಸರಸ್ವತಿ ಹೇಗೆ ಹೊಸದಾಗಿ ಆವಿಷ್ಕಾರ ಮಾಡಿದರು ಎಂಬುದನ್ನು ಹೇಳಲಾಗಿದೆ. ಮಹಾರಾಷ್ಟ್ರದ ದಲಿತ ಪ್ಯಾಂಥರ್ಸ್ ತಮ್ಮ ಪ್ರಣಾಳಿಕೆಯಲ್ಲಿ 'ನಮಗೆ ನಿಮ್ಮ ಬ್ರಾಹ್ಮಣ ಬೀದಿಯಲ್ಲಿ ಒಂದು ಮೂಲೆ ಬೇಡ. ನಮಗೆ ಇಡೀ ಬೀದಿಯೇ ಬೇಕು' ಎಂದು ಕೇಳುವ ಮಾತು ದಲಿತರದು ಈ ನೆಲದ ಮೂಲ ಸಂಸ್ಕೃತಿ ಎಂಬುದನ್ನು ತೋರಿಸುತ್ತದೆ. 'ಇಂದಿನ ಸಂದರ್ಭದಲ್ಲಿ ದಲಿತ ಸಮುದಾಯಗಳು' ಲೇಖನದಲ್ಲಿ ಅಂಬೇಡ್ಕರ್ ಅವರು 'ನಾವು ಕಾನೂನಿನ ಮೂಲಕ ಕೊಡುವ ಹಕ್ಕುಗಳನ್ನು ಸಾಮಾಜಿಕ ಬಹಿಷ್ಕಾರದ ಮೂಲಕ ಕಿತ್ತುಕೊಳ್ಳಲಾಗುತ್ತದೆ' ಎಂದಿದ್ದರು ಎಂಬುದರ ಹಿನ್ನೆಲೆಯಲ್ಲಿದ್ದು, ಅದು ಇನ್ನೂ ಒಂದ್ಹೆಜ್ಜೆ ಮುಂದೆ ಹೋಗಿ ಈಗ ದಲಿತರು/ ಹಿಂದುಳಿದವರು ತಿನ್ನುವ ಆಹಾರದ ಮೇಲೆಯೇ ದಾಳಿ ನಡೆಯುತ್ತಿದೆ. 'ಜಾತಿ ವಿನಾಶ: ಮರೆಗೆ ಸಂದ ಪರಿಕಲ್ಪನೆ', 'ಸಬ್ ಆಲ್ಟರ್ನ್ ಅಧ್ಯಯನಗಳು' ಮತ್ತು 'ರಾಜ್‌ಕುಮಾರ್ ಮತ್ತು ಕನ್ನಡ ಅಸ್ಮಿತೆ' ಎಂಬ ಲೇಖನಗಳೂ ಈ ಕೃತಿಯಲ್ಲಿವೆ. ಇದೊಂದು ಒಳ್ಳೆಯ ಪುಸ್ತಕ.*




**ನಾನೇಕೆ ಹಿಂದೂ ಅಲ್ಲ**

*ಮೂಲ: ಕಾಂಚ ಐಲಯ್ಯ ಕನ್ನಡಕ್ಕೆ : ಮಂಗ್ಳೂರು ವಿಜಯ*

**ಪುಟ :** ೧೮೪ **ಬೆಲೆ : ರೂ. ೧೪೦**

**ಲಡಾಯಿ ಪ್ರಕಾಶನ,** ಪ್ರಸಾದ್ ಹಾಸ್ಟೆಲ್, ಗದಗ

*ಹಿಂದುತ್ವದ ತತ್ವಜ್ಞಾನ, ಸಂಸ್ಕೃತಿ ಮತ್ತು ರಾಜಕೀಯ ಅರ್ಥವ್ಯವಸ್ಥೆಯ ವಿಶ್ಲೇಷಣೆಯನ್ನು ಒಳಗೊಂಡಿರುವ ಈ ಕೃತಿ ಆಳವಾದ ಅಧ್ಯಯನ, ಒಳನೋಟಗಳಿಂದ ಕೂಡಿದ ಕುಶಾಗ್ರಮತಿ ವಿಮರ್ಶೆಯ ಒಂದು ಕೃತಿ. ಮೊದಲ ಅಧ್ಯಾಯಗಳಲ್ಲಿ ವಿಮರ್ಶಿಸಿರುವ ಬಾಲ್ಯ, ಮದುವೆ, ಮಾರುಕಟ್ಟೆ ವ್ಯವಸ್ಥೆ ಮತ್ತು ಸಾಮಾಜಿಕ ಸಂಬಂಧಗಳನ್ನು ವಿಶ್ಲೇಷಿಸುತ್ತದೆ. ರಾಜಕೀಯ, ಸೌಹಾರ್ದತೆ, ಪರಸ್ಪರ ಧರ್ಮ ನಿರಪೇಕ್ಷ ಸಂಬಂಧಗಳನ್ನು ವೈವಿಧ್ಯಮಯವಾಗಿ ಚರ್ಚೆಗಿಟ್ಟು ವಿಶ್ಲೇಷಿಸಿರುವುದು ವಿಶೇಷವಾಗಿದೆ. ಹಾಗೆ ಬಂಡವಾಳ ಸಂಸ್ಕೃತಿಯ ಜಾತಿ ಆಧಾರಿತ ಮೇಲ್ವರ್ಗ(ಮೇಲ್ಜಾತಿ)ಗಳು ತಮ್ಮ ಏಕಸ್ವಾಮ್ಯಕ್ಕೆ ಗಂಡಾಂತರ ಬರಲಿರುವ ಭಯದಿಂದಾಗಿ ಯಜಮಾನ ವ್ಯವಸ್ಥೆಯಲ್ಲಿ ಬದಲಾವಣೆಯಾಗುತ್ತಿರುವುದನ್ನು ಇಲ್ಲಿ ದಾಖಲಿಸಲಾಗಿದೆ. ದಲಿತ ಬಹುಜನ ಸಂಸ್ಕೃತಿ ಮತ್ತು ಉತ್ಪಾದನಾ ಸಂಬಂಧಗಳಿಗೆ ಸಂಬಂಧಿತವಾದ ವಿಶ್ಲೇಷಣೆ ಹೊಸದಾಗಿ ರೂಪಿತವಾಗಿರುವ ದಲಿತ–ಬಹುಜನ ರಾಜಕಾರಣ ಕುರಿತು ಮಾಡಿರುವ ವಿಸ್ತೃತ ರಾಜಕೀಯ ಈ ಕೃತಿಯ ಮೂಲ ಕಾಳಜಿ ಎನ್ನಬಹುದು. ಐಲಯ್ಯನವರು ದಲಿತ–ಬಹುಜನ ರಾಜಕೀಯಕ್ಕೆ ಅಂತಿಮ ಭವಿಷ್ಯ ಇದೆ ಎನ್ನುವುದು ಕೃತಿಯ ಇಂಗಿತವಾದರೂ ಅದಕ್ಕೆ ಪೋಷಕವಾದ ಬೆಳವಣಿಗೆಗಳನ್ನು ಸನಾತನ ಹಿಂದೂಧರ್ಮದ ಜನರು ಅಷ್ಟೊಂದು ಸುಲಭವಾಗಿ ಬಿಟ್ಟುಕೊಡುವುದಿಲ್ಲ. ಹಿಂದೂ ಧರ್ಮದಲ್ಲಿರುವುದು ಸಂಪ್ರದಾಯಶೀಲತೆಯಲ್ಲ; ಅಲ್ಲಿರುವುದು ಕೇವಲ ಸಂಪ್ರದಾಯ ವೈವಿಧ್ಯತೆ. ಹಿಂದೂ ಸಂಸ್ಕೃತಿಯ ಒಳಮಜಲುಗಳನ್ನು ಸ್ವಲ್ಪಮಟ್ಟಿಗೆ ತಿಳಿದುಕೊಳ್ಳುವವರಿಗೆ ಈ ಕೃತಿ ಸ್ವಲ್ಪಮಟ್ಟಿಗೆ ಸಹಾಯವಾಗುತ್ತದೆ.*

**ಅರಿವು** (ಕವನ ಸಂಕಲನ) ಕುಂಸಿ ಯೋಗೇಶ್

**ಪುಟ :** ೧೯೦ **ಬೆಲೆ : ರೂ. ೧೫೦**

**ಜಾಗೃತಿ ಪ್ರಿಂಟರ್ಸ್ ,** ಬೆಂಗಳೂರು




*'ಅರಿವು' ಕುಂಸಿ ಯೋಗೇಶ್ ಅವರ ಚೊಚ್ಚಲ ಕವನ ಸಂಕಲನ. ಸಂಕಲನದಲ್ಲಿ ವಿವಿಧ ವಿಷಯಗಳಿಗೆ ಸೇರಿದ 101 ಕವಿತೆಗಳಿದ್ದು, ಹೆಚ್ಚಾಗಿ ಸಾಮಾಜಿಕ ಬದ್ಧತೆಯ ಹಿನ್ನೆಲೆಯಲ್ಲಿ ರಚಿತವಾಗಿವೆ. ಅದರ ಜೊತೆಗೆ ಸಾಮಾಜಿಕ ಕಳಕಳಿ, ಪ್ರೀತಿ–ಪ್ರೇಮ, ಮದುವೆ ಮತ್ತು ಸಮಾಜದಲ್ಲಿ ನಡೆಯುವ ಕೆಲವು ಆಘಾತಕಾರಿ ವಿಷಯಗಳು, ಪೌರಾಣಿಕ ಕಥೆಗಳ ವಸ್ತುಗಳು ಮತ್ತು ಇರುವೆ, ಅಳಿಲು, ಸಣ್ಣಪುಟ್ಟ ಪ್ರಾಣಿಗಳೂ ಸಹ ಸ್ಥಾನ ಪಡೆದುಕೊಂಡಿವೆ. ಎಲ್ಲ ಕವಿತೆಗಳನ್ನು ಓದಿಕೊಂಡಾಗ ಯೋಗೇಶ್ ಅವರ ಕವಿತೆಗಳ ಮಾರ್ಗ, ಶೈಲಿ, ಭಾಷಾ ಪ್ರಯೋಗ ಮತ್ತು ಕವಿತೆಗೆ ಬೇಕಾದ ಮೂಲಧಾತುಗಳು ಅವರಲ್ಲಿ ಇರುವುದು ಕಂಡುಬರುತ್ತದೆ. ಒಟ್ಟಾರೆ, ಯೋಗೇಶ್ ಅವರಿಗೆ ದಿನನಿತ್ಯದ ಸಂಗತಿಗಳನ್ನು ಒಳಗೊಂಡಂತೆ ಕವಿತೆಗಳನ್ನು ಕಟ್ಟಬೇಕು, ಸಹೃದಯರಿಗೆ ಮುಟ್ಟಿಸಬೇಕೆಂಬ ಹಂಬಲ ತೀವ್ರವಾಗಿದೆ. ಕವಿತೆ ಬರೆದು ನೆಮ್ಮದಿ ಕಾಣಬೇಕು ಎಂಬ ಕವಿ ಹೃದಯ ಜಾಗೃತವಾಗಿದೆ. ಕವಿತೆ ರಚಿಸುವಲ್ಲಿ ತುಂಬ ಆಸಕ್ತಿ ಇರುವ ಯೋಗೇಶ್ ಕನ್ನಡ ಕವಿಗಳ ಉತ್ಕೃಷ್ಟ ಕಾವ್ಯವನ್ನು ಓದಿಕೊಂಡರೆ ಇನ್ನೂ ಒಳ್ಳೆಯ ಕವಿತೆಗಳನ್ನು ರಚಿಸುವ ಎಲ್ಲ ಶಕ್ತಿ ಸಾಮರ್ಥ್ಯ ಇರುವವರು. ಅಂತಹ ಸೂಚನೆಗಳು ಇಲ್ಲಿನ ಕವಿತೆಗಳಲ್ಲಿ ಕಾಣಿಸುತ್ತವೆ. ಯೋಗೇಶ್ ಅವರ ಕೆಲವು ಕವಿತೆಗಳಿಗೆ ರಾಗ ಸಂಯೋಜನೆ ಮಾಡಿದರೆ ಒಳ್ಳೆಯ ಭಾವಗೀತೆಗಳಾಗಿ ಹಾಡಿಸಿಕೊಳ್ಳುತ್ತವೆ. ಯೋಗೇಶ್ ಒಳ್ಳೆ ಕವಿತೆಗಳನ್ನು ರಚಿಸುವುದರ ಜೊತೆಗೆ ಇತರೆ ಸಾಹಿತ್ಯ ಪ್ರಕಾರಗಳಲ್ಲೂ ಯಶಸ್ವಿಯಾಗಲಿ ಎಂದು ಹಾರೈಸುತ್ತೇನೆ.*

*– **ಡಾ॥ ಎಂ. ವೆಂಕಟಸ್ವಾಮಿ,** ಫ್ಲ್ಯಾಟ್ ೪ ಡಿ, 'ಸಿ' ಟವರ್, ಕ್ಲಾಸಿಕ್ ಲ್ಯಾಂಡ್ ಮಾರ್ಕ್ ಅಪಾರ್ಟ್‌ಮೆಂಟ್ಸ್, ಅಮೃತ ಇಂಜಿನಿಯರಿಂಗ್ ಕಾಲೇಜ್ ಹತ್ತಿರ, ಕಸವನಹಳ್ಳಿ ಮುಖ್ಯರಸ್ತೆ, ಬೆಂಗಳೂರು – ೩೫*




## ಭಗವದ್ಗೀತೆ : ಒಂದು ಅವಲೋಕನ

# ೧೭. ಮನಸ್ಸನ್ನು ಆಕ್ರಮಿಸಿ ಭಕ್ತನಿಗೆ ಕರುಣಿಸುವ 'ಸ್ವಾತಂತ್ರ್ಯ'

**ಭಗವದ್ಗೀತೆಯ ಅಧ್ಯಯನ ಮಾಡಲು ಎರಡು ಕ್ರಮಗಳನ್ನು ಅನುಸರಿಸಬಹುದು. ಮೊದಲನೆಯ ಅಧ್ಯಾಯದಿಂದ ಆರಂಭಿಸುವುದು ಒಂದು ಕ್ರಮ; ಅದರ ಬದಲು ಕೊನೆಯ (೧೮ನೆಯ) ಅಧ್ಯಾಯದ ೪೧ನೆಯ ಶ್ಲೋಕದಿಂದ ಕೊನೆಯವರೆಗೆ ಓದಿ, ಆಮೇಲೆ ಮೊದಲನೆಯ ಅಧ್ಯಾಯದಿಂದ ಪುನರಾರಂಭಿಸುವುದು. ಗೀತೆಯ ಉದಾತ್ತ ಮೌಲ್ಯಗಳನ್ನು ಪರಿಚಯಿಸಿಕೊಂಡರೆ ಸಾಲದು, ಅದರ ಮೂಲೋದ್ದೇಶವೇನು ಎಂಬುದನ್ನೂ ತಿಳಿಯಬೇಕು. ಮೇಲೆ ಸೂಚಿಸಲಾದ ಎರಡನೆಯ ಕ್ರಮವು ಅದಕ್ಕೆ ಸಹಾಯ ನೀಡುತ್ತದೆ. ಅದು ಆರೋಗ್ಯಕರ ಕೂಡ, ಏಕೆಂದರೆ ಗೀತೆಯ ಸಾಮಾಜಿಕ ನಿಲುವಿನ ವಸ್ತುನಿಷ್ಠ ನಿರೂಪಣೆ ಇಲ್ಲಿ ದೊರೆಯುತ್ತದೆ. ಬೇರೆಡೆಗಳಲ್ಲಿ ನಿರೂಪಣೆಯು ವರ್ಣರಂಜಿತವಾಗಿರುತ್ತದೆ, ಆದರೆ ಇಲ್ಲಿ ಮುಚ್ಚುಮರೆ ಇಲ್ಲದ ನೇರ ನುಡಿಗಳಿವೆ. ಸ್ವತಃ ಶ್ರೀಭಗವಾನನೇ ನಾಲ್ಕು ವರ್ಣಗಳನ್ನು ಸೃಷ್ಟಿಸಿದನಂತೆ (೪.೧೩). ಅದನ್ನು "ಗುಣಕರ್ಮ ವಿಭಾಗಶಃ" ಮಾಡಿರುವುದಾಗಿ ಭಗವಾನ್ ಹೇಳಿದ್ದಾನೆ. ಆಧುನಿಕ ವ್ಯಾಖ್ಯಾನಕಾರರಿಗೆ ಅದನ್ನು ಜೀರ್ಣಿಸಿಕೊಳ್ಳುವುದು ಕಷ್ಟ ; ಆದ್ದರಿಂದ ಅದಕ್ಕೆ ಇಲ್ಲದ ಮತ್ತು ಸಲ್ಲದ ಅರ್ಥವ್ಯಾಪ್ತಿಯನ್ನು ಕಲ್ಪಿಸುತ್ತಾರೆ. ಅಂತಹ ಬೌದ್ಧಿಕ ಕೌಶಲ್ಯವನ್ನು ವೃಥಾ ವ್ಯಯಿಸಬೇಕಿಲ್ಲವೆಂಬುದನ್ನು ಗೀತೆಯ ಕೊನೆಯ ಭಾಗವು ಅತ್ಯಂತ ಸ್ಪಷ್ಟವಾಗಿ ಹೇಳುತ್ತದೆ. ಅದಕ್ಕೆ ಹಲುಬಬೇಕಾದ್ದೇನೂ ಇಲ್ಲ.**

**ಜಿ. ರಾಮಕೃಷ್ಣ**

ಸತ್ತ್ವ, ರಜಸ್ ಮತ್ತು ತಮಸ್ ಎಂಬ ಮೂರು ಗುಣಗಳಿಂದ ಮುಕ್ತವಾದ ಯಾವುದೇ ವಸ್ತುವು ಪ್ರಕೃತಿಯಲ್ಲಿಲ್ಲ; ಅಂಥದನ್ನು ಪೃಥ್ವಿಯಲ್ಲಾಗಲಿ ದೇವಲೋಕದಲ್ಲಾಗಲಿ ಕಾಣಲಾಗದು ಎಂದು ಗೀತೆಯು ಪ್ರತಿಪಾದಿಸಿದೆ (೧೮.೪೦). ಹದಿನೈದನೆಯ ಅಧ್ಯಾಯದಲ್ಲಿ ಅರಳಿ ಮರದ ರೂಪಕವನ್ನು ಬಳಸಿ ಪ್ರಪಂಚವನ್ನು ಅರ್ಥೈಸಲಾಗಿತ್ತು. ಸಹಜವಾಗಿಯೇ ಆ ಪ್ರಪಂಚದಲ್ಲಿ ಮೂರು ಗುಣಗಳಿರಲೇಬೇಕಲ್ಲವೇ? ಅಶ್ವತ್ಥವೆಂಬ ಪ್ರಪಂಚದ ಬೇರುಗಳು ಬಹಳ ದೃಢ (೧೫.೩ : ಅಶ್ವತ್ಥಮೇನಂ ಸುವಿರೂಢಮೂಲಂ ಅಸಂಗ ಶಸ್ತ್ರೇಣ ದೃಢೇನ ಛಿತ್ತ್ವಾ ). ಹಾಗಿರುವಾಗ ಪ್ರಪಂಚದ ಸಂಗ ತೊರೆದು (ಅಂದರೆ ಬೇರುಗಳನ್ನು ಕತ್ತರಿಸಿ) ಪರಮಪದವನ್ನು ಪಡೆಯುವುದಾದರೂ ಹೇಗೆ? ೧೮ನೆಯ ಅಧ್ಯಾಯದ ೪೧ನೆಯ ಶ್ಲೋಕವನ್ನು ಕೈಗೆತ್ತಿಕೊಳ್ಳುವಾಗ ಮಧುಸೂದನ ಸರಸ್ವತಿ ಈ ಪ್ರಶ್ನೆಯನ್ನು ಎತ್ತಿದ್ದಾನೆ. ಅದು ಶಂಕರನ ವ್ಯಾಖ್ಯಾನದ ಪ್ರತಿರೂಪ. ಅವನ ಶಂಕೆ ಏನೆಂದರೆ ಸಂಸಾರಬಂಧನದಿಂದ ನಿವೃತ್ತಿಯೇ ಇಲ್ಲದಂತಹ ಸನ್ನಿವೇಶವನ್ನು ಮೂರು ಗುಣಗಳು ಕಲ್ಪಿಸಿಬಿಡುತ್ತವಲ್ಲಾ, ಎಂದು (ತತ್ರ ಚ ಸರ್ವಸ್ಯ ತ್ರಿಗುಣಾತ್ಮಕತ್ವಾತ್ ಸಂಸಾರ ಕಾರಣ ನಿವೃತ್ತ್ಯನುಪಪತ್ತೌ ಪ್ರಾಪ್ತಾಯಾಂ ಯಥಾ ತನ್ನಿವೃತ್ತಿಃ ಸ್ಯಾತ್ ತಥಾ ವಕ್ತವ್ಯಂ). ಹಾಗಾದರೆ, ಅದರಿಂದ ಪಾರಾಗಿ ಪರಮಪದವನ್ನು ಪಡೆಯುವುದಾದರೂ ಹೇಗೆ? ಗೀತೆಯ ಸ್ವಾರಸ್ಯಕರವಾದ, ಆದರೆ ಅಷ್ಟೇನೂ ಸೊಗಸದ, ಸಿನಿಕತನದ ಉತ್ತರ ಬಹಳ ಸರಳವಾಗಿದೆ : ಪ್ರಕೃತಿಯ ಮೂರು ಗುಣಗಳಿಗೂ, ಮಾನವರಲ್ಲಿ ನಾಲ್ಕು ವರ್ಣಗಳಾಗಿ ವಿಂಗಡಣೆಗೊಂಡಿರುವ ಬ್ರಾಹ್ಮಣ–ಕ್ಷತ್ರಿಯ–ವೈಶ್ಯ–ಶೂದ್ರರಿಗೂ ನೇರಸಂಬಂಧವಿದೆ. ಎಲ್ಲ ಗುಣಗಳೂ ಸಹ ಎಲ್ಲರಲ್ಲೂ ಇರುತ್ತವೆ; ಆದರೆ ಒಂದೊಂದು ಗುಣವು ಒಂದೊಂದು ವರ್ಣದವರಲ್ಲಿ ಅಧಿಕವಾಗಿ ಅಥವಾ ಸಾಂದ್ರವಾಗಿ ಇರುತ್ತದೆ. ವೈಶ್ಯ–ಶೂದ್ರರಲ್ಲಿ ತಮೋಗುಣದ್ದೇ ಪ್ರಾಧಾನ್ಯ. ಶಂಕರನ ಪ್ರಕಾರ ಈ ಅಧ್ಯಾಯದಲ್ಲಿ ಗೀತಾಶಾಸ್ತ್ರಾರ್ಥಕ್ಕೆ ಮಂಗಳ ಹಾಡಬೇಕು. ಏನದು ಗೀತಾರ್ಥ? "ವೇದ ಮತ್ತು ಸ್ಮೃತಿಗಳಲ್ಲಿ (ಅಂದರೆ, ಧರ್ಮಶಾಸ್ತ್ರದಲ್ಲಿ) ಉಕ್ತವಾಗಿರುವ ಪುರುಷಾರ್ಥಗಳನ್ನು (ಧರ್ಮ–ಅರ್ಥ–ಕಾಮ–ಮೋಕ್ಷ) ಸಾಧಿಸುವ ಆಶಯ ಇರುವವರು ಮುಂದೆ ಗೀತೆಯು ಹೇಳುವುದನ್ನು ಅನುಷ್ಠಾನಕ್ಕೆ ತರಬೇಕು. ಅದರಿಂದ ಪರಮಪದ ಪ್ರಾಪ್ತಿ ಸಾಧ್ಯವಾಗುತ್ತದೆ. ಶಂಕರನ ಮಾತನ್ನೇ ಉದ್ಧರಿಸೋಣ : ಸರ್ವಃ ಚ ಗೀತಾಶಾಸ್ತ್ರಾರ್ಥ ಉಪಸಂಹರ್ತವ್ಯ ಏತಾವಾನ್ ಏವ ಚ ಸರ್ವೋ ವೇದಸ್ಮೃತ್ಯರ್ಥಃ ಪುರುಷಾರ್ಥಂ ಇಚ್ಛದ್ಭಿಃ ಅನುಷ್ಠೇಯ ಇತಿ ಏವಂ ಅರ್ಥಂ ಚ ಬ್ರಾಹ್ಮಣ ಕ್ಷತ್ರಿಯ ವಿಶಾಂ ಇತ್ಯಾದಿಃ ಆರಭ್ಯತೇ ॥

ಸಂಕ್ಷಿಪ್ತವಾಗಿ ಹೇಳುವುದಾದರೆ ಗೀತಾರ್ಥವು ನಾಲ್ಕು ವರ್ಣಗಳ "ಸ್ವಭಾವದಿಂದಲೇ ನಿರ್ದೇಶಿತವಾಗಿರುವ" ನಿರ್ದಿಷ್ಟ ಕೆಲಸಗಳನ್ನು (ಕರ್ಮಗಳನ್ನು) ಮಾಡುತ್ತಿದ್ದರೆ ಎಲ್ಲಾ ಸಿದ್ಧಿಸುತ್ತವೆ ಎಂದಾಗಿದೆ. ಹಾಗಿದ್ದರೆ ಎರಡನೆಯ ಅಧ್ಯಾಯದಿಂದ ಹದಿನಾರನೆಯ ಅಧ್ಯಾಯದವರೆಗೆ ಜ್ಞಾನ, ಭಕ್ತಿ, ಧ್ಯಾನ, ಮುಂತಾದವುಗಳ ಉಪದೇಶದ ಪರಿಸಮಾಪ್ತಿಯು "ಸ್ವಭಾವಜ ಕರ್ಮ"ಗಳನ್ನು ಮಾಡಿದರೆ ಸಾಕು ಎಂದೇ? ಭಕ್ತಿ, ಕರ್ಮ, ಧ್ಯಾನ, ಮುಂತಾದವು ಸಾಲದು, ಅವು ಗೌಣ. ಅತಿ ಮುಖ್ಯವಾದ್ದು ವರ್ಣ ಧರ್ಮ, ಏಕೆಂದರೆ ಅದು "ಸ್ವಭಾವಜ" (ಸ್ವಭಾವದಿಂದಲೇ ಹುಟ್ಟಿರುವುದು). "ಸ್ವಭಾವ"ವನ್ನು ಒಪ್ಪಿದರೆ ಆಮೇಲೆ ಇನ್ನೇನುಳಿಯುತ್ತದೆ? ಧರ್ಮಶಾಸ್ತ್ರಕಾರರು ಸಮಾಜದಲ್ಲಿದ್ದ ಶ್ರೇಷ್ಠ–ಕನಿಷ್ಠ ಎಂಬ ಶ್ರೇಣಿಗಳನ್ನು ನಮೂದಿಸಿದ್ದಾರಲ್ಲ, ಅದರಂತೆ ನಡೆದುಕೊಳ್ಳುವುದಷ್ಟೇ ತಾನೆ? ಲೋಕಾಯತ ದರ್ಶನವು ತನ್ನ ಪ್ರಮುಖ ಪ್ರತಿಪಾದನೆಗೆ "ಸ್ವಭಾವ" ಎಂಬುದಕ್ಕೆ ಒತ್ತುಕೊಟ್ಟಿದೆ, ಆದರೆ ಅದು ಪ್ರಕೃತಿಯಲ್ಲಿನ ಚಲನೆಗಳಿಗೆ ಸಂಬಂಧಿಸಿದ್ದು. ಉದಾಹರಣೆಗೆ, ಬೆಂಕಿಗೆ ಸುಡುವ ಸ್ವಭಾವವಿದೆ, ನೀರಿಗೆ ಹರಿಯುವ ಸ್ವಭಾವವಿದೆ, ಕಲ್ಲಿಗೆ ಗಟ್ಟಿಯಾಗಿರುವ ಸ್ವಭಾವವಿದೆ. ಮಾದಕ ಗುಣಗಳಿಲ್ಲದ ದ್ರವ್ಯಗಳನ್ನು ಬಳಸಿ ಮಾದಕ ಗುಣವಿರುವ ಪಾನೀಯವನ್ನು ತಯಾರಿಸಬಹುದು. ಹಾಗೆ ಮಾಡಲು ಸಾಧ್ಯವಾಗುವುದು ದ್ರವ್ಯಗಳ ಸ್ವಭಾವದಿಂದ. ವೀಳೆಯದೆಲೆ, ಅಡಿಕೆ ಮತ್ತು ಸುಣ್ಣ, ಇವುಗಳಲ್ಲಿ ಕೆಂಪು ಬಣ್ಣವಿಲ್ಲ; ಆದರೆ ಅವನ್ನು ಒಟ್ಟುಗೂಡಿಸಿ ಜಗಿದಾಗ ಕೆಂಪು ಉದ್ಭವವಾಗುವುದು ಸ್ವಭಾವ. ಜೀವಂತ ವ್ಯಕ್ತಿಗಳನ್ನು "ಸ್ವಭಾವತಃ" ಶ್ರೇಣಿಗಳನ್ನಾಗಿ ವಿಂಗಡಿಸುವುದು ಲೋಕಾಯತರಿಗೆ ಒಪ್ಪಿಗೆಯಾಗಿರಲಿಲ್ಲ; ಅಂತಹ ವಿಭಜನೆಯನ್ನು ಅವರು ತೀವ್ರವಾಗಿ ವಿರೋಧಿಸಿದರು. ಪ್ರಕೃತಿಯಲ್ಲಿನ ಚಲನೆಗೆ ಗೀತೆಯು 'ಸ್ವಭಾವ'ವನ್ನು ಕಾರಣವಾಗಿ ಗುರುತಿಸುವುದಿಲ್ಲ; ಬದಲಾಗಿ, ಭಗವಂತನು ಆ ಚಲನೆಯ ಹಿಂದಿನ ಶಕ್ತಿಯೆಂದು

ಗುರುತಿಸುತ್ತದೆ. ಎಲ್ಲವೂ "ನನ್ನಿಂದ ಆಯಿತು" ಎಂದು ಶ್ರೀ ಭಗವಾನನು ಪದೇಪದೇ ಉಚ್ಚರಿಸಿದ್ದಾನೆ. ವರ್ಣಗಳ ಸೃಷ್ಟಿಕರ್ತನೂ ಅವನೇ, ವರ್ಣಗಳ ಶ್ರೇಷ್ಠತೆ–ಕನಿಷ್ಠತೆಗಳೂ ಅವನ ನಿರ್ಮಾಣವೇ! ಸಾಂಖ್ಯ, ವೈಶೇಷಿಕ, ಬೌದ್ಧ ಮತ್ತು ಲೋಕಾಯತ ದರ್ಶನಗಳು ಅದಕ್ಕೆ ವ್ಯತಿರಿಕ್ತವಾಗಿ ಪ್ರಕೃತಿಯಲ್ಲಿನ ಚಲನೆಗಳು "ಪ್ರಕೃತಿಜ", ಅದು ಪ್ರಕೃತಿ ಸಹಜ ಅಥವಾ ಪ್ರಕೃತಿಯ ಸ್ವಭಾವ, ಎಂದು ಭಾವಿಸುತ್ತವೆ. ಆ ಅರ್ಥದಲ್ಲಿ ಅವು ಭೌತವಾದಿ ದರ್ಶನಗಳು, ವರ್ಣ ವಿಭಜನೆಯನ್ನು 'ಸ್ವಭಾವ'ವೆಂದು ಅಂಗೀಕರಿಸದ ದರ್ಶನಗಳು. ಗೀತೆಗೆ ಪದಾರ್ಥ ವಿಜ್ಞಾನಕ್ಕಿಂತಲೂ ವರ್ಣ ಧರ್ಮಗಳು ಹೆಚ್ಚು ಆಸಕ್ತಿಯ ವಿಷಯಗಳು ಎಂದಂತಾಯಿತು. ಸಾಮಾಜಿಕ ಸ್ಥಗಿತತೆಯು ಪ್ರಕೃತಿಯ ಸ್ವಭಾವವಲ್ಲವೆಂಬುದು ಸಮಾಜ ವಿಕಾಸದ ಇತಿಹಾಸದಿಂದ ತಿಳಿಯುತ್ತದೆ; ಆದರೆ ಅದು ಸ್ಥಗಿತವಾಗಿರಬೇಕೆಂಬುದು ಗೀತೆಯ ಆಶಯ.

ಶ್ರೀಭಗವಾನನು ನಾಲ್ಕು ವರ್ಣಗಳನ್ನಾಗಿ ಸಮಾಜವನ್ನು ವಿಭಜಿಸಿದ್ದಾನೆ ಎಂಬುದಕ್ಕಿಂತಲೂ ನಾಲ್ಕು ವರ್ಣದವರೂ ಅವರವರ ಸ್ವಭಾವದಿಂದಾಗಿ ನಿರ್ದಿಷ್ಟ ಕರ್ಮಗಳಿಗೆ ಬದ್ಧರಾಗಿದ್ದಾರೆ, ಬದ್ಧರಾಗಿರಬೇಕು, ಎಂಬ ಗೀತೆಯ ಆಶಯವು ಹೆಚ್ಚು ಅಸಹ್ಯಕರವಾಗಿದೆ, ಅಪಾಯಕಾರಿಯಾಗಿದೆ. ಗೀತೆಯ ಸಂದೇಶದಲ್ಲಿ ಈ ಅಭಿಪ್ರಾಯದ ಬಗ್ಗೆ ಸಂಶಯಕ್ಕೆ ಎಳ್ಳಷ್ಟೂ ಅವಕಾಶವಿಲ್ಲ. "ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರ ಕರ್ತವ್ಯಗಳು (ಕರ್ಮಗಳು) ನಿರ್ದಿಷ್ಟವಾಗಿ ವಿಂಗಡಿಸಲ್ಪಟ್ಟಿವೆ ಮತ್ತು ಆ ಕರ್ತವ್ಯಗಳು ಸ್ವಭಾವತಃ ಆಯಾ ವರ್ಣಗಳಿಗೆ ನಿಬದ್ಧವಾಗಿವೆ" ಎನ್ನುತ್ತದೆ ಗೀತೆ (೧೮.೪೧ : ಬ್ರಾಹ್ಮಣ ಕ್ಷತ್ರಿಯ ವಿಶಾಂ ಶೂದ್ರಾಣಾಂ ಚ ಪರಂತಪ। ಕರ್ಮಾಣಿ ಪ್ರವಿಭಕ್ತಾನಿ ಸ್ವಭಾವ ಪ್ರಭವೈರ್ಗುಣೈಃ॥). ಶ್ಲೋಕದ ರಚನೆಯಲ್ಲಿ ಕರ್ತೃವು ನಾಲ್ಕು ವರ್ಣದವರನ್ನೂ ಒಟ್ಟಿಗೆ ಹೆಸರಿಸಿ ಸಮಾಸ ಪದವನ್ನು ಮಾಡಬಹುದಿತ್ತು, ಆದರೆ ಹಾಗೆ ಮಾಡಿಲ್ಲ. ಮೂರು ವರ್ಣದವರು ಒಂದು ಸಮಾಸ ಪದದಲ್ಲಿ ಸೇರಿಸಲ್ಪಟ್ಟಿದ್ದಾರೆ, ನಾಲ್ಕನೆಯ ಶೂದ್ರ ವರ್ಣವನ್ನು ಶ್ಲೋಕದ ರಚನೆಯಲ್ಲಿ ಕೂಡ ಪ್ರತ್ಯೇಕವಾಗಿ ಇರಿಸಲಾಗಿದೆ! ಏಕೆ ಹಾಗೆ ಮಾಡಲಾಗಿದೆಯೆಂಬುದನ್ನು ಶಂಕರ ವಿವರಿಸಿದ್ದಾನೆ: ಮೊದಲ ಮೂರು 'ಏಕಜಾತಿಯವು', ಅವರೆಲ್ಲಾ ದ್ವಿಜರು; ಶೂದ್ರರು ಬೇರೆ, ಅವರು ದ್ವಿಜರಲ್ಲ. (...ಅಸಮಾಸಕರಣಂ ಏಕಜಾತಿತ್ವೇ ಸತಿ ವೇದೇ ಅನಧಿಕಾರಾತ್... ಇತರೇತರ ವಿಭಾಗೇನ ವ್ಯವಸ್ಥಾಪಿತಾನಿ). ಈ ವಿಂಗಡಣೆಯನ್ನು ಮಹಾನ್ ಶ್ರೇಯಸ್ಕರವೆಂದು ಭಾವಿಸುವ ಭಗವದ್ಗೀತೆಗೆ ಜ್ಞಾನ, ಧ್ಯಾನ, ಭಕ್ತಿ, ಮುಂತಾದವು ಆದ್ಯತೆಯ ವಿಷಯಗಳೋ ಅಥವಾ "ಸ್ವಭಾವಜ ಕರ್ಮ"ದ ಆಧಾರದ ಮೇಲಿನ ಸಾಮಾಜಿಕ ಶ್ರೇಣೀಕರಣವು ಆದ್ಯತೆಯ ವಿಷಯವೋ? ಗೀತೆಯು ಸಮಾಪ್ತವಾಗುತ್ತಿರುವುದು ನಾಲ್ಕು ವರ್ಣಗಳ "ಸ್ವಾಭಾವಿಕ" ಭಿನ್ನತೆಯ ಮತ್ತು ವಿಭಿನ್ನ ಕರ್ಮಗಳ ಪ್ರತಿಪಾದನೆಯಿಂದ ಎಂಬುದು ಗಮನಾರ್ಹ. "ಈ ಗುಣಗಳ ಆವಿರ್ಭಾವಕ್ಕೆ ಬೇರೇನೂ ಕಾರಣವಿಲ್ಲದಿರುವುದರಿಂದ ಸ್ವಭಾವವೇ ಗುಣಗಳಿಗೆ ಕಾರಣವೆಂದರ್ಥ" ಎಂಬುದು ಶಂಕರನ ಮಹಾ ವ್ಯಾಖ್ಯಾನ (ಗುಣ ಪ್ರಾದುರ್ಭಾವಸ್ಯ ನಿಷ್ಕಾರಣತ್ವ ಅನುಪಪತ್ತೇಃ ಸ್ವಭಾವಃ ಕಾರಣಮಿತಿ ಕಾರಣವಿಶೇಷೋಪಪಾದನಂ). ಇದನ್ನು ಕೇಳಿದ ನಂತರವೂ ಶೂದ್ರರೆನ್ನಲಾದವರು ಗೀತೆಗೆ ಶರಣಾಗುವುದಾದರೆ ಅದನ್ನು ವಿಪರ್ಯಾಸ ಎನ್ನಬೇಕಷ್ಟೆ. ಬೇರೆಷ್ಟೋ ಧರ್ಮಶಾಸ್ತ್ರ ಗ್ರಂಥಗಳನ್ನು ಉದ್ಧರಿಸಿ ವರ್ಣಗಳ ಶ್ರೇಣೀಕರಣವನ್ನು ಸಮರ್ಥಿಸುವ ಮಧುಸೂದನ ಸರಸ್ವತಿಯು ಆಪಸ್ತಂಬ ಧರ್ಮಸೂತ್ರದ ಒಂದು ವಾಕ್ಯವನ್ನೂ ಉದ್ಧರಿಸಿರುವುದನ್ನು ಗಮನಿಸಬೇಕು : "ಇತರ ವರ್ಣಗಳವರ ಶುಶ್ರೂಷೆ ಮಾಡುವುದು ಶೂದ್ರರ ಕರ್ತವ್ಯ" (೧.೧.೫ : ಶುಶ್ರೂಷಾ ಶೂದ್ರಸ್ಯ ಇತರೇಷಾಂ ವರ್ಣಾನಾಂ). ಅದನ್ನೇ ಗೀತೆಯು "ಶೂದ್ರರ ಸ್ವಭಾವಜ ಕರ್ಮ" ಎನ್ನುತ್ತದೆ.

ಗೀತೆಯು ತಥಾಕಥಿತ "ಸ್ವಭಾವಜ" ವರ್ಣಧರ್ಮವನ್ನು ಕುರಿತು ಇಷ್ಟೆಲ್ಲಾ ಹೇಳಿದ್ದರೂ ಅದೆಲ್ಲಾ ಇಂದಿನ ಸಂದರ್ಭದಲ್ಲಿ ಅಪ್ರಸ್ತುತವಾಗಿಹೋಗಿದೆ, ಆದ್ದರಿಂದ ಅದು ಇನ್ನಾವ ಹೊಸ ಕೆಡುಕನ್ನೂ ಉಂಟು ಮಾಡಲಾರದು. "ಸತ್ತ್ವ" ಗುಣ ಉಳ್ಳವರೆಂದು ಶ್ಲಾಘಿಸಲಾಗಿರುವ ಬ್ರಾಹ್ಮಣ ವರ್ಣದವರು ಮತ್ತು ಅವರ ವರ್ಣದ ಅನೇಕ 'ಸ್ವಾಮಿ'ಗಳು ತಮೋಗುಣಕ್ಕಿಂತಲೂ ಕೆಳಗಿನ ಮಟ್ಟದ ಗುಣಗಳಲ್ಲಿ ಮಿಂದು ಸುಖಿಸುತ್ತಿರುವುದನ್ನು ಕಾಣುತ್ತಿದ್ದೇವೆ ಮತ್ತು ತಮೋಗುಣದವರೆಂದು ಹೀಯಾಳಿಸಲಾದ ಶೂದ್ರ ವರ್ಣದ ಬಹುಮಂದಿ ಬೇರೆ ವರ್ಣದವರ ಶುಶ್ರೂಷೆ ಮಾಡಿಕೊಂಡಿರುವುದರಿಂದ ಮುಕ್ತರಾಗಿ ಸುಮಾರು ಎರಡು ಶತಮಾನಗಳಿಂದ ತಮ್ಮದೇ ಶ್ರೇಯಸ್ಸಿನ ಹಾದಿಯಲ್ಲಿ ಮುನ್ನಡೆಯುತ್ತಿದ್ದಾರೆ. ಗೀತೆಯ ಬೇರೆ ಕೆಲವು ತತ್ವಗಳನ್ನು ಬೂಟಾಟಿಕೆಗಾದರೂ ಎತ್ತಿಹಿಡಿಯುವ ಸಂಪ್ರದಾಯವಿದೆ, ಆದರೆ "ಸ್ವಭಾವಜ" ವರ್ಣಧರ್ಮಗಳನ್ನು ಕಟ್ಟುನಿಟ್ಟಾಗಿ ಪಾಲಿಸಬೇಕೆಂದು ಬಹಿರಂಗವಾಗಿ, ಗಟ್ಟಿಯಾಗಿ, ಹೇಳಬಹುದಾಗಿದ್ದವರ ಉಸಿರು ಅಡಗಿಹೋಗಿದೆ. ಅದು ಸ್ವಾಗತಾರ್ಹ ಬೆಳವಣಿಗೆ. ಆದರೆ ಗೀತೆಯು ಅಸ್ತಿತ್ವಕ್ಕೆ ಬಂದ ಕಾಲದಲ್ಲಿ ಮತ್ತು ಮುಂದಿನ ಕೆಲವು ಶತಮಾನಗಳಲ್ಲಿ ನಮ್ಮ ದೇಶದ ಬೌದ್ಧಿಕ ಮತ್ತು ಸಾಂಸ್ಕೃತಿಕ ಜೀವನಕ್ಕೆ ಅದು ಸಾಕಷ್ಟು ಹುಳಿ ಹಿಂಡಿದ್ದಿತು. ಉದಾಹರಣೆಗೆ, ಲೋಕಾಯತ ದರ್ಶನವನ್ನು ಮೂದಲಿಸುವ ಪರಂಪರೆಗೆ ಅದರ ಕಾಣಿಕೆ ಬೇಕಾದಷ್ಟಿದೆ. ಬುದ್ಧನ ಸಾಮಾಜಿಕ ಮತ್ತು ದಾರ್ಶನಿಕ ದೃಷ್ಟಿಯ ವ್ಯಾಪಕ ಬೆಳವಣಿಗೆಗೆ ಗೀತೆಯು ಅಡ್ಡಗಾಲು ಹಾಕಿರುವುದು ಢಾಳಾಗಿ ಕಂಡುಬರುತ್ತದೆ. ಶಂಕರನಿಗೆ ಮುನ್ನ ಗೀತೆಗೆ ಯಾವ ಮತಧರ್ಮೀಯ ಮತ್ತು ಸಾಮಾಜಿಕ ಸ್ಥಾನವಿತ್ತೆಂದು ಹೇಳಬರುವುದಿಲ್ಲ. ಸಾಹಿತ್ಯ ಮತ್ತು ದರ್ಶನ ಗ್ರಂಥಗಳಲ್ಲಿ ಗೀತೆಯ ಪ್ರಸ್ತಾಪವು ಶಂಕರನಿಗೆ ಮುನ್ನ ಬಂದಿರುವುದು ಪ್ರಸ್ತುತ ಲೇಖಕನಿಗೆ ತಿಳಿಯದು. ಏಳನೆಯ ಶತಮಾನದಲ್ಲಿನ್ನೂ ಬೌದ್ಧಮತದ ಪ್ರಭಾವ ಮತ್ತು ವ್ಯಾಪಕತೆ ಗಣನೀಯ ಮಟ್ಟದಲ್ಲಿತ್ತು.

ಗೀತೆಗೂ ಮುಂಚೆ ಬಂದಿದ್ದ ಬ್ರಹ್ಮಸೂತ್ರವು ನಮ್ಮ ದೇಶದ ದಾರ್ಶನಿಕ ಬಹುಲತ್ವದ ಪರಂಪರೆಗೆ ಅಗಾಧ ಪೆಟ್ಟು ಕೊಟ್ಟಿದ್ದಿತು. ಅತ್ಯಂತ ಅಚಾರಿತ್ರಿಕವಾದ ಮತ್ತು ಬೌದ್ಧಿಕವಾಗಿ ನಿರಾಕರಣೆಗೆ ಯೋಗ್ಯವಾದ ಪ್ರಮೇಯಗಳನ್ನು ಬ್ರಹ್ಮಸೂತ್ರವು ಮಂಡಿಸಿತು. ಎಲ್ಲ ಉಪನಿಷತ್ತುಗಳೂ 'ಏಕಾರ್ಥತೆ'ಯನ್ನು ಹೊಂದಿವೆಯೆಂದೂ, ಅನೇಕಾರ್ಥವೇನಾದರೂ ಕಂಡುಬಂದರೆ ಸಮನ್ವಯ ಮಾಡಿಕೊಂಡು ಏಕಾರ್ಥವನ್ನು ಅರಸಬೇಕೆಂದೂ ಬ್ರಹ್ಮಸೂತ್ರವು ಬೋಧಿಸಿತು. ಯಾವುದೇ ಒಬ್ಬ ವ್ಯಕ್ತಿಯಿಂದ ರಚಿತವಾಗದ ಉಪನಿಷತ್ತುಗಳು ಒಂದು ನಿರ್ದಿಷ್ಟ ಕಾಲದವಲ್ಲ, ಒಂದು ಪ್ರದೇಶದಲ್ಲಿ ಜನಿಸಲಿಲ್ಲ. ಹಾಗಿರುವಾಗ ಎಲ್ಲ ಉಪನಿಷತ್ತುಗಳೂ 'ಬ್ರಹ್ಮನ್' ಒಂದನ್ನೇ ಬೋಧಿಸುತ್ತವೆಂದು ಹೇಳುವುದು ದೊಡ್ಡ ವಿಪರ್ಯಾಸ. ಛಾಂದೋಗ್ಯದಲ್ಲಿ ಸಾಂಖ್ಯದ ನಿರೂಪಣೆ ಇದೆ (೬.೨.೧–೩). ಅದನ್ನು ಬ್ರಹ್ಮಸೂತ್ರವು ಪೂರ್ತಿ ತಿರುಚಿಹಾಕಿಬಿಟ್ಟಿತು. 'ತತ್ತ್ವಮಸಿ' ಪ್ರಸಂಗದಲ್ಲಿ (ಛಾಂದೋಗ್ಯ ೬.೧೨.೧–೩) ಎಲ್ಲೂ 'ಬ್ರಹ್ಮನ್' ಎಂಬುದರ ಪ್ರಸ್ತಾಪವೇ ಇಲ್ಲ, ಆದರೆ ಅದನ್ನು ಬ್ರಹ್ಮಸೂತ್ರವು ಹುಟ್ಟುಹಾಕಿತು. ಒಂದೇ ತತ್ತ್ವವನ್ನು ಬೋಧಿಸುವಂತಿದ್ದರೆ ಅಷ್ಟೊಂದು ಉಪನಿಷತ್ತುಗಳು ಏಕೆ ಬೇಕಿತ್ತು? ಇಷ್ಟು ಸರಳವಾದ ಪ್ರಶ್ನೆಯನ್ನು ಎತ್ತದೆ ಹಲವು ಶತಮಾನಗಳ ಕಾಲ ಉಪನಿಷತ್ತುಗಳ ವ್ಯಾಪಕ ಚರ್ಚೆಗಳನ್ನು ತಣ್ಣಗಾಗಿಸಿದ್ದು ನಮ್ಮ ಪರಂಪರೆಗೆ ಮಹಾನ್ ಆಘಾತವಾಯಿತು. ಶ್ವೇತಾಶ್ವತರ ಉಪನಿಷತ್ತು ಆರಂಭವಾಗುವುದೇ ಹಲವು ಪ್ರಮೇಯಗಳ ಸಾಧ್ಯತೆಯ ಪ್ರತಿಪಾದನೆಯೊಂದಿಗೆ, ಆದರೆ ಎಲ್ಲವನ್ನೂ 'ಬ್ರಹ್ಮಮಯ' ಮಾಡಲಾಯಿತು. ಈ ಸ್ಖಲಿತ ಸಂಪ್ರದಾಯವನ್ನು ಮುಂದುವರಿಸಿ ಗೀತೆಯು ಎಲ್ಲವೂ 'ಶ್ರೀಭಗವಾನ್'ಮಯವೆಂದು ಘೋಷಿಸಿಬಿಟ್ಟಿತು; ಸಾಮಾಜಿಕ ಏರುಪೇರನ್ನು ಸಮರ್ಥಿಸಲು "ಸ್ವಭಾವಜ" ವರ್ಣಧರ್ಮಗಳ ಕಂತೆ ಪುರಾಣವನ್ನು ತೆರೆದಿಟ್ಟಿತು! ಗೀತೆಯನ್ನು ಅಂದಿನ ಚಾರಿತ್ರಿಕ ಸನ್ನಿವೇಶದಿಂದ ಬೇರ್ಪಡಿಸಿ ಅಬದ್ಧ ವ್ಯಾಖ್ಯಾನಗಳನ್ನು ನೀಡುವುದು ನಿಜಕ್ಕೂ ಹಾಸ್ಯಾಸ್ಪದವಾಗುತ್ತದೆ. ಆದ್ದರಿಂದಲೇ "ಕರ್ಮಾಣಿ ಪ್ರವಿಭಕ್ತಾನಿ ಸ್ವಭಾವ ಪ್ರಭವೈರ್ಗುಣೈಃ" (೧೮.೪೧) ಎಂಬುದನ್ನು ಗೀತೆಯ ಸಮಾಜ ವಿರೋಧಿ ನೀತಿಯೆಂದು ಪರಿಗಣಿಸಬೇಕಾಗುತ್ತದೆ.

ಈಗ ನಾಲ್ಕು ವರ್ಣಗಳ "ಸ್ವಭಾವಜ" ಕರ್ಮಗಳನ್ನು ಗೀತೆಯು ಹೇಗೆ ಪರಿಭಾವಿಸಿಕೊಂಡಿದೆ ಎಂಬುದನ್ನು ನೋಡೋಣ : ಬ್ರಾಹ್ಮಣ ಜಾತಿಯ (ಆ ಪದವನ್ನು ಶಂಕರನೇ ಬಳಸಿದ್ದಾನೆ) "ಸ್ವಭಾವಜ" ಕರ್ಮಗಳೆಂದರೆ ಅಂತರಿಂದ್ರಿಯಗಳನ್ನೂ ಬಾಹ್ಯೇಂದ್ರಿಯಗಳನ್ನೂ ಹದ್ದುಬಸ್ತಿನಲ್ಲಿ ಇಟ್ಟುಕೊಂಡಿರುವುದು (ಬೇರೆ ಜಾತಿಯವರು ಹಾಗೆ ಮಾಡದಿದ್ದರೂ ಪರವಾಗಿಲ್ಲವೇನೋ!), ತಪಸ್ಸು ಮಾಡುವುದು, ಶುಚಿತ್ವವನ್ನು ಕಾಪಾಡಿಕೊಳ್ಳುವುದು, ಕ್ಷಮಾಲಕ್ಷಣ ಹೊಂದಿರುವುದು, ನೇರ ಸ್ವಭಾವದವರಾಗಿರುವುದು, ಜ್ಞಾನಾರ್ಥಿಯಾಗಿರುವುದು ಮತ್ತು ವೈದಿಕ ಕ್ರಿಯೆಗಳನ್ನು ಮಾಡುತ್ತಿರುವುದು (೧೮.೪೨ : ಶಮೋ ದಮಸ್ತಪಃ ಶೌಚಂ ಕ್ಷಾಂತಿರಾರ್ಜವಮೇವ ಚ। ಜ್ಞಾನಂ ವಿಜ್ಞಾನಮಾಸ್ತಿಕ್ಯಂ ಬ್ರಹ್ಮಕರ್ಮ ಸ್ವಭಾವಜಂ॥). ಅವನಿಗೆ ಉತ್ಪಾದನಾ ಕ್ರಿಯೆಗಳೇನನ್ನೂ ಸೂಚಿಸಿಲ್ಲವೆಂಬುದನ್ನು

ಗಮನಿಸಬೇಕು. ಗೀತಾಜ್ಞಾನಯಜ್ಞದ ಹೆಸರಿನಲ್ಲಿ ಉಪನ್ಯಾಸ ಮಾಡುವವರು ಇಂತಹ ಶ್ಲೋಕಗಳನ್ನು ಪಠಿಸಿ ಎಷ್ಟೆಲ್ಲಾ ದಿವ್ಯವಾದ ಗುಣಗಳನ್ನು ಮಾನವ ಹೊಂದಬೇಕೆಂದು ಗೀತೆಯು ಬೋಧಿಸಿದೆಯಲ್ಲಾ ಎಂದು ಭಾವಪರವಶರಾಗುವುದುಂಟು. ಗೀತೆಯು ಆ ಗುಣಗಳು ಮಾನವರಿಗೆಲ್ಲಾ ಇವೆ ಅಥವಾ ಇರಬೇಕೆಂದು ಹೇಳಿಲ್ಲ, ಅವು ಬ್ರಾಹ್ಮಣ ಜಾತಿಯವರ 'ಸ್ವಭಾವಜ' ಗುಣಗಳೆಂದಷ್ಟೇ ಹೇಳಿದೆ. ಶೂದ್ರಾದಿ "ನಿಕೃಷ್ಟ" ಜಾತಿಯವರು ಅವನ್ನೆಲ್ಲಾ ಹೊಂದಲಾರರೆಂದೋ, ಹೊಂದಬೇಕಿಲ್ಲವೆಂದೋ ಗೀತೆಯು ಭಾವಿಸಿದಂತಿದೆ. ಅವರು ಈ ಗುಣಗಳನ್ನು ಹೊಂದಿ ಕೂತರೆ ಕೃಷಿ ಮಾಡುವವರು ಯಾರು, ಕೂಲಿ ಮಾಡುವವರು ಯಾರು? ವರ್ಣಾಧಾರಿತ ಸಾಮಾಜಿಕ ಶ್ರೇಣೀಕರಣವು ಶ್ರೇಷ್ಠ ಮತ್ತು ಕನಿಷ್ಠ ಗುಣಗಳನ್ನು ಹೇಳುವುದಷ್ಟೇ ಅಲ್ಲ, ಹೊಟ್ಟೆ ಹೊರೆಯಲು ಮತ್ತು ಇತರರ ಹೊಟ್ಟೆ ತುಂಬಿಸಲು ಯಾರು ದುಡಿಯಬೇಕೆಂಬುದನ್ನೂ ನಿರ್ದಿಷ್ಟವಾಗಿ ಸೂಚಿಸುತ್ತದೆಂಬುದನ್ನು ಸದ್ಯದಲ್ಲೇ ನೋಡೋಣ. ಮಧುಸೂದನ ಸರಸ್ವತಿ ಹೇಳುತ್ತಾನೆ : "ಈ ಲಕ್ಷಣಗಳು ಎಲ್ಲ ಜಾತಿಯವರಲ್ಲೂ ಇರಲು ಸಾಧ್ಯ, ಆದರೆ ಅವರಲ್ಲಿ ಸತ್ತ್ವಗುಣದ ಆಧಿಕ್ಯವಿರಬೇಕು; ಆದರೆ ಬ್ರಾಹ್ಮಣ ಜಾತಿಯವರಲ್ಲಿ ಅದು ಹೇರಳ ವಾಗಿದೆ." ಈ ಮಾತು ಅಂದೂ ನಿಜವಾಗಿರಲಿಲ್ಲ, ಇಂದೂ ನಿಜವಾಗಿಲ್ಲ ಎಂಬುದು ಸಾಮಾನ್ಯ ಅನುಭವದ ಮಾತು. ತನ್ನ ಮಾತನ್ನು ಸಮರ್ಥಿಸಲು ಮಧುಸೂದನನು ವಿಷ್ಣು ಪುರಾಣ, ಬೃಹಸ್ಪತಿ ಸೂತ್ರ, ಮಹಾಭಾರತ, ಗೌತಮ ಸೂತ್ರ, ದೇವಲ ಸೂತ್ರ, ಯಾಜ್ಞವಲ್ಕ್ಯ ಸ್ಮೃತಿ, ಮುಂತಾದ ಗ್ರಂಥಗಳಿಂದ ವಾಕ್ಯಗಳನ್ನು ಉದ್ಧರಿಸಿದ್ದಾನೆ. ವಾಕ್ಯಗಳಿಗೇನೂ ಕೊರತೆ ಇಲ್ಲ, ಕೊರತೆ ಇರುವುದು ನಿಜ ಜೀವನದ ಆಚರಣೆಯಲ್ಲಿ. ವಾಸ್ತವ ಜೀವನದಲ್ಲಿ ಶ್ರೇಷ್ಠ–ಕನಿಷ್ಠ ಎಂಬ ತಾರತಮ್ಯವನ್ನು ನೆಲೆಗೊಳಿಸಿ, ಎಲ್ಲರೂ ಶ್ರೇಷ್ಠರಾಗಿರಲು ಅಡ್ಡಿಯಿಲ್ಲ, ಎಂದು ಹೇಳುವುದು ಗಾಯದ ಮೇಲೆ ಉಪ್ಪು ಹಚ್ಚುವುದಕ್ಕೆ ಸಮ. ನಮ್ಮ ತಾಂಡಾಗಳಲ್ಲಿರುವ ಲಂಬಾಣಿಗಳು ಅರಮನೆ ಯಂತಹ ಮಹಲುಗಳನ್ನು ಕಟ್ಟಿಕೊಂಡು ಅವುಗಳಲ್ಲಿ ವಾಸಮಾಡಲು ಸಂವಿಧಾನವು ಅಡ್ಡಿಬರುವುದಿಲ್ಲ, ಎಂದು ಹೇಳಿದಂತಾಯಿತು!

ಈಗ ಕ್ಷತ್ರಿಯರ "ಸ್ವಭಾವಜ" ಗುಣಗಳನ್ನು ತಿಳಿಯೋಣ : ಶೌರ್ಯ, ತೇಜಸ್ಸು, ಧೃತಿ, ಕಷ್ಟಸಹಿಷ್ಣುತೆ, ರಣರಂಗದಿಂದ ಪಲಾಯನ ಮಾಡದಿರುವುದು, ದಾನ, ಆಳುವ ವರ್ಚಸ್ಸು, ಇವು ಅವರ ಗುಣಗಳು (೧೮.೪೩ : ಶೌರ್ಯಂ ತೇಜೋ ಧೃತಿರ್ದಾಕ್ಷ್ಯಂ ಯುದ್ಧೇ ಚಾಪಿ ಅಪಲಾಯನಂ। ದಾನಮೀಶ್ವರ ಭಾವಶ್ಚ ಕ್ಷತ್ರಕರ್ಮ ಸ್ವಭಾವಜಂ ॥). ಅಂದರೆ, ಪೇಶ್ವೆಗಳ ವಿರುದ್ಧ ಯುದ್ಧದಲ್ಲಿ ಮಹಾರರು ಪಲಾಯನ ಮಾಡಬೇಕಿತ್ತು, ಸೆಟೆದುನಿಂತು ಅವರನ್ನು ಸೋಲಿಸಬಾರದಿತ್ತು! ಪೇಶ್ವೆಗಳು ಸೋತಿದ್ದು ಅವರ "ಸ್ವಭಾವಜ" ಗುಣಗಳಿಗೆ ಹೊಂದುವಂತಿತ್ತು, ಏಕೆಂದರೆ ಅವರು ಕ್ಷತ್ರಿಯರಾಗಿರಲಿಲ್ಲವಲ್ಲ! ಹಾಗೆಲ್ಲಾ ದೃಷ್ಟಾಂತಗಳನ್ನು ನೀಡುವುದು ಉಚಿತವಲ್ಲವೆಂದು ಗೀತಾಚಾರ್ಯರು ಹೇಳಬಹುದು, ಬಿಡಿ.




ವೈಶ್ಯರಿಗೆ ಮತ್ತು ಶೂದ್ರರಿಗೆ ಗೀತೆಯು ಪ್ರತ್ಯೇಕ ವಾಗಿ ಎರಡು ಶ್ಲೋಕಗಳನ್ನು ಮೀಸಲಿಡುವ ಬದಲು ಒಂದೇ ಶ್ಲೋಕದಲ್ಲಿ ಎರಡೂ ವರ್ಣಗಳ ಜನ್ಮವನ್ನು ಜಾಡಿಸಿಬಿಡುತ್ತದೆ (೧೮.೪೪ : ಕೃಷಿಗೌರಕ್ಷ್ಯ ವಾಣಿಜ್ಯಂ ವೈಶ್ಯಕರ್ಮಂ ಸ್ವಭಾವಜಂ। ಪರಿಚರ್ಯಾತ್ಮಕಂ ಕರ್ಮ ಶೂದ್ರಸ್ಯಾಪಿ ಸ್ವಭಾವಜಂ ॥). ಅರ್ಥವನ್ನು ವಿವರಿಸ ಬೇಕಾಗಿಲ್ಲವಲ್ಲವೆ? ಶೂದ್ರನಿಗೆ ತುಂಡುಭೂಮಿಯ ಆಸ್ತಿಯೂ ಕೂಡದೆಂಬುದು ಧರ್ಮಶಾಸ್ತ್ರಗಳ ಮತ್ತು ಗೀತೆಯ ಆಣತಿ. ಆದ್ದರಿಂದ ಅವರು ಸ್ವಂತದ ಕೃಷಿ, ಗೋವುಗಳ ಪಾಲನೆ ಮತ್ತು ವ್ಯಾಪಾರಕ್ಕೆ ಅನರ್ಹರು. ಅವನ್ನು ವೈಶ್ಯರು ಮಾಡಬಹುದು. ಪರರ ಸೇವೆಯಲ್ಲಿ ಜೀವ ತೇಯಬೇಕಾದಂತಹ "ಸ್ವಭಾವ" ಉಳ್ಳವರನ್ನು ನಮ್ಮ ಶ್ರೀಭಗವಾನ್ ಏಕೆ ಸೃಷ್ಟಿಸಿದ ಅಥವಾ ಅವರಲ್ಲಿ ತಮೋಗುಣವನ್ನೇಕೆ ಮಣಗಟ್ಟಲೆ ತುಂಬಿಬಿಟ್ಟ ಎಂಬುದರ ಬಗ್ಗೆ ಗೀತೆಯದು ಮಹಾಮೌನ. ಅಂತಹ ಸಾಮಾಜಿಕ ವ್ಯವಸ್ಥೆಯನ್ನು ನಮ್ಮ ದೇಶ ತನ್ನ ಮೇಲೆ ಹೇರಿಕೊಂಡಿತ್ತು ಎಂಬುದು ಸಹ ನಮ್ಮ 'ಉಜ್ವಲ' ಸಂಸ್ಕೃತಿಯ ಅವಿಚ್ಛಿನ್ನ ಭಾಗ.

ಈಚಿನ ದಶಕಗಳಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನಗಳ ಆಧುನಿಕ ಆವಿಷ್ಕಾರಗಳನ್ನು ಬಳಸಿಕೊಂಡು ಆರ್ಯರ ಮತ್ತು ದ್ರಾವಿಡರ ವಂಶವಾಹಿಗಳನ್ನು (ಅಂದರೆ, ಆಂಗ್ಲಭಾಷೆಯ ಜೀನ್) ಪ್ರಯೋಗ ಮತ್ತು ಸಂಶೋಧನೆ ಗಳಿಂದ ಗುರುತಿಸುವ ಕೆಲಸ ನಡೆದಿದೆ. ಉತ್ತರ ಭಾರತದ ಸಂಶೋಧಕರ ಪ್ರಕಾರ ದ್ರಾವಿಡರದು ಎಂಬ ಪ್ರತ್ಯೇಕ 'ಜೀನ್'ಗಳಿಲ್ಲ; ನಮ್ಮ ದೇಶದಲ್ಲಿರುವುವೆಲ್ಲ ಆರ್ಯ–ಜೀನ್‌ಗಳೇ! ಅದಕ್ಕೆ ಪ್ರತಿಯಾಗಿ ಕೆಲವು ವಿದೇಶಿ ಸಂಶೋಧಕರು ದಕ್ಷಿಣ ಭಾರತದಲ್ಲಿ ಆರ್ಯೇತರ ಜೀನ್‌ಗಳಿವೆಯೆಂದು ಪ್ರತಿಪಾದಿಸಿದ್ದಾರೆ. ಗೀತೆಯ "ಸ್ವಭಾವಜ" ಗುಣಗಳನ್ನಾಧರಿಸಿ ಇಡೀ ದೇಶದಲ್ಲಿ ನಾಲ್ಕು ವರ್ಣಗಳವರ ಜೀನ್‌ಗಳನ್ನು ಗುರುತಿಸುವ ಸಂಶೋಧನೆ ಇನ್ನೂ ನಡೆಯಬೇಕಾಗಿದೆ. ಯಾರಾದರೂ ಗೀತಾಜ್ಞಾನ ಯಜ್ಞ ನಡೆಸುವ ಅಧ್ವರ್ಯುಗಳು ಅಂತಹ ಸಂಶೋಧನೆಯನ್ನು ಮಾಡಿಸಲು ಮುಂದಾಗಬಹುದು!

ಗೀತೆಯ ಮೂಲಭೂತ ಆಶಯವು ವರ್ಣಧರ್ಮ ಗಳನ್ನು ಪ್ರಶ್ನಿಸುವ ಪ್ರವೃತ್ತಿಯನ್ನು ಚಿವುಟಿಹಾಕುವುದು ಎಂಬಂಶವನ್ನು ಈವರೆವಿಗೂ ಹಲವು ಬಾರಿ ಪ್ರಸ್ತಾಪಿಸಿದ್ದೇವೆ. ಗೀತೆಯ ಕಡೆಯ ಅಧ್ಯಾಯದಲ್ಲಿ ಅದಕ್ಕೆ ಸಮರ್ಥನೆ ಇದೆ. ಸ್ವಾರಸ್ಯವೆಂದರೆ, "ಸ್ವಭಾವಜ" ಕರ್ಮಗಳ ಪಾಲನೆಯ ಶ್ರೇಷ್ಠತೆಯನ್ನು ಸಾರಿಹೇಳಿ ಗೀತೆಯು ಕೂಡಲೆ ಬ್ರಹ್ಮಸಾಕ್ಷಾತ್ಕಾರದತ್ತ ಹೊರಳುತ್ತದೆ. ಕಡೆಗೆ ಮತ್ತೆ "ನನ್ನಲ್ಲಿ ನಿರತನಾಗು, ಈಶ್ವರನ ಸೇವೆ ಮಾಡು" ಎಂದು ಹೇಳುತ್ತಾ ವಿರಮಿಸುತ್ತದೆ. ಯಾವ ವಿವರಣೆಯ ಗೋಜಿಗೂ ಹೋಗದೆ ಗೀತೆಯ ಮುಂದಿನ ನಾಲ್ಕು ಶ್ಲೋಕಗಳನ್ನು ಯಥಾವತ್ತಾಗಿ ನಿರೂಪಿಸಿದರೆ ಸಾಕೆನಿಸುತ್ತದೆ :

ತಮ್ಮ ತಮ್ಮ ನಿಗದಿತ ಕೆಲಸಗಳಲ್ಲಿ (ಕರ್ಮದಲ್ಲಿ) ನಿರತರಾದರೆ ಮಾನವರು ಸಂಪೂರ್ಣ ಯಶಸ್ಸು ಗಳಿಸಿಕೊಳ್ಳುತ್ತಾರೆ. ತನ್ನ ಕರ್ಮದಲ್ಲಿ ನಿಯತವಾಗಿ ತೊಡಗಿದವನು ಹೇಗೆ ಯಶಸ್ಸು ಪಡೆಯುತ್ತಾನೆ ಎಂಬುದನ್ನು ಹೇಳುತ್ತೇನೆ, ಕೇಳು (೧೮.೪೫ : ಸ್ವೇ ಸ್ವೇ ಕರ್ಮಣಿ ಅಭಿರತಃ ಸಂಸಿದ್ಧಿಂ ಲಭತೇ ನರಃ। ಸ್ವಕರ್ಮನಿರತಃ ಸಿದ್ಧಿಂ ಯಥಾ ವಿಂದತಿ ತತ್ ಶ್ರುಣು ॥).

ವಿಶ್ವವೆಲ್ಲಾ ಯಾರಿಂದ ಉಂಟಾಗಿದೆಯೋ ಮತ್ತು ಯಾರಿಂದ ಸರ್ವಸ್ವವೂ ಆವೃತವಾಗಿದೆಯೋ ಅವನನ್ನು ತುಷ್ಟಿಗೊಳಿಸಲು ಮಾನವರು ತಮ್ಮ ನಿಗದಿತ ಕರ್ಮ ಗಳನ್ನು ಮಾಡಬೇಕು. ಅದೇ ಅವನಿಗೆ ಪ್ರಿಯ. ಹಾಗೆ "ಸ್ವಕರ್ಮ"ಗಳಲ್ಲಿ ತೊಡಗುವುದು ಸಿದ್ಧಿ ಪಡೆಯಲು ಇರುವ ಹಾದಿ (೧೮.೪೬ : ಯತಃ ಪ್ರವೃತ್ತಿಃ ಭೂತಾನಾಂ ಯೇನ ಸರ್ವಮಿದಂ ತತಂ। ಸ್ವಕರ್ಮಣಾ ತಂ ಅಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ ॥).

ಅವರವರ ಸ್ವಭಾವಜ ಕರ್ಮಗಳು ಅವರವರಿಗೆ ಅತ್ಯಂತ ಶ್ರೇಯಸ್ಕರ. ಬೇರೆಯವರ ಕರ್ಮಗಳನ್ನು ಚೆನ್ನಾಗಿ ಮಾಡುವುದಕ್ಕಿಂತಲೂ, ಸ್ವಲ್ಪ ಕೆಟ್ಟದ್ದಾಗಿ ಯಾದರೂ ಸರಿಯೇ ತನ್ನದೇ ಕರ್ಮಗಳನ್ನು ಮಾಡುವುದು ಶ್ರೇಯಸ್ಕರ. ಸ್ವಭಾವನಿಯತವಾದ ಕರ್ಮವನ್ನು ಮಾಡುವುದರಿಂದ (ಕೆಟ್ಟದ್ದಾಗಿ ಮಾಡಿದರೂ) ಪಾಪವು ವ್ಯಕ್ತಿಯನ್ನು ಆವರಿಸುವುದಿಲ್ಲ (೧೮.೪೭ : ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸು ಅನುಷ್ಠಿತಾತ್। ಸ್ವಭಾವನಿಯತಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಂ ॥).

ತನ್ನ ಸಹಜ (ಸ್ವಭಾವಜ) ಕರ್ಮದಲ್ಲಿ ದೋಷಗಳು ಎದ್ದುಕಾಣುತ್ತಿದ್ದರೂ ಅದನ್ನು ಮಾಡದೆ ಬಿಡಕೂಡದು. ಏನು ಮಾಡಲಾದೀತು, ಅಲ್ಲವೆ? ಬೆಂಕಿಯು ಹೊಗೆಯಿಂದ ಆವೃತವಾಗಿರುವುದು ಸಹಜ. ಹಾಗೆಯೇ ವಿವಿಧ ಕರ್ಮಗಳಲ್ಲಿ ಎಂಥವೋ ದೋಷ ಗಳಿರಲು ಸಾಧ್ಯ, ಆದರೆ ಆ ಕಾರಣಕ್ಕೆ ಅವನ್ನು ಬಿಡಕೂಡದು (೧೮.೪೮ : ಸಹಜಂ ಕರ್ಮ ಕೌಂತೇಯ ಸದೋಷಮಪಿ ನ ತ್ಯಜೇತ್। ಸರ್ವಾರಂಭಾ ಹಿ ದೋಷೇಣ ಧೂಮೇನಾಗ್ನಿರಿವ ಆವೃತಾಃ ॥). ಅದಕ್ಕೇ ಇರಬೇಕು, ಮಲ ಕಟ್ಟಿಕೊಂಡ ಗುಂಡಿಗಳಲ್ಲಿ ಇಳಿದು ಕೆಲವು ಜನ ಪ್ರಾಣ ಕಳೆದುಕೊಳ್ಳುತ್ತಾರೆ. ಸ್ವಭಾವಜ ಗುಣದಿಂದ ಸ್ವಾಭಾವಿಕ ಸಾವು !

ಇಲ್ಲಿ ಮೂರು ಅಂಶಗಳನ್ನು ಗಮನಿಸಬೇಕು: (ಅ) ತೈತ್ತಿರೀಯ ಉಪನಿಷತ್ತಿನಲ್ಲಿ "ಯತೋ ವಾ ಇಮಾನಿ ಭೂತಾನಿ ಜಾಯಂತೇ ಯೇನ ಜಾತಾನಿ ಜೀವಂತಿ ಯತ್ ಪ್ರಯಂತೀ ಅಭಿಸಂವಿಶಂತಿ ತದ್ವಿಜಿಜ್ಞಾಸಸ್ವ ತದ್ಬ್ರಹ್ಮೇತಿ" (೩.೧: ಯಾವುದರಿಂದ ಈ ಭೌತ ಪ್ರಪಂಚವು ಉಂಟಾಯಿತೋ, ಯಾವುದರಿಂದ ಉಂಟಾಗಿರುವುವೆಲ್ಲಾ ಜೀವಿಸುತ್ತವೋ, ಎಲ್ಲಾ ಬಿಟ್ಟು ತೆರಳುವಾಗ ಯಾವುದನ್ನು ಸೇರಿಕೊಳ್ಳುತ್ತವೋ, ಅದನ್ನು ತಿಳಿ, ಅದು ಬ್ರಹ್ಮನ್) ಎಂದು ಹೇಳಿದಾಗ ಒಬ್ಬ ಸೃಷ್ಟಿಕರ್ತ ಭಗವಂತನ ಕಲ್ಪನೆಯಿಲ್ಲ. ಸಾಂಖ್ಯದ ವಿಕಾಸವಾದವಾಗಲಿ, ಶಂಕರನ ವಿವರ್ತವಾದವಾಗಲಿ, ಸೃಷ್ಟಿಕರ್ತನ ಮುಲಾಜಿಲ್ಲದೆ ಅಸ್ತಿತ್ವಕ್ಕೆ ಬರುವ ವಿಶ್ವದ ಬಗ್ಗೆ ಹೇಳುತ್ತವೆ. ಆದರೆ ಗೀತೆಯು ಶ್ರೀಭಗವಾನನನ್ನು ಸೃಷ್ಟಿಕರ್ತನ ಸ್ಥಾನದಲ್ಲಿ ಇರಿಸುತ್ತದೆ. ಲೋಕಾಯತ ಮತ್ತು ಬೌದ್ಧ ದರ್ಶನಗಳಲ್ಲೂ ಸೃಷ್ಟಿಕರ್ತನಿಲ್ಲ. ತೈತ್ತಿರೀಯದ ಬ್ರಹ್ಮನ್‌ಗಾಗಲಿ, ಸಾಂಖ್ಯದ ಪ್ರಕೃತಿಗಾಗಲಿ, ಲೋಕಾಯತದ ಭೌತವಸ್ತುವಿಗಾಗಲಿ, ಪೂಜೆ– ಭಕ್ತಿ–ಧ್ಯಾನ ಸಲ್ಲುವುದಿಲ್ಲ; ಗೀತೆಯ ಶ್ರೀಭಗವಾನನಿಗೆ ಅವು ಸಲ್ಲಬೇಕು. (ಆ) "ತಮ್ಮ ತಮ್ಮ ಕರ್ಮಗಳು" ಎಂದರೆ ವೈದ್ಯ, ತಂತ್ರಜ್ಞ, ಬಡಗಿ, ಅಧ್ಯಾಪಕ, ಇತ್ಯಾದಿಗಳೆಂದು ಗೀತೆಯು ಭಿನ್ನೈಸುತ್ತಿಲ್ಲ; ಅದು "ಸ್ವಭಾವಜ ಕರ್ಮ", ವರ್ಣಾಧಾರಿತ ಕರ್ಮ. ಆದ್ದರಿಂದ "ನಿನ್ನ ಕೆಲಸವನ್ನು ನೀನು ನಿಷ್ಠೆಯಿಂದ ಮಾಡು" ಎಂದರೆ ಗೀತೆಯ ಪ್ರಕಾರ ಶೂದ್ರರು ಇತರರ ಪರಿಚಾರಿಕೆ ಮಾಡಿಕೊಂಡಿರಬೇಕು ಎಂಬುದೊಂದೇ ಅರ್ಥ. ಹಾಗೆನ್ನಲು ಮುಜುಗರಪಟ್ಟುಕೊಂಡು ಗೀತೆಗೆ ಬೇರೇನೋ ಅರ್ಥ ನೀಡಹೊರಡುವುದು ದುಸ್ಸಾಹಸ. ಗೀತೆಯು ಕೇವಲ ವರ್ಣಾಧಾರಿತ ಕರ್ತವ್ಯಗಳನ್ನು ಕುರಿತು ಹೇಳುತ್ತಿದೆ. "ಹಾಳು ಜೀತದ ಕೆಲಸವೇ, ನನಗದು ಬೇಡ" ಎನ್ನುವುದೋ, "ನನ್ನ ದುಡಿಮೆಯ ಉತ್ಪನ್ನ ಬೇರಾರಿಗೋ ಸೇರುತ್ತದೆ, ನಾನೇಕೆ ದುಡಿಯಲಿ?" ಎನ್ನುವುದೋ ಸರ್ವಥಾ ಕೂಡದು ಎಂಬುದೇ ನಿಜವಾದ ಗೀತಾರ್ಥ. (ಇ) ಮೊದಲನೆಯ ಅಧ್ಯಾಯದಲ್ಲಿ ಗೀತೆಯು ವರ್ಣಸಂಕರದಿಂದ ಉಂಟಾಗುವ ಅನಾಹುತವನ್ನು ಪ್ರಸ್ತಾಪಿಸಿತ್ತು. ಅದು ಸರ್ವಥಾ ಕೂಡದು, ಅದು ವರ್ಜ್ಯ, ಎಂಬುದು ಗೀತೆಯ ನಿಲುವು. ವರ್ಣಸಂಕರ ಉಂಟಾದರೆ "ಸ್ವಭಾವಜ ಕರ್ಮವು" ಪಲ್ಲಟವಾಗಿ ಹೋಗುತ್ತದೆ. ಆಸ್ತಿಯ ಹಕ್ಕು ಪುರುಷನಿಗೆ ಮಾತ್ರ ಇದೆ, ಮಹಿಳೆಗಿಲ್ಲ; ಆದ್ದರಿಂದ ಮಹಿಳೆಯಿಂದ ವರ್ಣಸಂಕರ ಕೂಡದು, ಪುರುಷನು ಬೇಕಾದರೆ ಯಾವ ವರ್ಣದವರನ್ನು ಕೂಡಿದರೂ ಅಡ್ಡಿಯಿಲ್ಲ (೧.೪೧: ಅಧರ್ಮಾಭಿಭವಾತ್ ಕೃಷ್ಣ ಪ್ರದುಷ್ಯಂತಿ ಕುಲಸ್ತ್ರಿಯಃ। ಸ್ತ್ರೀಷು ದುಷ್ಟಾಸು ವಾರ್ಷ್ಣೇಯ ಜಾಯತೇ ವರ್ಣಸಂಕರಃ॥).

ಗೀತೆಯ ಕಡೆಯ ಅಧ್ಯಾಯದ ಇನ್ನುಳಿದ ಭಾಗವು ಭಾಗಶಃ ಮಾತ್ರ ಸಂನ್ಯಾಸ, ನೈಷ್ಕರ್ಮ್ಯಸಿದ್ಧಿ ಅಥವಾ ಬ್ರಹ್ಮಜ್ಞಾನ, ಕುರಿತಾಗಿದೆ (೧೮.೪೯–೫೪). ಗೀತೆಯು ಶ್ರೀ ಭಗವಾನನಲ್ಲಿ ಭಕ್ತಿ ಇರಿಸುವುದರತ್ತ ಬಹುಬೇಗ ಚಲಿಸುತ್ತದೆ (೧೮.೫೫: ಭಕ್ತ್ಯಾ ಮಾಂ ಅಭಿಜಾನಾತಿ...). ಪರಾಭಕ್ತಿಯಿಂದ ಅವನನ್ನು ತಿಳಿಯುವುದೆಂದರೆ ಅವನನ್ನು ಸೇರಿಕೊಳ್ಳುವುದೇ ಆಗಿದೆ (ತತೋ ಮಾಂ ತತ್ತ್ವತೋ ಜ್ಞಾತ್ವಾ ವಿಶತೇ ತದನಂತರಂ). ರಾಮಾನುಜನ ವಿಶಿಷ್ಟಾದ್ವೈತವು ಇದನ್ನು "ಸಾಯುಜ್ಯ" ಎಂದು ಹೆಸರಿಸುತ್ತದೆ. "ನಿನ್ನ ಮನಸ್ಸು ನನ್ನನ್ನು ಕೇಂದ್ರೀಕರಿಸಿದರೆ ನನ್ನ ಮಹತ್ಪ್ರಸಾದದಿಂದ ನಿನ್ನ ಕಷ್ಟಗಳನ್ನೆಲ್ಲಾ ಮೀರಿನಿಲ್ಲುವೆ; ಅಹಂಕಾರದಿಂದ ನನ್ನ ಮಾತಿಗೆ ಓಗೊಡದಿದ್ದರೆ ನೀನು ನಾಶವಾಗಿ ಹೋಗುತ್ತೀಯೆ" (೧೮.೫೮: ಮಚ್ಚಿತ್ತಃ ಸರ್ವದುರ್ಗಾಣಿ ಮತ್ಪ್ರಸಾದಾತ್ ತರಿಷ್ಯಸಿ। ಅಥ ಚೇತ್ ತ್ವಂ ಅಹಂಕಾರಾತ್ ನ ಶ್ರೋಷ್ಯಸಿ ವಿನಂಕ್ಷ್ಯಸಿ॥).

ಕುರುಕ್ಷೇತ್ರದ ಹಿನ್ನೆಲೆಯಲ್ಲಿ ಸಾಮಾಜಿಕ ಮತ್ತು ಮತಧಾರ್ಮಿಕ ವಿಷಯಗಳನ್ನು ಪ್ರತಿಪಾದಿಸಿ ಕಡೆಗೆ ಅದೇ ಕುರುಕ್ಷೇತ್ರದ ಹಿನ್ನೆಲೆಯಲ್ಲಿಯೇ ಗೀತೆಯು ಪರಿಸಮಾಪ್ತಿಯಾಗುತ್ತದೆ. "ಯಾವುದೇ ಕಾರಣದಿಂದಲೂ ಯಾರೂ ಸ್ವಭಾವಜ ವರ್ಣಧರ್ಮಕ್ಕೆ ವಿಮುಖರಾಗಕೂಡದು" ಎಂಬುದು ಗೀತೆಯ ಮೂಲಮಂತ್ರ. ಅಂದರೆ, ವರ್ಣ ವಿಭಜನೆಯನ್ನು ಪ್ರಶ್ನಿಸಕೂಡದು; ಅದನ್ನು ಭಗವಂತನೇ ನಿಯಮಿಸಿದ್ದು. ಅಂತಹ ದೈವೀ ನಿಯಮವನ್ನು ಪ್ರಶ್ನಿಸುವ ಲೋಕಾಯತರು ಮತ್ತು ಬೌದ್ಧರು ಮತಿಹೀನರೇ ಇರಬೇಕು. ಶೂದ್ರರು "ಪರಿಚರ್ಯಾತ್ಮಕ ಕರ್ಮ" ಹೇಗೆ ಮಾಡುತ್ತಿರಬೇಕೋ ಹಾಗೆ ಕ್ಷತ್ರಿಯರು ಯುದ್ಧರಂಗದಿಂದ ಪಲಾಯನ ಮಾಡದೆ ಯುದ್ಧದಲ್ಲಿ ಸೆಣಸಬೇಕು. "ಸೆಣಸಬೇಕು" ಎಂಬುದಲ್ಲ, ಸೆಣಸಿಯೇ ತೀರುತ್ತಾನೆ; ಅವನಿಗೆ ಇಚ್ಛೆ ಇಲ್ಲದಿದ್ದರೂ "ಸ್ವಭಾವಜ ಕರ್ಮ" ಎಂಬುದು ಅವನನ್ನು ಬಂಧಿಸಿ ಅವನಿಂದ ನಿಗದಿತ ಕರ್ಮವನ್ನು ಮಾಡಿಸುತ್ತದೆ. ಪ್ರಕೃತಿಯೇ ಅವನಿಗೆ ಅಂತಹ ಆದೇಶ ನೀಡಿ ಕರ್ಮವನ್ನು ಮಾಡಿಸುತ್ತದೆ. ಪ್ರಕೃತಿಗೆ ವಿರುದ್ಧವಾಗಿ ನಡೆಯಲಾದೀತೆ? ಅಂದರೆ, ಸ್ಥಗಿತಗೊಂಡ ಸಾಮಾಜಿಕ ದೃಷ್ಟಿಯು ಗೀತೆಯ ತತ್ತ್ವ. ಅದನ್ನು ಕದಲಿಸ ಹೋಗಬಾರದು. ಶ್ರೇಷ್ಠರು ಶ್ರೇಷ್ಠರಾಗಿ ಉಳಿಯಬೇಕು, ಕೂಲಿ ಮಾಡುವವರು ಕೂಲಿ ಮಾಡುತ್ತಿರಬೇಕು. ಅದು ಭಗವಂತನ ಆದೇಶ, ಮೀರಲಾಗದ ನಿಯಮ. ಅಹಂಕಾರದಿಂದ ಅರ್ಜುನನು ಯುದ್ಧ ಮಾಡಲು ಅಂಜಕೂಡದು, ಶೋಷಣೆಯಿಂದ ಮುಕ್ತನಾಗಲು ಶೂದ್ರನು ಆಶಿಸಕೂಡದು. ಇದೇ ಪರಮತತ್ತ್ವ (೧೮.೫೯–೬೦: ಯದಹಂಕಾರಮಾಶ್ರಿತ್ಯ ನ ಯೋತ್ಸ್ಯ ಇತಿ ಮನ್ಯಸೇ। ಮಿಥ್ಯೈಷ ವ್ಯವಸಾಯಸ್ತೇ ಪ್ರಕೃತಿಸ್ತ್ವಾಂ ನಿಯೋಕ್ಷ್ಯತಿ॥ ಸ್ವಭಾವಜೇನ ಕೌಂತೇಯ ನಿಬದ್ಧಃ ಸ್ವೇನ ಕರ್ಮಣಾ। ಕರ್ತುಂ ನೇಚ್ಛಸಿ ಯನ್ಮೋಹಾತ್ ಕರಿಷ್ಯಸಿ ಅವಶೋಽಪಿ ತತ್॥). ಚಲನಶೀಲವಲ್ಲದ ಸಮಾಜದ ಚಿತ್ರಣ ಇದು. ಇದು ಅದೃಷ್ಟ ವಾದ ಅಥವಾ ದೈವಾಯತ್ತ ವಾದ. ಶ್ರೇಷ್ಠ–ಕನಿಷ್ಠ ಎಂಬ ಸಾಮಾಜಿಕ ಶ್ರೇಣೀಕರಣಕ್ಕೆ ಇದು ಶಾಶ್ವತವಾದ ಸೈದ್ಧಾಂತಿಕ ಆಸರೆ. "ನಿನ್ನಿಂದ ಹೇಗೆ ನಿಯುಕ್ತನಾಗಿದ್ದೇನೋ ಹಾಗೆ ನಡೆದುಕೊಳ್ಳುತ್ತೇನೆ" (...ಯಥಾ ನಿಯುಕ್ತೋಽಸ್ಮಿ ತಥಾ ಕರೋಮಿ). ಇದು ಬದಲಾವಣೆಯ ತತ್ತ್ವಶಾಸ್ತ್ರವಲ್ಲ, ಸ್ಥಾವರತ್ವದ ಧೋರಣೆ.

"ಯುದ್ಧ ಮತ್ತು ಶಾಂತಿ" ಎಂಬ ಕಾದಂಬರಿಯಲ್ಲಿ ಲಿಯೋ ಟಾಲ್‌ಸ್ಟಾಯ್ ಇತಿಹಾಸದ ಗತಿ ಅಥವಾ ಚಲನೆಯ ಬಗ್ಗೆ ಪ್ರಶ್ನೆಯನ್ನೆತ್ತಿದ್ದಾನೆ. "ಎಲ್ಲವೂ ಪೂರ್ವನಿಯೋಜಿತ, ಯಃಕಶ್ಚಿತ್ ಮಾನವನಿಗೆ ಅದರಲ್ಲಿ ತನ್ನದೇ ಆದ ಸ್ವತಂತ್ರ ಪಾತ್ರವೇನೂ ಇಲ್ಲ" ಎಂಬ ನಿರಾಶೆಯ ಉತ್ತರವನ್ನವನು ಕೊಟ್ಟಿದ್ದಾನೆ. ಇತಿಹಾಸದ ಘಟನೆಗಳನ್ನು ತಾರ್ಕಿಕವಾಗಿ ವಿಶ್ಲೇಷಿಸಲಾಗದು ಎಂಬುದು ಅದರರ್ಥ. ಜಿಜ್ಞಾಸಾ ಮಾರ್ಗದಲ್ಲಿ ಅಸಹಾಯಕತೆಯು ಅವನನ್ನು ಬಾಧಿಸುತ್ತದೆ. ಆದರೆ ಗೀತೆಯು, ಅದು ಭಗವಂತನು ನಿಯಮಿಸಿದ್ದು, ಆದ್ದರಿಂದ ಅದನ್ನು ಉಲ್ಲಂಘಿಸಕೂಡದು, ಎಂಬ ಸಂದೇಶವನ್ನು ನೀಡುತ್ತದೆ. ಇಷ್ಟು ಗಾಢವಾದ ಅಸಹಾಯಕತೆಯನ್ನು ವೈಭವೀಕರಿಸುವ ಗ್ರಂಥವು ಬೇರೊಂದಿರಲಾರದೇನೋ! ಗೀತೆಯು ಮಾನವನಿಗೆ ಸಹಜ ಸ್ವಂತಿಕೆಯನ್ನು, ಕ್ರಿಯಾಶಕ್ತಿಯನ್ನು, ಬದಲಾವಣೆಯ ಹರಿಕಾರನಾಗುವ ಸಾಧ್ಯತೆಯನ್ನು, ನಿರಾಕರಿಸುತ್ತದೆ. ಭಗವಂತನು ಎಲ್ಲರ ಹೃದಯಗಳಲ್ಲೂ ಭದ್ರವಾಗಿ ಕುಳಿತುಬಿಟ್ಟಿದ್ದಾನಂತೆ, ತನ್ನ ಮಾಯೆಯಿಂದ ಎಲ್ಲವನ್ನೂ ಅವನೇ ತಿರುಗಿಸುತ್ತಾನಂತೆ (೧೮.೬೧: ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ। ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ॥). ಹಾಗಿದ್ದರೆ ಕೊಲೆಗಾರನನ್ನು ಅಪರಾಧಿ ಎಂದೇಕೆನ್ನಬೇಕು? ನೈತಿಕ ಸೂತ್ರಗಳೇಕೆ ಬೇಕು? ಕಾನೂನು–ಸಂವಿಧಾನ ಎಂದೆಲ್ಲಾ ಪರಿಕರಗಳೇಕೆ ಬೇಕು! ಹೃದಯಸ್ಥನಾದ ಭಗವಂತನಿಗೆ ಸರ್ವಥಾ ಶರಣಾಗಿ, ಅವನ ಪ್ರಸಾದದಿಂದ ಅತ್ಯುಚ್ಚ ಶಾಶ್ವತ ಶಾಂತಿಯನ್ನು ಪಡೆಯಬೇಕೆಂದು ಗುರುವು (ಶ್ರೀಭಗವಾನ್) ಶಿಷ್ಯನಿಗೆ (ಅರ್ಜುನನಿಗೆ, ಅಂದರೆ ನಮಗೆ–ನಿಮಗೆ–ಅವರಿಗೆ) ಆದೇಶಿಸುತ್ತಿದ್ದಾನೆ (೧೮.೬೨: ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ। ತತ್ಪ್ರಸಾದಾತ್ ಪರಂ ಶಾಂತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಂ॥). ಮಹಾನ್ ಉಪದೇಶಗಳನ್ನು ನೀಡಿದ ಶ್ರೀಭಗವಾನನು ಕಡೆಗೆ ಉಪರಮಿಸುವುದು "ಬಡವಾ, ನೀ ಮಡಗಿದ್ದಂಗಿರು" ಎಂದೇ. ಅದನ್ನು ಹೇಳಲು ಹದಿನೆಂಟು ಅಧ್ಯಾಯಗಳು ಬೇಕಿತ್ತೆ? ಸ್ಥಿತಪ್ರಜ್ಞತ್ವ, ಭಕ್ತಿ, ಧ್ಯಾನ, ವಿಭೂತಿ, ವಿಶ್ವರೂಪದರ್ಶನ, ಎಲ್ಲವನ್ನೂ ತೆರೆದಿಟ್ಟ ಗೀತೆಯ ಅಂತಿಮ ಸಂದೇಶ "ನೀನೇನೂ ಮಾಡಲಾರೆ, ವರ್ಣಧರ್ಮವನ್ನು ಮೀರದೆ ಶಾಂತಿಯಿಂದ ನಡೆ" ಎಂಬುದು. ಗೀತೆಯಲ್ಲಿ ಮತಧರ್ಮ, ಅಧ್ಯಾತ್ಮ, ಎಲ್ಲವೂ ಮೂಲೆಗುಂಪಾಗಿ, ಶ್ರೇಣೀಕೃತ ಸಾಮಾಜಿಕ ನೀತಿಗೆ ಬದ್ಧವಾಗಿರ ಬೇಕೆಂಬುದು ಏಕೈಕ ಸಂದೇಶವಾಗಿ ಹೊರಹೊಮ್ಮುತ್ತದೆ.

*(ಮುಂದುವರಿಯುತ್ತದೆ)*

**ಜಿ. ರಾಮಕೃಷ್ಣ**
೨–ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್, ೨೨/೧, ೪ನೇ ಕ್ರಾಸ್
ಕಾವೇರಿನಗರ, ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦ ೦೮೫

# ಭೀಮಾ ಕೋರೆಗಾಂವ : ಬರೀ ಸ್ಮಾರಕವಲ್ಲ, ಸಮಾನತೆ ಸಂಕೇತ

ನಾಗೇಶ್ ಕುಮಾರ ಬಳಗಲಿ

ಜನವರಿ ೧ನೇ ತಾರೀಖು ಮಹಾರಾಷ್ಟ್ರದ ಭೀಮಾ ಕೋರೆಗಾಂವದಲ್ಲಿ ನಡೆದ ಘಟನೆಗಳ ಬಗ್ಗೆ ನಾನಾ ವಿಶ್ಲೇಷಣೆಗಳು ನಡೆದಿವೆ. ಎಲ್ಲಕ್ಕಿಂತ ಮುಖ್ಯವಾಗಿ ೨೦೧೯ರ ಲೋಕಸಭಾ ಚುನಾವಣೆಗೂ ಮುನ್ನ ದಲಿತರನ್ನು ಹಿಂದುತ್ವದ ಬುಟ್ಟಿಗೆ ಹಾಕಿಕೊಂಡು ಕೋಮು ಧ್ರುವೀಕರಣದ ಮೂಲಕ ಹಿಂದೂ ವೋಟ್ ಬ್ಯಾಂಕ್ ಸ್ಥಾಪಿಸಿ, ಮತ್ತೆ ಕೇಂದ್ರದ ಅಧಿಕಾರ ಸೂತ್ರ ಹಿಡಿಯಲು, ನಂತರ ಸಂವಿಧಾನಕ್ಕೆ ಚಟ್ಟ ಕಟ್ಟಲು ಸಂಘ ಪರಿವಾರ ನಡೆಸಿದ ಒಳಸಂಚಿಗೆ ದಲಿತರ ಈ ಜಾಗೃತಿ ಅರಗಿಸಿಕೊಳ್ಳಲು ಸಾಧ್ಯವಾಗುತ್ತಿಲ್ಲ. ಅಂತಲೇ ಅಂದು ಶಾಂತಿಯುತವಾಗಿ ಸೇರಿದ ಜನಸಮೂಹದ ಮೇಲೆ ಮನುವಾದಿ ಶಕ್ತಿಗಳು ಕಲ್ಲು ತೂರಾಟ ಮಾಡಿದರು. ವಾಹನಗಳಿಗೆ ಬೆಂಕಿ ಹಚ್ಚಿದರು. ಎದುರಿಗೆ ಸಿಕ್ಕವರ ಮೇಲೆ ಹಲ್ಲೆ ಮಾಡಿದರು. ಈ ಘಟನೆಯಲ್ಲಿ ಒಬ್ಬ ಸಾವಿಗೀಡಾಗಿ, ಅನೇಕರು ಗಾಯಗೊಂಡರು. ಇದು ಆಕಸ್ಮಿಕವಾಗಿ ನಡೆದ ಘಟನೆಯಲ್ಲ, ಅತ್ಯಂತ ಪೂರ್ವಯೋಜಿತವಾಗಿ ನವಪೇಶ್ವೆವಾದಿಗಳು ಅಸ್ಪೃಶ್ಯ ಸಮುದಾಯವನ್ನು ಬೆದರಿಸುವ ದುಸ್ಸಾಹಸಕ್ಕೆ ಕೈ ಹಾಕಿದ್ದಾರೆ. ಮಹಾರಾಷ್ಟ್ರದಲ್ಲಿ ಮಾತ್ರವಲ್ಲ, ದೇಶದಲ್ಲೇ ದಲಿತರು ಒಂದು ರಾಜಕೀಯ ಶಕ್ತಿಯಾಗಿ ಹೊರಹೊಮ್ಮುತ್ತಿರುವುದು ಕಂಡು ಇವರಿಗೆ ಸಹಿಸಲು ಆಗುತ್ತಿಲ್ಲ.

ಭೀಮಾ ಕೋರೆಗಾಂವ ಘಟನೆಗಳ ಬಗ್ಗೆ ಸರಿಯಾಗಿ ವರದಿ ಬರಲಿಲ್ಲ. ಇದು ದಲಿತರು ಮತ್ತು ಮರಾಠರ ನಡುವಿನ ಘರ್ಷಣೆ ಎಂಬಂತೆ ಬಹುತೇಕ ಮುಖ್ಯವಾಹಿನಿಗಳು ಬಿಂಬಿಸಿದವು. ದಲಿತರ ಮೇಲೆ ನಡೆದ ಹಲ್ಲೆಗೆ ಜಾತಿ ಘರ್ಷಣೆಯ ಬಣ್ಣ ನೀಡಿದವು. ಈ ಕಾರ್ಯಕ್ರಮದಲ್ಲಿ ಪಾಲ್ಗೊಳ್ಳಲು ಬಂದಿದ್ದ ಜಿಗ್ನೇಶ್ ಮೇವಾನಿ ಮತ್ತು ಉಮರ್ ಖಲೀದ್ ಅವರನ್ನು ದೇಶದ್ರೋಹಿ ಎಂಬಂತೆ ಬಿಂಬಿಸಿದವು. ಭೀಮಾ ಕೋರೆಗಾಂವ ಸ್ಮಾರಕದ ಬಗ್ಗೆ ತಪ್ಪಾದ ವಿಶ್ಲೇಷಣೆಗಳು ನಡೆದವು.

೧೮೧೮ರಲ್ಲಿ ಪುಣೆ ಬಳಿಯ ಭೀಮಾ ಕೋರೆಗಾಂವದಲ್ಲಿ ಚಿತ್ಪಾವನ ಬ್ರಾಹ್ಮಣ ಪಂಗಡದ ಪೇಶ್ವೆಯ ರಾಜ ಎರಡನೇ ಬಾಜಿರಾಯನ ಸೇನೆ ವಿರುದ್ಧ ಬ್ರಿಟಿಷ್ ಸೇನೆ ಯುದ್ಧ ನಡೆಸಿತು. ಈ ಸೇನೆಯಲ್ಲಿ ಮಹಾರ ಸಮುದಾಯದ ಸೈನಿಕರು ಹೆಚ್ಚಿನ ಸಂಖ್ಯೆಯಲ್ಲಿದ್ದರು. ಕೊನೆಗೆ ಜನವರಿ ೧ರಂದು ಪೇಶ್ವೆ ಸೈನ್ಯ ಸೋಲನ್ನು ಒಪ್ಪಿತು. ಮೂರನೇ ಆ್ಯಂಗ್ಲೊ ಮರಾಠಾ ಯುದ್ಧವೆಂದು ಉದ್ದೇಶಪೂರ್ವಕವಾಗಿ ತಪ್ಪಾಗಿ ವಿಶ್ಲೇಷಿಸಲ್ಪಡುವ ಭೀಮಾ ಕೋರೆಗಾಂವ ಸಮರ ವಿದೇಶಿ ಸಾಮ್ರಾಜ್ಯಶಾಹಿಗಳು ಮತ್ತು ರಾಷ್ಟ್ರೀಯವಾದಿಗಳ ಸಮರವೆಂದು ಹೇಳಿದರೆ ತಪ್ಪಾಗುತ್ತದೆ. ಈ ಸಮರ ನಡೆದಾಗ ಭಾರತ ರಾಷ್ಟ್ರವಾಗಿರಲಿಲ್ಲ. ಆಗ ಪ್ರತಿ ೧೦ರಿಂದ ೨೦ ಮೈಲಿಗೆ ಒಬ್ಬ ರಾಜರಿದ್ದರು. ಪುಣೆಯನ್ನು ರಾಜಧಾನಿ ಮಾಡಿಕೊಂಡಿದ್ದ ಪೇಶ್ವೆಗಳು ತಮ್ಮ ಸಂಸ್ಥಾನ ಉಳಿಸಿಕೊಳ್ಳಲು ಬ್ರಿಟಿಷರ ವಿರುದ್ಧ ನಡೆಸಿದ ಹೋರಾಟ ರಾಷ್ಟ್ರೀಯತೆಗಾಗಿ ಎಂದು ಬಿಂಬಿಸಿದರೆ ತಪ್ಪಾಗುತ್ತದೆ. ಅದು ಅವರು ತಮ್ಮ ಸಂಸ್ಥಾನ ಉಳಿಸಿಕೊಳ್ಳಲು ಮಾಡಿದ ಹೋರಾಟ.

ಈ ಪೇಶ್ವೆಗಳು ಶಿವಾಜಿಯ ಸಾವಿನ ನಂತರ ಅರಸೊತ್ತಿಗೆ ಹಿಡಿದು ಕೂತರು. ಛತ್ರಪತಿ ಶಿವಾಜಿ ಜಾತಿ, ಮತ ಮತ್ತು ಭೇದ ಕಾಣದೆ ಎಲ್ಲವನ್ನೂ ಸಮಾನವಾಗಿ ಕಾಣುವ ರಾಜನೆಂದು ಅನ್ನಿಸಿದರೆ, ಮೋಸ ಮಾಡಿ ಅಧಿಕಾರಕ್ಕೆ ಬಂದ ಪೇಶ್ವೆಗಳು ಮನುಸ್ಮೃತಿ ಆಧರಿಸಿ ರಾಜ್ಯಭಾರ ನಡೆಸುತ್ತಿದ್ದರು. ದಲಿತರನ್ನು ಊರಾಚೆ ಇಟ್ಟಿದ್ದರು. ಪುಣೆಯಂತಹ ಊರಿನಲ್ಲಿ ದಲಿತರು



ಪ್ರವೇಶಿಸಬೇಕಾದರೆ, ಅವರ ಉಗುಳು ಕೆಳಗೆ ಬೀಳದಂತೆ ಕೊರಳಿಗೆ ಗಡಿಗೆ ಕಟ್ಟಿಕೊಂಡು ಬರಬೇಕಿತ್ತು. ಅವರ ಹೆಜ್ಜೆ ನೆಲದ ಮೇಲೆ ಮೂಡದಂತೆ ಕಾಲಿಗೆ ಪೊರಕೆ ಕಟ್ಟಿಕೊಳ್ಳಬೇಕಿತ್ತು. ಇಂತಹ ಸನ್ನಿವೇಶದಲ್ಲಿ ಬ್ರಿಟಿಷರು ದಾಳಿ ಮಾಡಲು ಬಂದಾಗಲೂ ಕೂಡ ತಮ್ಮನ್ನು ಪಶುಗಳಂತೆ ಕೀಳಾಗಿ ಕಂಡ ಪೇಶ್ವೆ ರಾಜ ಬಾಜಿರಾಯನ ಬಳಿ ಹೋದ ದಲಿತರು, ಸೇನೆಯಲ್ಲಿ ಸೇರ್ಪಡೆ ಮಾಡಿಕೊಂಡರೆ ಬ್ರಿಟಿಷರ ವಿರುದ್ಧ ಹೋರಾಟ ಮಾಡುವುದಾಗಿ ಹೇಳಿದರು. ಆದರೆ ಇದರಿಂದ ಕೆಂಡಾಮಂಡಲನಾದ ಬಾಜಿರಾವ, "ನಿಮ್ಮ ಸಹಾಯ ಬೇಕಾಗಿಲ್ಲ. ನೀವು ಮನುಧರ್ಮದ ಪ್ರಕಾರ, ಊರಾಚೆ ಇರಬೇಕು" ಎಂದು ಓಡಿಸಿದ. ದಲಿತ ನಾಯಕ ಸಿದ್ದನಾಕನನ್ನು ಭೇಟಿಗೆ ಕಳುಹಿಸಿದ ತನ್ನ ಕೆಳಗಿನ ಅಧಿಕಾರಿಗಳನ್ನು ತರಾಟೆ ತೆಗೆದುಕೊಂಡ. ಇದರಿಂದ ರೋಸಿಹೋದ ದಲಿತರು ತಮಗೆ ಅವಕಾಶ ನೀಡಿದ ಈಸ್ಟ್ ಇಂಡಿಯಾ ಕಂಪೆನಿಯ ಸೇನೆಯನ್ನು ಸೇರಿದರು. ಕೇವಲ ೫೦೦ ಮಂದಿಯಿದ್ದ ಮಹಾರ ಸೈನಿಕರು ೩೦ ಸಾವಿರ ಸೈನಿಕರಷ್ಟು ಇದ್ದ ಪೇಶ್ವೆಯ ಸೈನಿಕರನ್ನು ಸೋಲಿಸಿ ಹಿಮ್ಮೆಟ್ಟಿಸಿದರು. ಇದು ಭೀಮಾ ಕೋರೆಗಾಂವನ ಅಂದಿನ ಇತಿಹಾಸ.

ಈ ಭೀಮಾ ಕೋರೆಗಾಂವದಲ್ಲಿ ಮಹಾರ ಸೇನೆಯ ಗೆಲುವಿಗಾಗಿ ಸ್ಥಾಪಿಸಲಾದ ವಿಜಯಸ್ತಂಭಕ್ಕೆ ಗೌರವ ಸಲ್ಲಿಸಲು ಬಂದಿದ್ದ ಸಹಸ್ರಾರು ದಲಿತರನ್ನು ಕಂಡು ಮಹಾರಾಷ್ಟ್ರದ ಬಿಜೆಪಿ ಸರ್ಕಾರ ನಡುಗಿತು. ಶಾಂತಿಯುತವಾಗಿ ವಿಜಯಸ್ತಂಭಕ್ಕೆ ಗೌರವ ಸಲ್ಲಿಸುತ್ತಿದ್ದ ದಲಿತರ ಮೇಲೆ ಕೇಸರಿ ಬಾವುಟ ಹಿಡಿದ ಗೂಂಡಾಗಳು ಕಲ್ಲು ತೂರಿದರು. ಇದಕ್ಕೆ ಸಂಘ ಪರಿವಾರದ ಸಂಭಾಜಿ ಭೀಡೆ ಮತ್ತು ಬಿಜೆಪಿಯ ಮಾಜಿ ಪಾಲಿಕೆ ಸದಸ್ಯ ಮಿಲಿಂದ್ ಏಕಬೋಟೆಯವರ ಪ್ರಚೋದನೆಯೇ ಕಾರಣವೆಂದು ಪ್ರಕಾಶ ಅಂಬೇಡ್ಕರ್ ಆರೋಪಿಸಿದ್ದಾರೆ. ಈ ಸಂಭಾಜಿ ಭೀಡೆ, ಪ್ರಧಾನಿ ಮೋದಿಯವರ ನಿಕಟವರ್ತಿ.

ಪುಣೆಯಿಂದ ೧೬ ಕಿ. ಮೀ. ದೂರದ ಭೀಮಾ ನದಿ ತೀರದಲ್ಲಿರುವ ಸಣ್ಣಹಳ್ಳಿ ಕೋರೆಗಾಂವ. ಇಲ್ಲಿ ಭೀಮಾ ನದಿ ಹರಿಯುವ ಕಾರಣ ಇದಕ್ಕೆ ಭೀಮಾ ಕೋರೆಗಾಂವ ಎಂಬ ಹೆಸರು ಬಂದಿದೆ. ಇಂತಹ ಪುಟ್ಟ ಹಳ್ಳಿ ೨೦೦ ವರ್ಷಗಳ ಹಿಂದೆ ಎಲ್ಲೆಡೆ ಸುದ್ದಿಯಾದಂತೆ ಈಗಲೂ ದೇಶವ್ಯಾಪಿ ಸುದ್ದಿಯಾಗಿದೆ. ಮಹಾರ ಸೈನಿಕರು ಆಗ ಪೇಶ್ವೆಗಳನ್ನು ಸೋಲಿಸಿರದಿದ್ದರೆ, ಬ್ರಿಟಿಷ್ ಸಾಮ್ರಾಜ್ಯ ಇಲ್ಲಿ ಸ್ಥಾಪನೆಯಾಗುತ್ತಿರಲಿಲ್ಲ ಎಂಬ ವಿಶ್ಲೇಷಣೆಯೂ ಇವೆ. ಹಾಗೆಂದು ಪೇಶ್ವೆಗಳೇನೂ ದೇಶಕ್ಕಾಗಿ ಹೋರಾಡಿದವರಲ್ಲ. ಟಿಪ್ಪು ಸುಲ್ತಾನ್ ಬ್ರಿಟಿಷರ ವಿರುದ್ಧ ಹೋರಾಟ ನಡೆಸಿದಾಗ ಈ ಪೇಶ್ವೆಗಳು ಬ್ರಿಟಿಷರೊಂದಿಗೆ ಶಾಮೀಲಾಗಿದ್ದರು. ಅಂತಲೇ ಮಹಾರ ಸೈನಿಕರು ಬ್ರಿಟಿಷ್ ಸೇನೆ ಸೇರಿ ಪೇಶ್ವೆಗಳ ವಿರುದ್ಧ ಹೋರಾಟ ನಡೆಸಿರುವುದು ಮಿಥ್ಯ ಎಂದು ಹೇಳುವುದು ಸರಿಯಲ್ಲ. ಅವರಿಗೆ ಆಗ ಬೇರೆ ಆಯ್ಕೆಗಳು ಇರಲಿಲ್ಲ. ತಮ್ಮನ್ನು ನಾಯಿ, ನರಿಗಳಿಗಿಂತ ಕೀಳಾಗಿ ಕಾಣುತ್ತಿದ್ದ ಮನುವಾದಿ ಪೇಶ್ವೆಗಳಿಗಿಂತ ಬ್ರಿಟಿಷರು ಸೇನೆಯಲ್ಲಾದರೂ ಸೇರಿಸಿಕೊಂಡರಲ್ಲ ಎಂದು ಅವರು ಈ ಯುದ್ಧದಲ್ಲಿ ಪಾಲ್ಗೊಂಡರು.

ಎರಡನೇ ಬಾಜೀರಾವ ವಿರುದ್ಧ ಹೋರಾಡಲು ಮಹಾರ ಸೈನಿಕರನ್ನು ಬಳಸಿಕೊಂಡ ಬ್ರಿಟಿಷರು ನಂತರ ನಂಬಿಕೆ ದ್ರೋಹ ಮಾಡಿದರು. ೧೯೨೬ರಲ್ಲಿ ಬ್ರಿಟಿಷ್ ಸರ್ಕಾರ ಒಂದು ವಿಚಿತ್ರ ಆದೇಶ ಹೊರಡಿಸಿತು. ಸೇನೆ ಮತ್ತು ಪೊಲೀಸ್ ಇಲಾಖೆಯಲ್ಲಿ ಇರುವ ಮಹಾರರನ್ನು ಈ ಆದೇಶದ ಮೂಲಕ ತೆಗೆದುಹಾಕಿತು. ಇದಕ್ಕೆ ಆರ್ಥಿಕ ಬಿಕ್ಕಟ್ಟಿನ ನೆಪ ಹೇಳಿತು. ಈ ನಂಬಿಕೆ ದ್ರೋಹದಿಂದ ದಲಿತರು ಆಘಾತಗೊಂಡರು. ಆಗ ದಮನಿತ ಸಮುದಾಯದ ನಾಯಕರಾಗಿ ಹೊರಹೊಮ್ಮಿದ್ದ ಬಾಬಾ ಸಾಹೇಬ್ ಅಂಬೇಡ್ಕರ್ ಈ ಅನ್ಯಾಯದ ವಿರುದ್ಧ ಹೋರಾಟಕ್ಕೆ ಮುಂದಾದರು. ಅದೇ ವರ್ಷದ ಜನವರಿ ೧ರಂದು ಭೀಮಾ ಕೋರೆಗಾಂವದ ರಣಸ್ತಂಭದ ಮುಂದೆ ಬಹಿರಂಗ ಸಭೆಯನ್ನು ಕರೆದು ಬ್ರಿಟಿಷ್ ಸಾಮ್ರಾಜ್ಯದ ವಿರುದ್ಧ ಬಂಡಾಯದ ಕಹಳೆ ಊದಿದರು. "ಬ್ರಿಟಿಷರ ಆದೇಶಕ್ಕೆ ಹೆದರಬೇಡಿ. ನಾವು ನಮ್ಮ ಆಕ್ರೋಶ ವ್ಯಕ್ತಪಡಿಸಬೇಕು. ಕುರಿಗಳನ್ನು ಬಲಿ ನೀಡಿದಂತೆ ಸಿಂಹಗಳನ್ನು ಬಲಿ ನೀಡುವುದಿಲ್ಲ. ನಾವು ಸಿಂಹಶಕ್ತಿ ಪಡೆದುಕೊಳ್ಳಬೇಕು" ಎಂದರು. ಇದಕ್ಕೆ ಬೆದರಿದ ಬ್ರಿಟಿಷರು ಆದೇಶವನ್ನು ಹಿಂಪಡೆದರು. ಪುನಃ ದಲಿತರ ನೇಮಕಾತಿ ಮುಂದುವರಿಯಿತು. ಆಗಿನಿಂದ ಪ್ರತಿ ವರ್ಷ ಜನವರಿ ೧ರಂದು ಅಂಬೇಡ್ಕರ್ ಕೋರೆಗಾಂವಗೆ ಬಂದು ವಿಜಯಸ್ತಂಭಕ್ಕೆ ಗೌರವ ಸಲ್ಲಿಸಿ ಹೋಗುತ್ತಿದ್ದರು. ಈಗಲೂ ಕೂಡ ದಮನಿತ ಸಮುದಾಯದ ಜನರು ಇಲ್ಲಿ ಬರುತ್ತಾರೆ. ಗೌರವ ಸಲ್ಲಿಸುತ್ತಾರೆ.

ಭೀಮಾ ಕೋರೆಗಾಂವ ಇಂದು ದಲಿತರ ಸ್ವಾಭಿಮಾನದ ಸಂಕೇತವಾಗಿದೆ. ಇದಕ್ಕಾಗಿ ಅವರು ರಣಸ್ತಂಭ ಸೇವಾ ಸಮಿತಿ ಮಾಡಿಕೊಂಡಿದ್ದಾರೆ. ದಲಿತ ಸಮುದಾಯ ತನ್ನ ರಾಜಕೀಯ ಅಸ್ಮಿತೆಗಾಗಿ ಈ ಭೀಮಾ ಕೋರೆಗಾಂವದ ವೀರರ ಹೋರಾಟ ಸ್ಮರಿಸುತ್ತ ಬಂದಿದೆ. ಈಗ ದಲಿತರು ದೇಶದಲ್ಲಿ ಒಂದು ರಾಜಕೀಯ ಶಕ್ತಿಯಾಗಿದ್ದಾರೆ. ಅಂತಲೇ ಬಿಜೆಪಿ ಸರ್ಕಾರ ಕೇಂದ್ರದಲ್ಲಿ ಅಧಿಕಾರಕ್ಕೆ ಬಂದ ನಂತರ ಅಲ್ಪಸಂಖ್ಯಾತರನ್ನು ಬಿಟ್ಟರೆ, ದಲಿತರ ಮೇಲೆ ಹೆಚ್ಚು ಹಲ್ಲೆಗಳು ನಡೆದಿವೆ. ದಲಿತ ಸಮುದಾಯವನ್ನು ತಮ್ಮ ತಕ್ಕೆಗೆ ತೆಗೆದುಕೊಂಡು ಮನುವಾದಿ ರಾಷ್ಟ್ರ ನಿರ್ಮಿಸುವ ಮಸಲತ್ತು ವಿಫಲಗೊಂಡಿದೆ.

೨೦೦ ವರ್ಷಗಳ ಹಿಂದೆ ಮಹಾರ ಸೈನಿಕರ ಕೈಯಲ್ಲಿ ಸೋಲು ಒಪ್ಪಿದ ಪೇಶ್ವೆಶಾಹಿ ಶಕ್ತಿಗಳು ಈಗ ಹಿಂದುತ್ವದ ವೇಷ ಹಾಕಿ, ಹಿಂದೂ ಹೆಸರನ್ನು ಇಟ್ಟುಕೊಂಡು ತಮ್ಮ ಸಾಮ್ರಾಜ್ಯ ಸ್ಥಾಪಿಸಲು ಸಂಚು ರೂಪಿಸಿದ್ದಾರೆ. ತಮ್ಮ ಈ ಗುರಿ ಸಾಧನೆಗೆ ಅಡ್ಡಿಯಾಗಿರುವ ಡಾ॥ ಅಂಬೇಡ್ಕರ್ ಅವರ ಸಂವಿಧಾನ ಬದಲಿಸಲು ಬಹಿರಂಗ ಕರೆ ಕೊಡುತ್ತಿದ್ದಾರೆ. ಆರ್ಥಿಕ ನಿರ್ವಹಣೆಯಲ್ಲಿ ಸಂಪೂರ್ಣ ವಿಫಲವಾದ ಪ್ರಧಾನಿ ಮೋದಿ ನೇತೃತ್ವದ ಸರ್ಕಾರಕ್ಕೆ ಜನರ ಬಳಿ ಹೋಗಲು ಮುಖವಿಲ್ಲ. ಮತ್ತೆ ಹಿಂದುತ್ವದ ಉನ್ಮಾದ ಕೆರಳಿಸಿ, ೨೦೧೯ರ ಚುನಾವಣೆ ಗೆಲ್ಲಲು ಅದು ಹುನ್ನಾರ ನಡೆಸಿದೆ. ಜನರನ್ನು ಧರ್ಮದ ಆಧಾರದಲ್ಲಿ, ಜಾತಿ ಆಧಾರದಲ್ಲಿ ವಿಭಜಿಸಲು ಯತ್ನ ನಡೆಸಿದೆ. ಹಿಂದೂಗಳನ್ನು ಅಲ್ಪಸಂಖ್ಯಾತರ ವಿರುದ್ಧ ಮತ್ತು ದಲಿತರನ್ನು ಮರಾಠರ ವಿರುದ್ಧ ಎತ್ತಿಕಟ್ಟುವ ಮಸಲತ್ತು ನಡೆದಿದೆ.

ಮಹಾರಾಷ್ಟ್ರದಲ್ಲಿ ಮರಾಠಾ ಯುವಕರು ನಿರುದ್ಯೋಗದಿಂದ ಕಂಗಾಲು ಆಗಿದ್ದಾರೆ. ಶೈಕ್ಷಣಿಕ ಅವಕಾಶಗಳು ಕಡಿಮೆಯಾಗಿವೆ. ಇಂತಹ ಯುವಕರನ್ನು ಬಳಸಿಕೊಂಡು ಅವರ ತಲೆಯಲ್ಲಿ ಮರಾಠದ ವೈಭವದ ದಿನಗಳ ನಶೆ ಏರಿಸಿ, ದಲಿತರನ್ನು ಅವರ ಮೇಲೆ ಛೂ ಬಿಡುವ ಸಂಚು ವ್ಯವಸ್ಥಿತವಾಗಿ ನಡೆದಿದೆ. ಭೀಮಾ ಕೋರೆಗಾಂವದಲ್ಲಿ ನಡೆದ ಹಿಂಸಾಚಾರ ಇದಕ್ಕೆ ಒಂದು ಉದಾಹರಣೆ. ಅಂತಲೇ ಮಹಾರಾಷ್ಟ್ರದ ದಲಿತರು ಇಡೀ ರಾಜ್ಯದ ತುಂಬ ಬಂದ್ ನಡೆಸಿ ಸರಿಯಾದ ತಿರುಗೇಟು ನೀಡಿದರು.

ಈ ಬಾರಿ ಭೀಮಾ ಕೋರೆಗಾಂವ ಸಂಭ್ರಮಕ್ಕೆ ಹೊಸ ಸ್ವರೂಪ ನೀಡಿದ ಮಹಾರಾಷ್ಟ್ರದ ದಲಿತ ಸಂಘಟನೆಗಳು ಹಿಂದುತ್ವದ ವೇಷ ಹಾಕಿಕೊಂಡು ಬಂದ ನವಪೇಶ್ವೆವಾದಿ ಶಕ್ತಿಗಳ ಬಗ್ಗೆ ಪುಣೆಯ ಶನಿವಾರವಾಡದಲ್ಲಿ ಬೃಹತ್ ಸಮಾವೇಶ ನಡೆಸಿದವು. ಈ ಸಮಾವೇಶಕ್ಕೆ ಗುಜರಾತ್‌ನ ಹೊಸ ಪೀಳಿಗೆಯ ದಲಿತ ನಾಯಕ ಮತ್ತು ಇತ್ತೀಚೆಗೆ ವಿಧಾನಸಭಾಗೆ ಚುನಾಯಿತರಾದ ಜಿಗ್ನೇಶ್ ಮೇವಾನಿ ಬಂದಿದ್ದರು. ಜಿಗ್ನೇಶ್ ಮೇವಾನಿ ಮತ್ತು ಉಮರ್ ಖಲೀದ್ ಇಲ್ಲಿ ಬಂದಿದ್ದನ್ನು ಸಹಿಸದ ಕೋಮುವಾದಿ ಶಕ್ತಿಗಳು ಅವರ ವಿರುದ್ಧವೂ ಅಪಪ್ರಚಾರ ನಡೆಸಿದವು. ಇತ್ತೀಚೆಗೆ ಪತ್ರಿಕಾಗೋಷ್ಠಿಯಲ್ಲಿ ಮೇವಾನಿಯವರು, "ಎಡಪಂಥೀಯರು ನಮ್ಮ ಸಹಜ ಮಿತ್ರರು. ಬಲಪಂಥೀಯರು ನಮ್ಮ ಪ್ರಧಾನ ಶತ್ರುಗಳು" ಎಂದರು. ಆಗ ಕೆಲ ವರದಿಗಾರರು, "ಅಂಬೇಡ್ಕರ್ ಆ ರೀತಿ ಹೇಳಿಲ್ಲವಲ್ಲ" ಎಂದು ಪ್ರಶ್ನಿಸಿದಾಗ, "ಆಗ ಆ ಸನ್ನಿವೇಶ ಇರಲಿಲ್ಲ. ಈಗ ಪರಿಸ್ಥಿತಿ ಬದಲಾಗಿದೆ. ಭಾರತದ ಪ್ರಜಾಪ್ರಭುತ್ವವನ್ನು ನಾಶ ಮಾಡಲು ಹೊರಟ ಬಲಪಂಥೀಯರನ್ನು ಹಿಮ್ಮೆಟ್ಟಿಸಲು ದಲಿತ ಸಂಘಟನೆಗಳು ಎಡಪಂಥೀಯ ಶಕ್ತಿಗಳೊಡನೆ ಕೈ ಜೋಡಿಸಬೇಕಿದೆ" ಎಂದರು. ಇದನ್ನೇ ನೆಪ ಮಾಡಿಕೊಂಡು ಅವರ ವಿರುದ್ಧ ಅಪಪ್ರಚಾರ ನಡೆದಿದೆ. ಈ ಅಪಪ್ರಚಾರಕ್ಕೆ ಸಂಘ ಪರಿವಾರ ಪ್ರಚೋದನೆ ನೀಡುತ್ತಿದೆ. ದಲಿತ ಶಕ್ತಿಯನ್ನು ಒಡೆಯಲು ಹುನ್ನಾರ ನಡೆದಿದೆ.

ಕೇಂದ್ರದ ನರೇಂದ್ರ ಮೋದಿ ಸರ್ಕಾರಕ್ಕೆ ಭೀಮಾ ಕೋರೆಗಾಂವ ಮೂಲಕ ಹೊರಹೊಮ್ಮಿದ ದಲಿತ ಶಕ್ತಿ ನುಂಗಲಾರದ ತುತ್ತಾಗಿದೆ. ಮನುವಾದಿ ಪ್ರಾಬಲ್ಯದ ಹಿಂದೂ ರಾಷ್ಟ್ರ ನಿರ್ಮಾಣದ ತಮ್ಮ ಕನಸು ಭಗ್ನಗೊಳ್ಳುತ್ತಿದೆ ಎಂದು ಆರ್‌ಎಸ್‌ಎಸ್ ಸರಸಂಘ ಚಾಲಕ ಮೋಹನ್ ಭಾಗವತ್ ಕಂಗಾಲು ಆಗಿದ್ದಾರೆ. ತಮ್ಮ ಬದುಕಿನ ಇಳಿಸಂಜೆಯಲ್ಲಿ ಹಿಂದೂ ರಾಷ್ಟ್ರವನ್ನು ಕಾಣಲು ಆಗಲಿಲ್ಲವೆಂದು ಪೇಜಾವರರು ದಿಗ್ಭ್ರಮೆಗೊಂಡಿದ್ದಾರೆ.

**ಸನತ್ ಕುಮಾರ ಬೆಳಗಲಿ**
ಎಲ್‌ಎಫ್–೧೭/೬, ಬಿಡಿಎ ಫ್ಲ್ಯಾಟ್ಸ್, ಬಿಟಿಎಮ್ ಲೇಔಟ್, ಬೆಂಗಳೂರು – ೫೬೦ ೦೭೬

# ಸರ್ವೋಚ್ಚ ನ್ಯಾಯಾಲಯದಲ್ಲೊಂದು ಮಂಥನ

ಮುರಳೀಧರ ಚಿಕ್ಕಮಗಳೂರು

**ವ್ಯವಸ್ಥೆಯೊಡನೆ ರಾಜಿ ಅಥವಾ ಪ್ರತಿಭಟನೆ**

ಹೊಸ ವರ್ಷ –೨೦೧೮ ಆರಂಭವಾದದ್ದೇ ಭೀಮಾ ಕೋರೆಗಾಂವ್‌ನ ದಲಿತರ ಹೋರಾಟ ದಿಂದ. ಈ ಹೋರಾಟದ ಕಾವು ಆರುತ್ತಿದ್ದಂತೆಯೆ ದೇಶದ ಜನತೆ ಚಕಿತ ಗೊಂಡದ್ದು ಸರ್ವೋಚ್ಚ ನ್ಯಾಯಾಲಯದ ಹಿರಿಯ ನ್ಯಾಯಮೂರ್ತಿ ಗಳಾದ ಶ್ರೀ ಜೆ. ಚಲಮೇಶ್ವರ್, ಶ್ರೀ ರಂಜನ್ ಗೋಗೋಯ್, ಶ್ರೀ ಮದನ್ ಬಿ. ಲೋಕುರ್ ಮತ್ತು ಶ್ರೀ ಕುರಿಯನ್ ಜೋಸೆಫ್‌ರವರುಗಳು ಪತ್ರಿಕಾ ಗೋಷ್ಠಿ ಕರೆದು ಸರ್ವೋಚ್ಚ ನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿ ಗಳಾದ ಶ್ರೀ ದೀಪಕ್ ಮಿಶ್ರ ಅವರ ನಿರಂಕುಶ ಕಾರ್ಯ ವೈಖರಿಯ ಬಗ್ಗೆ ತಮ್ಮ ಅಸಮಾಧಾನ ಮತ್ತು ಆತಂಕವನ್ನು ಬಹಿರಂಗಗೊಳಿಸಿದ್ದು. ಈ ಹಿಂದೆ ಸರ್ವೋಚ್ಚ ನ್ಯಾಯಾಲಯದ ಹಲವಾರು ನ್ಯಾಯಮೂರ್ತಿಗಳು ತಾವು ನಿವೃತ್ತರಾದ ನಂತರದ ದಿನಗಳಲ್ಲಿ ನ್ಯಾಯಾಂಗದಲ್ಲಿ ಬೇರೂರಿರುವ ಭ್ರಷ್ಟಾಚಾರದ ಬಗ್ಗೆ ವ್ಯಾಖ್ಯಾನಿಸಿ ಮರುಗಿದ್ದುಂಟು. ಆದರೆ ತಮ್ಮ ಸೇವಾ ಅವಧಿಯಲ್ಲೇ ಸರ್ವೋಚ್ಚ ನ್ಯಾಯಾಲಯದ ಅವ್ಯವಸ್ಥೆಯನ್ನು ಟೀಕಿಸಿ ಬಹಿರಂಗಗೊಳಿಸಿದ ಶ್ರೇಯಸ್ಸು ಈ ನಾಲ್ಕು ನ್ಯಾಯಮೂರ್ತಿಗಳಿಗೆ ಸಲ್ಲಬೇಕು. ಇನ್ನೂ ಹೆಚ್ಚಿನ ವಿಶೇಷವೆಂದರೆ ನ್ಯಾಯಮೂರ್ತಿ ಶ್ರೀ ರಂಜನ್ ಗೋಗೋಯ್ ಇದೇ ವರ್ಷ ಮುಖ್ಯ ನ್ಯಾಯಮೂರ್ತಿಗಳಾಗುವವರು. ನ್ಯಾಯಮೂರ್ತಿ ಶ್ರೀ ಚಲಮೇಶ್ವರ್ ಪತ್ರಿಕಾ ಗೋಷ್ಠಿಯಲ್ಲಿ ಮಾತನಾಡುತ್ತಾ ಪ್ರಜಾಪ್ರಭುತ್ವದ ಉಳಿವಿಗಾಗಿ ಬೇರೆ ವಿಧಿಯಿಲ್ಲದೆ ದೇಶದ ಜನತೆಯ ಮುಂದೆ ನಿಂತಿದ್ದೇವೆ ಮತ್ತು ನಾವು ಈ ಕ್ರಮ ತೆಗೆದುಕೊಳ್ಳದಿದ್ದಲ್ಲಿ ೨೦ ವರ್ಷಗಳ ನಂತರ ನಾವು ನಮ್ಮ ಆತ್ಮವನ್ನು ಮಾರಿಕೊಂಡವರೆಂಬ ಟೀಕೆಗೆ ಗುರಿಯಾಗುತ್ತೇವೆಂದು ಹೇಳಿದ್ದು ಸಮಸ್ಯೆಗಳ ಆಳವನ್ನು ಪರಿಚಯಿಸುವುದು ಮಾತ್ರವಲ್ಲದೆ ಸರ್ವೋಚ್ಚ ನ್ಯಾಯಾಲಯದ ನೈತಿಕ ಅಧಃಪತನಕ್ಕೆ ಹಿಡಿದ ಕನ್ನಡಿಯೂ ಹೌದು. ನಾವು ಗಮನಿಸಬೇಕಾದ ಪ್ರಮುಖ ಅಂಶವೆಂದರೆ ತಮ್ಮ ಅಸಮಾಧಾನ ಮತ್ತು ಕಾಳಜಿಗಳನ್ನು ಮುಖ್ಯ ನ್ಯಾಯಾಧೀಶರಲ್ಲಿ ತೋಡಿಕೊಂಡು ಸಾಕಷ್ಟು ಕಾಲಾವಕಾಶ ಕೊಟ್ಟರೂ ಅದನ್ನು ಚರ್ಚಿಸಿ ಬಗೆಹರಿಸುವ ಗೋಜಿಗೂ ಹೋಗದಿದ್ದಲ್ಲಿ ಈ ನಾಲ್ವರು ಹಿರಿಯ ನ್ಯಾಯಮೂರ್ತಿಗಳಿಗಿದ್ದ ಹಾದಿ ಎರಡೆ. ಒಂದೋ ತಮ್ಮ ಅಸಮಾಧಾನ ಮತ್ತು ಕಾಳಜಿಗಳನ್ನು ಸಹಿಸಿ, ನುಂಗಿ ಅದೇ ವ್ಯವಸ್ಥೆಯೊಡನೆ ರಾಜಿ ಮಾಡಿಕೊಳ್ಳುವುದು ಅಥವಾ ಪ್ರತಿಭಟಿಸುವುದು. ಈ ನಾಲ್ವರು ನ್ಯಾಯಮೂರ್ತಿಗಳು ಹೀಗೆ ಮಾಡಬಾರದಿತ್ತು ಎಂದು ಟೀಕಿಸುವ ಜನರು ಯಥಾಸ್ಥಿತಿವಾದಿಗಳು ಮತ್ತು ಜನತೆಯನ್ನು ಅಂಧಕಾರದಲ್ಲಿಡಲು ಬಯಸುವವರು. ಪ್ರಜಾತಂತ್ರ ವ್ಯವಸ್ಥೆಯಲ್ಲಿ ಶಾಂತಿಯುತ ಪ್ರತಿಭಟನೆ ಒಂದು ಹಕ್ಕು. ಈ ಪ್ರಜಾತಾಂತ್ರಿಕ ಮೌಲ್ಯವನ್ನು ತಮ್ಮ ಹಲವಾರು ತೀರ್ಪುಗಳಲ್ಲಿ ಎತ್ತಿಹಿಡಿದ ಸರ್ವೋಚ್ಚ ನ್ಯಾಯಾಲಯದ ನ್ಯಾಯಮೂರ್ತಿಗಳಿಗೆ ಈ ಹಕ್ಕಿಲ್ಲ ಎಂಬುದು ಹಾಸ್ಯಾಸ್ಪದ. ವಿಶ್ವ ವಿಖ್ಯಾತ ಪ್ರತಿಭಟನಾಕಾರರಾದ ರಾಷ್ಟ್ರಪಿತ ಮಹಾತ್ಮಗಾಂಧಿಯವರ ಫೋಟೊ ಎಲ್ಲ ನ್ಯಾಯಾಂಗಣದಲ್ಲೂ ರಾರಾಜಿಸುತ್ತಿದೆ.

**ನಿರಂಕುಶ ಆಡಳಿತ**

ನ್ಯಾಯಮೂರ್ತಿ ಶ್ರೀ ಚಲಮೇಶ್ವರ್, ಶ್ರೀ ರಂಜನ್ ಗೋಗೋಯ್, ಶ್ರೀ ಮದನ್ ಲೋಕುರ್ ಮತ್ತು ಶ್ರೀ ಕುರಿಯನ್ ಜೋಸೆಫ್ ಅವರು ಮುಖ್ಯ ನ್ಯಾಯಮೂರ್ತಿ ಶ್ರೀ ದೀಪಕ್ ಮಿಶ್ರ ಅವರಿಗಿರುವ ಪ್ರಕರಣಗಳನ್ನು ಬೇರೆ ಬೇರೆ ನ್ಯಾಯಪೀಠಗಳಿಗೆ ವಿತರಿಸುವ ಅಧಿಕಾರವನ್ನು ಪ್ರಶ್ನಿಸಿಲ್ಲ. ಆದರೆ ಹೀಗೆ ವಿತರಿಸುವಲ್ಲಿನ ತಾರತಮ್ಯತೆ ಮತ್ತು ನಿರಂಕುಶತೆಯನ್ನು ಪ್ರಶ್ನಿಸಿದ್ದಾರೆ. ಇದನ್ನು ಅವರ ಗಮನಕ್ಕೆ ತಂದಾಗ ಸರಿಪಡಿಸಬೇಕಾದ ಜವಾಬ್ದಾರಿ ಮುಖ್ಯ ನ್ಯಾಯಮೂರ್ತಿಗಳದ್ದು. ಸೂಕ್ಷ್ಮ ಪ್ರಕರಣಗಳು ದಾಖಲಾದಾಗ ಅವುಗಳನ್ನು ಹಿರಿಯ ನ್ಯಾಯಮೂರ್ತಿಗಳನ್ನೊಳಗೊಂಡ ನ್ಯಾಯಪೀಠಕ್ಕೆ ಒಪ್ಪಿಸುವುದು ನಡೆದು ಬಂದಿರುವ ಪರಿಪಾಠ. ಈ ರೂಢಿ ಹಳಿ ತಪ್ಪಿದಲ್ಲಿ ಅನೇಕ ಅನುಮಾನಗಳಿಗೆ ಈಡು ಮಾಡುವುದು. ಅಷ್ಟಕ್ಕೂ ಮುಖ್ಯ ನ್ಯಾಯಮೂರ್ತಿ ಶ್ರೀ ದೀಪಕ್ ಮಿಶ್ರ ಈಗಾಗಲೇ ಕೆಲವು ಪ್ರಕರಣಗಳಲ್ಲಿ ಸಂಶಯದ ಸುಳಿಯಲ್ಲಿ ಸಿಕ್ಕಿರುವವರು. ನಾಲ್ವರು ಹಿರಿಯ ನ್ಯಾಯಮೂರ್ತಿಗಳು ದೇಶದ ಜನತೆಯ ಮುಂದಿಟ್ಟ ವಿಚಾರಗಳು ಅವರ ವೈಯಕ್ತಿಕ ದೂರುಗಳಾಗಿರದೆ ಸಾಂಸ್ಥಿಕ ಆಯಾಮ ಹೊಂದಿದೆ ಎಂಬುದನ್ನು ಮುಖ್ಯವಾಗಿ ಗಮನಿಸಬೇಕಾದ ಅಂಶ. ಮುಖ್ಯ ನ್ಯಾಯಮೂರ್ತಿಗಳನ್ನು ಪದಚ್ಯುತರನ್ನಾಗಿಸಬೇಕೆಂಬ ಸಂಚೂ ಕೂಡ ಕಾಣ ಸಿಗುವುದಿಲ್ಲ. ದೇಶದ ವ್ಯವಸ್ಥೆಯ ಬಗ್ಗೆ ತೀರ್ಪು ನೀಡುವ ಈ ಮಹಾನ್ ಸಂಸ್ಥೆ ತನ್ನ ಆಂತರಿಕ ವ್ಯವಸ್ಥೆಯ ಬಗ್ಗೆಯೂ ಕಾಳಜಿ -

ಹೊಂದಿರಬೇಕೆಂಬುದು ಈ ನಾಲ್ವರು ನ್ಯಾಯಮೂರ್ತಿಗಳ ಸದಾಶಯವಾಗಿದೆ ಎಂಬುದು ಅವರು ಎತ್ತಿಸುವ ಪ್ರಶ್ನೆಗಳೇ ಸಾಬೀತುಪಡಿಸುತ್ತವೆ.

**ವರ್ಚಸ್ಸು ಮತ್ತು ನೈತಿಕತೆ**

ಸರ್ವೋಚ್ಚ ನ್ಯಾಯಾಲಯದ ಮಹಾರಥ ಚಲಿಸುವುದು ಕೇವಲ ಮುಖ್ಯ ನ್ಯಾಯಮೂರ್ತಿಗಳಿಂದಲ್ಲ. ಎಲ್ಲ ನ್ಯಾಯಮೂರ್ತಿಗಳೂ ಅದರ ಸಮಾನ ಚಾಲಕ ಶಕ್ತಿ. ಹಾಗಾಗಿ ಪ್ರಜಾಪ್ರಭುತ್ವದ ಎಲ್ಲ ಮೌಲ್ಯಗಳನ್ನೂ ಸರ್ವೋಚ್ಚ ನ್ಯಾಯಾಲಯ ಅಳವಡಿಸಿಕೊಳ್ಳುವುದು ಮಾತ್ರವಲ್ಲದೆ ಅದನ್ನು ಪರಿಪಾಲಿಸಬೇಕಾದದ್ದು ಅದರ ಜವಾಬ್ದಾರಿ ಮತ್ತು ಕರ್ತವ್ಯ. ಶಾಸಕಾಂಗ ಮತ್ತು ಕಾರ್ಯಾಂಗಕ್ಕೆ ಪ್ರಜಾಪ್ರಭುತ್ವದ ಹಕ್ಕುಗಳ ಬಗ್ಗೆ ಅಧಿಕಾರಯುತವಾಗಿ ಮಾರ್ಗದರ್ಶನ ನೀಡಬೇಕೆಂದಲ್ಲಿ, ಸರ್ವೋಚ್ಚ ನ್ಯಾಯಾಲಯ ಅಂತಹ ಮೌಲ್ಯಗಳನ್ನು ಅಂತರ್ಗತಗೊಳಿಸಿಕೊಳ್ಳಬೇಕಾದದ್ದು ಅನಿವಾರ್ಯ. ಹೀಗಾಗದಿದ್ದಲ್ಲಿ ಸರ್ವೋಚ್ಚ ನ್ಯಾಯಾಲಯ ತನ್ನ ವರ್ಚಸ್ಸು ಮತ್ತು ನೈತಿಕತೆಯನ್ನು ಕಳೆದುಕೊಳ್ಳುತ್ತದೆ.

**ಸಂವಿಧಾನಾತ್ಮಕ ವರ್ತನೆ**

ಸರ್ವೋಚ್ಚ ನ್ಯಾಯಾಲಯ ತನ್ನ ಅನೇಕ ತೀರ್ಪುಗಳಲ್ಲಿ ಪ್ರಜಾಪ್ರಭುತ್ವ ಸಂವಿಧಾನದ ಪ್ರಮುಖ ಲಕ್ಷಣಗಳಲ್ಲೊಂದು ಎಂದು ನಿರ್ಧರಿಸಿದೆ. ಅಂದರೆ ಪ್ರತಿಭಟನೆಯ ಹಕ್ಕು ಕೂಡ ಪ್ರಜಾತಾಂತ್ರಿಕ ಹಕ್ಕು. ಸಂವಿಧಾನದ ಪ್ರಸ್ತಾವನೆಯ ಪ್ರಕಾರ ಭಾರತದ ಪ್ರಜೆಗಳೇ ಸಂವಿಧಾನವನ್ನು ಅಂಗೀಕರಿಸಿ, ಅಧಿನಿಯಮಿಸಿ ತಮಗೆ ತಾವೇ ಅರ್ಪಿಸಿಕೊಂಡ ಪರಮೋಚ್ಚ ದಾಖಲೆ. ಅಂದರೆ ಭಾರತೀಯರೇ ಸಂವಿಧಾನದ ಕರ್ತೃಗಳು. ಸಂವಿಧಾನದ ಅಂಗಗಳಾದ ಶಾಸಕಾಂಗ, ಕಾರ್ಯಾಂಗ ಮತ್ತು ನ್ಯಾಯಾಂಗ ಜನಗಳಿಂದ, ಜನಗಳಿಗಾಗಿ ಮತ್ತು ಜನಗಳಿಗೋಸ್ಕರ ಎನ್ನುವುದಾದಲ್ಲಿ ಗಂಭೀರವಾದ ಪ್ರಶ್ನೆಗಳಾಗಲೀ ಅಥವಾ ತೊಡಕುಗಳು ಉದ್ಭವಿಸಿದಲ್ಲಿ ಅವುಗಳನ್ನು ಜನತೆಯ ಮುಂದೆ ಮಂಡಿಸಿದಲ್ಲಿ ಅಂತಹ ಪ್ರಕ್ರಿಯೆ ಸಂವಿಧಾನಾತ್ಮಕ ವಾದದ್ದೇ. ಆದರೆ ಜನಗಳ ಮುಂದೆ ಹೋಗಬಾರದು ಎಂಬ ಅಭಿಪ್ರಾಯ ಸಂವಿಧಾನಕ್ಕೆ ಮತ್ತು ಅದರ ಕರ್ತೃಗಳಾದ ಪ್ರಜೆಗಳಿಗೆ ಮಾಡಿದ ಅಪಚಾರವೆಂದೇ ಪರಿಗಣಿಸಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಪರಿಶೀಲಿಸುವುದಾದಲ್ಲಿ ನಾಲ್ವರು ಹಿರಿಯ ನ್ಯಾಯಾಧೀಶರು ಸಂವಿಧಾನಾತ್ಮಕವಾಗೇ ವರ್ತಿಸಿದ್ದಾರೆ.

**ಕೇಂದ್ರೀಕೃತ ಅಧಿಕಾರ**

ಭಾರತದ ಸಂವಿಧಾನ ಸರ್ವೋಚ್ಚ ನ್ಯಾಯಾಲಯಕ್ಕೆ ನೀಡಿರುವ ಅಧಿಕಾರಗಳೊಂದಿಗೆ ಕಾಲಕಾಲಕ್ಕೆ ನೀಡಿದ ತೀರ್ಪುಗಳೊಂದಿಗೆ ತನಗೆ ತಾನೇ ದಕ್ಕಿಸಿಕೊಂಡಿರುವ ಅಧಿಕಾರದೊಂದಿಗೆ ವಿಶ್ವದ ಅತ್ಯಂತ ಪ್ರಬಲಶಾಲಿ ನ್ಯಾಯಾಲಯವಾಗಿ ರೂಪುಗೊಂಡಿದೆ. ಕೇಶವಾನಂದ ಭಾರತಿ ಪ್ರಕರಣ (ಎ.ಐ.ಆರ್ ೧೯೭೩ ಎಸ್.ಸಿ. ೧೪೬೧) ಮತ್ತು ಎಸ್. ಆರ್. ಬೊಮ್ಮಾಯಿ (ಎ.ಐ.ಆರ್ ೧೯೯೪ ಎಸ್.ಸಿ. ೧೯೧೮) ಪ್ರಕರಣಗಳು ಇದಕ್ಕೆ ನಿದರ್ಶನಗಳು. ನ್ಯಾಯಿಕ ಪುನರ್ ವಿಮರ್ಶೆ ಸಂವಿಧಾನದ ಮೂಲ ಲಕ್ಷಣಗಳಲ್ಲೊಂದು ಎಂದು ತೀರ್ಪು ನೀಡಿರುವುದು ಮತ್ತು ನ್ಯಾಯಾಂಗದ ಸ್ವತಂತ್ರತೆಯ ಹೆಸರಿನಲ್ಲಿ ಉಚ್ಚ ನ್ಯಾಯಾಲಯಗಳು ಮತ್ತು ಸರ್ವೋಚ್ಚ ನ್ಯಾಯಾಲಯದ ನ್ಯಾಯಮೂರ್ತಿಗಳ ನೇಮಕಾತಿಯ ಅಧಿಕಾರವನ್ನು ಸಂಪೂರ್ಣವಾಗಿ ತನ್ನದಾಗಿಸಿಕೊಂಡಿದೆ. ಈ ಬೆಳವಣಿಗೆಯೇ ಶಾಸಕಾಂಗ ಮತ್ತು ನ್ಯಾಯಾಂಗದ ನಡುವಿನ ಮುಸುಕಿನ ಗುದ್ದಾಟಕ್ಕೆ ಕಾರಣವಾಗಿದೆ. ಸರ್ವೋಚ್ಚ ನ್ಯಾಯಾಲಯದ ಈ ಅನಿಯಂತ್ರಿತ ಅಧಿಕಾರವೇ ಇಂದು ಉದ್ಭವಿಸಿರುವ ಬಿಕ್ಕಟ್ಟಿಗೆ ಕಾರಣ, ಕೇಂದ್ರೀಕೃತ ಅಧಿಕಾರ ಪ್ರಜಾಪ್ರಭುತ್ವ ವ್ಯವಸ್ಥೆಗೆ ಮಾರಕ. ನ್ಯಾಯಮೂರ್ತಿ ಶ್ರೀ ಚಲಮೇಶ್ವರ್ ವ್ಯಕ್ತಪಡಿಸಿರುವುದು ಈ ಕಾಳಜಿಯನ್ನೇ. ನ್ಯಾಯಮೂರ್ತಿಗಳು ಬಹಿರಂಗವಾಗಿ ಮಾತನಾಡಬಾರದಾಗಿತ್ತು ಎಂದು ಪ್ರತಿಕ್ರಿಯಿಸುವುದು ಕೇವಲ ಮೌಲಿಕ ತೀರ್ಪೇ ಹೊರತು ಅದರ ಕಾರಣಗಳನ್ನು ವಿಶ್ಲೇಷಿಸುವ ಪ್ರಯತ್ನವಲ್ಲ. ಇಂತಹ ಜನರೇ ಬಿಕ್ಕಟ್ಟಿಗೆ ರಾಜಕೀಯ ಲೇಪನ ಹಚ್ಚಿ ಅದನ್ನು ಉಲ್ಬಣಗೊಳಿಸುವವರು. ವ್ಯವಸ್ಥೆಗೆ ಅಂಟಿರುವ ರೋಗದ ಕಾರಣಗಳನ್ನು ಹುಡುಕಿ ಅದಕ್ಕೆ ಬೇಕಾದ ಪರಿಹಾರ ಕಂಡುಕೊಳ್ಳುವುದು ತುರ್ತಾದ ಅಗತ್ಯ. ದೇಶದ ವಿವಿಧ ಬಗೆಯ ವಿವಾದಗಳನ್ನು ಬಗೆಹರಿಸಿ ತೀರ್ಪು ನೀಡುವ ಸರ್ವೋಚ್ಚ ನ್ಯಾಯಾಲಯದ ನ್ಯಾಯಮೂರ್ತಿಗಳಿಗೆ ತಮ್ಮ ವ್ಯವಸ್ಥೆಯನ್ನೂ ಸರಿಪಡಿಸುವ ಶಕ್ತಿಯಿದೆ. ಅದು ಪ್ರತಿಭಟನೆಯ ಫಲವಾಗಬಹುದು.

**ಮುರಳೀಧರ ಚಿಕ್ಕಮಗಳೂರು**
ವಕೀಲರು, ನಂ. ೩, ಎರಡನೇ ಮಹಡಿ, ವಿ. ವಿ. ಪುರಂ
ಬೆಂಗಳೂರು – ೫೬೦ ೦೦೪

## ಸಾದರ ಸ್ವೀಕಾರ

**ಹನುಮನ ಹಲಗೆ** (ಕಾದಂಬರಿ) *ಪಿ. ಆರ್. ವೆಂಕಟೇಶ್*
***ಪುಟ : ೧೫೯*** ***ಬೆಲೆ : ರೂ. ೧೩೦***
**ಅರುಣ ಪ್ರಕಾಶನ,** ನಂ. ೫೧೦, ೪ನೇ ಅಡ್ಡರಸ್ತೆ, ೪ನೇ ಮುಖ್ಯರಸ್ತೆ, ೬೦ಅಡಿ ರಸ್ತೆ, ಆರ್.ಹೆಚ್.ಬಿ.ಸಿ. ಬಡಾವಣೆ, ಬೆಂಗಳೂರು – ೫೬೦ ೦೯೧.

**ವಚನ ರಥ** (ಆಧುನಿಕ ವಚನ ಸಂಕಲನ)
*ಡಾ॥ ಅಭಿನವಕುಮಾರ ಚನ್ನಬಸವ ಸ್ವಾಮಿಗಳು*
***ಪುಟ : ೧೬+೬೪=೮೦*** ***ಬೆಲೆ : ರೂ. ೮೦***
**ಶ್ರೀ ಕುಮಾರೇಶ್ವರ ಗ್ರಂಥಮಾಲೆ,** ಓಲೆಮಠ ಜಮಖಂಡಿ, ನವಿಲುತೀರ್ಥ – ಸವದತ್ತಿ.

**ಜೀವ ಪೀಠ** (ಇದು ಜೀವನ ಪಾಠ) ಕವನ ಸಂಕಲನ
*ಪರಶುರಾಮ ಶಿವಶರಣ*
***ಪುಟ : xii+೬೦*** ***ಬೆಲೆ : ರೂ. ೧೦೦***
**ನಯನಾ ಪ್ರಕಾಶನ,** ಶಿಕಾರಖಾನೆ ರೇಲ್ವೆ ಸ್ಟೇಶನ್ ಹಿಂಭಾಗ ರಸ್ತೆ, ವಿಜಯಪುರ.

**ಬರಿಯ ಒಡಲು** (ಲೇಖನಗಳ ಸಂಗ್ರಹ) *ಈಶ್ವರ ಪ್ರಸಾದ್*
***ಪುಟ : xviii+೧೫೨*** ***ಬೆಲೆ : ರೂ. ೧೦೦***
**ಅಭಿ–ಅನಿ ಬುರ್ಗಿ ಪ್ರಕಾಶನ,** ನಂ. ೮೦೯, ಎ/೧, ೨ನೇ ಮುಖ್ಯರಸ್ತೆ, ೨ನೇ ಅಡ್ಡರಸ್ತೆ, ಸರಸ್ವತಿನಗರ, 'ಬಿ' ಬ್ಲಾಕ್, ದಾವಣಗೆರೆ – ೫೭೭ ೦೦೪

**ಮುಂತಾಜ್ ಮತ್ತು ಇತರೆ ಕಥೆಗಳು** (ಕಥಾ ಸಂಕಲನ)
*ನೂರ್ ಜಹಾನ್*
***ಪುಟ : xii+೧೪೦*** ***ಬೆಲೆ : ರೂ. ೧೫೦***
**ಆಶಾ ಪ್ರಕಾಶನ,** ಸಿದ್ಧಲಿಂಗಪ್ಪ ಚೌಕಿ, ೯ನೇ ವಾರ್ಡ್, ಹೊಸಪೇಟೆ.

**ಮಿಂಚು–ಗುಡುಗು** (ವಿಚಾರಪೂರ್ಣ ಬರಹಗಳು)
*ಎಚ್. ಜಿ. ಸೋಮಶೇಖರರಾವ್*
***ಪುಟ : ೨೭೦*** ***ಬೆಲೆ : ರೂ. ೧೮೦***
**ಅಕ್ಷಯ ಪ್ರಕಾಶನ,** ನಂ. ೯೦, ಬಸಪ್ಪ ಬಡಾವಣೆ, ಪಟ್ಟಣಗೆರೆ, ರಾಜರಾಜೇಶ್ವರಿನಗರ, ಬೆಂಗಳೂರು–೯೮

**ಕತ್ತಲ ನಕ್ಷತ್ರ** (ರೋಹಿತ್ ವೇಮುಲ ಕುರಿತ ಬರಹಗಳು)
*ತೆಲುಗಿನಲ್ಲಿ ವಿರಸಂ*
*ಕನ್ನಡಕ್ಕೆ ಅನುವಾದ : ಬಿ. ಸುಜ್ಞಾನಮೂರ್ತಿ*
***ಪುಟ : xiv + ೧೫೪*** ***ಬೆಲೆ : ರೂ. ೧೨೦***

**ಅಂಬೇಡ್ಕರ್ ದೃಷ್ಟಿಯಲ್ಲಿ – ಸಾಮಾಜಿಕ ಸಬಲೀಕರಣ**
*ತೆಲುಗಿನಲ್ಲಿ ಪ್ರೊ ॥ ಕೆ. ಮುರಳಿಮನೋಹರ್*
*ಕನ್ನಡಕ್ಕೆ : ಬಿ. ಸುಜ್ಞಾನಮೂರ್ತಿ*
***ಪುಟ : viii + ೭೨*** ***ಬೆಲೆ : ರೂ. ೬೦***

**ನಾನು ಹಿಂದೂ ಆಗಿ ಸಾಯಲಾರೆ : ಡಾ॥ ಅಂಬೇಡ್ಕರ್**
*ಸದಾಶಿವ ಮರ್ಜಿ*
***ಪುಟ : ೭೮*** ***ಬೆಲೆ : ರೂ. ೬೦***
ಮೇಲಿನ ನಾಲ್ಕು ಪುಸ್ತಕಗಳ ಪ್ರಕಾಶಕರು
**ಲಡಾಯಿ ಪ್ರಕಾಶನ,** ನಂ. ೨೧, ಪ್ರಸಾದ್ ಹಾಸ್ಟೆಲ್, ಗದಗ – ೫೮೨ ೧೦೧

**ಮಂಡಕ್ಕಿ ತಿಂದ ಗಂಗೆ** (ಕಥಾ ಸಂಕಲನ)
*ಶಾಂತಾರಾಮ ನಾಯಕ ಹಿಚಕಡ*
***ಪುಟ : iv + ೧೧೬*** ***ಬೆಲೆ : ರೂ. ೭೫***
**ಬಂಡಾಯ ಪ್ರಕಾಶನ,** 'ಸಹಯಾನ' ಕೆರೆಕೋಣ, ಅಂಚೆ : ಅರೇ ಅಂಗಡಿ, ತಾಲೂಕು ಹೊನ್ನಾವರ, ಉತ್ತರ ಕನ್ನಡ – ೫೮೧ ೩೩೪

**ಬದುಕಲು ಬಿಡದವರು** (ಕಥಾ ಸಂಕಲನ)
*ಬಸಪ್ಪ ಉಪ್ಪಾರ*
***ಪುಟ : xviii + ೧೨೦*** ***ಬೆಲೆ : ರೂ. ೯೫***
**ಕುವೆಂಪು ಗ್ರಂಥಾಲಯ ಬಳಗ,** ಬಾಜಿಗೊಂಡನಹಳ್ಳಿ, ಹಗರಿಬೊಮ್ಮನಹಳ್ಳಿ ತಾ॥, ಬಳ್ಳಾರಿ ಜಿ॥ – ೫೮೩ ೨೧೨

# ಮನೆ ಕೆಲಸದ ಹಳ್ಳಿ ಹುಡುಗಿ

ಮೂಲ : **ರೊನಾಲ್ಡ್ ವಿಲಿಯಮ್ಸ್**
ಕನ್ನಡಕ್ಕೆ : **ಕೆ. ಎನ್. ನಾಗರಾಜು (ರಾಜ್‌ನಾಗ್)**




ಮಲಗಿದ್ದ ಮಸೀಜನಿಗೆ ಮಗ್ಗಲು ಬದಲಿಸಿದಾಗ ಭುಜಗಳ ನೋವು ಕಾಡಿತು. ವಾರವೆಲ್ಲಾ ಕಷ್ಟಪಟ್ಟು ದುಡಿದದ್ದರ ಪರಿಣಾಮವಿದು. ಭಾನುವಾರಗಳ ಮುಂಜಾನೆಯ ಮಾಮೂಲು ಸ್ಥಿತಿಯಿದು. ಇದಕ್ಕಿಂತ ಹೆಚ್ಚಿಗೆ ಇನ್ನೇನೂ ಅವನಿಗೆ ಅನ್ನಿಸುತ್ತಿರಲಿಲ್ಲ. ಒಂದು ವಾರದಲ್ಲಿ ಆರುದಿನ ಗುಲಾಮನಂತೆ ಪುಡಿಗಾಸಿಗಾಗಿ ದುಡಿಯುವುದು, ಒಂದು ದಿನ ವಿರಾಮ, ಮತ್ತು ಪ್ರತಿ ದಿನ, ಪ್ರತಿ ವರ್ಷ ಕೊನೆಯಿಲ್ಲದ ಸೆಣಸಾಟ.

ಈ ಆಲೋಚನೆ ಸದಾ ಅವನ ತಲೆಯಲ್ಲಿ ತುಂಬಿರುತ್ತಿತ್ತು. ಆದರೆ ಇಂದು ಮುಂಜಾನೆ ಸಂತೋಷ, ರೋಮಾಂಚನಗಳ ಸಂಮಿಶ್ರಭಾವ ಆವರಿಸಿತ್ತು. ಬದುಕಿನಲ್ಲಿ ಒಳ್ಳೆಯ ಬದಲಾವಣೆ ಒದಗಿ ಬರುವ ಸೂಚನೆಯಿತ್ತು. ಏಕೆಂದರೆ ಮಸೀಜ ಗುರುವಾರ ರೆಬೆಕಳನ್ನು ಭೇಟಿಯಾಗಿದ್ದ.

ಮಸೀಜ ಇಲ್ಲಿಗೆ ಬಂದ ಮೇಲೆ ಈ ನಗರದ ಹೆಂಗಸರ ಬಗ್ಗೆ ಎಂದೂ ತಲೆ ಕೆಡಿಸಿಕೊಂಡಿರಲಿಲ್ಲ. ಆದರೆ ರೆಬೆಕಳನ್ನು ನೋಡಿದ ಮೇಲೆ ಅವಳು ಬೇರೆ ತರಹ ಅನ್ನಿಸಿತು. ಅವಳು ನಗರದ ಹುಡುಗಿಯಲ್ಲ. ದೂರದ ಹಳ್ಳಿಯೊಂದರಿಂದ, ಅದೂ ಇವನ



ಹಳ್ಳಿಗೆ ಸಮೀಪದ ಹಳ್ಳಿಯೊಂದರಿಂದ ಬಂದವಳು. ಅವಳ ಸರಳ ಉಡುಗೆ, ತೊಡುಗೆ, ನೇರ ಹಾಗೂ ಸಹಜ ಮಾತು, ನೇರನೋಟ, ನಾಚಿಕೆ ಸ್ವಭಾವ ಅವನ ಗಮನವನ್ನು ಸೆಳೆದಿದ್ದವು. ಅವಳನ್ನು ಭೇಟಿಯಾದಾಗ ಮಸೀಜನಿಗೆ ತನ್ನ ಹಳ್ಳಿಯ ಮನೆಯಲ್ಲಿರುವ ಭಾವನೆಯುಂಟಾಯಿತು. ಅದೊಂದು ಅಪರೂಪದ ಸಂದರ್ಭ. ಅವಳಿಗೂ ತನ್ನ ಹಳ್ಳಿಯ ಕಡೆಯ ಹುಡುಗನೊಬ್ಬನನ್ನು ಭೇಟಿ ಮಾಡಿದ್ದು ಖುಷಿಯುಂಟುಮಾಡಿತ್ತು. ಅವಳು ಮಸೀಜನನ್ನು ತಾನು ಕೆಲಸ ಮಾಡುವ ಮನೆಗೆ ಭಾನುವಾರ ಬರುವಂತೆ ಕರೆದಳು. ಅಂದು ಅವಳ ಮನೆಯ ಮಾಲೀಕರು ಎಲ್ಲಿಗೋ ಹೋಗುವವರಿದ್ದರು.

ಮಸೀಜ ಸಂತೋಷದಿಂದ ಒಪ್ಪಿಕೊಂಡ. ತನ್ನ ಹಳ್ಳಿಯ ಮನೆಯಿಂದ ದೂರವಿರುವವನಿಗೆ ಅದೃಷ್ಟ ತಾನಾಗಿ ಒಲಿದುಬಂದಿತ್ತು. ಹೆಂಗಸರ ಸಹವಾಸವಿಲ್ಲದೆ ಮೂರು ವರ್ಷಗಳ ಕಾಲ ಕೇಪ್‌ಟೌನಿನಲ್ಲಿ ಕಳೆದಿದ್ದ ಅವನಿಗೆ ಹಳ್ಳಿಯ ಕಡೆಯ, ಕಳಂಕ ರಹಿತ ಹುಡುಗಿಯೊಬ್ಬಳನ್ನು ಭೇಟಿ ಮಾಡುವ ಅವಕಾಶ ಲಭಿಸಿತ್ತು.

ಅವನು ಮಲಗಿದೆಡೆಯಿಂದ ತಲೆ ಎತ್ತಿ ಕೋಣೆಯ ಸುತ್ತಾ ಕಣ್ಣು ಹಾಯಿಸಿದ. ಫಾಂಡಿಯ ಹಾಸಿಗೆ ಖಾಲಿ ಯಾಗಿತ್ತು. ಮುಂಜಾನೆ ಅಷ್ಟು ಬೇಗ ಅವನು ಏಳುವ ಸಾಧ್ಯತೆಯಿರಲಿಲ್ಲ. ಮೈಸಿಯನ್ನು, ಅವಳು ಕೆಲಸ ಮಾಡುವ ಮನೆಗೆ ಹೋಗುವ ಬಸ್‌ಸ್ಟಾಪಿನ ಬಳಿ ಅವನು ಬಿಟ್ಟು ಬರುವುದು ಎಂಟು ಗಂಟೆಯ ವೇಳೆಗೆ.

ಮಸೀಜನಿಗೆ ಫಾಂಡಿಯಂಥವರು ಪಾಪದವರು ಅನ್ನಿಸಿತು. ಅವರು ಹುಡುಗಿಯರನ್ನು ಅವಿವಾಹಿತರ ಹಾಸ್ಟೆಲ್‌ಗಳಿಗೆ ತಡರಾತ್ರಿ ಕದ್ದು ಸಾಗಿಸಿ, ಮುಂಜಾನೆ ಬೇಗ ಅವರನ್ನು ಕರೆತರಬೇಕಾಗಿತ್ತು. ಇದರಿಂದ ಕಾವಲುಗಾರರಿಗೆ ತೆರಬೇಕಾದ ಲಂಚವನ್ನು ತಪ್ಪಿಸಬಹುದಾಗಿತ್ತು. ಫಾಂಡಿ ಎಂದೂ ಲಂಚಕೊಟ್ಟವನಲ್ಲ. ಅವನ ರಕ್ತ ಹೀರಲು ಯಾರಿಗೂ ಅವಕಾಶ ಕೊಡುತ್ತಿರಲಿಲ್ಲ.

ಮಸೀಜ ತನ್ನ ಹೊಳೆಯುವ, ಅಗಲವಾದ ಟೈ ಕಟ್ಟಿಕೊಳ್ಳುತ್ತಿರುವಾಗ, ಫಾಂಡಿ ಕೋಣೆಯೊಳಕ್ಕೆ ಬಂದ. ಮಸೀಜ ತೊಟ್ಟಿರುವ ಉಡುಪನ್ನು ನೋಡಿ ಫಾಂಡಿಗೆ ಆಶ್ಚರ್ಯವಾಯಿತು.

"ಏನಯ್ಯಾ ಇವತ್ತು? ಚರ್ಚಿಗೆ ಹೋಗ್ತಿದ್ದೀನಿ ಅಂತ ಹೇಳ್ಬೇಡ, ಅಥವಾ ನೀನೇನಾದರೂ ಮತಾಂತರ ಗಿತಾಂತರ ಮಾಡಿದ್ದೀಯೊ?" ಎಂದು ಕೇಳಿದ.

ಫಾಂಡಿಗೆ ಉತ್ತರ ಕೊಡುವ ಮೊದಲು ಪಾಲಿಶ್ ಮಾಡಿದ ತನ್ನ ಹೊಳೆವ ಶೂಗಳನ್ನು ಮಸೀಜ ನೋಡಿಕೊಂಡ. ಅನಂತರ ಹೆಗಲ ಮೇಲಿದ್ದ ತಂಪು ಕನ್ನಡಕ ತೆಗೆದುಕೊಂಡ.

"ನಾನು ಸೀ ಪಾಯಿಂಟ್‌ಗೆ ಹೋಗ್ತಿದ್ದೀನಿ" ಅಂದ. ಆಶ್ಚರ್ಯದಿಂದ ನೋಡಿದ ಫಾಂಡಿಗೆ ಮುಖದಲ್ಲಿ ನಗೆ ಮೂಡಿತು.

"ಯಾವ ನಂಟರನ್ನು ನೋಡೋಕ್ಕೆ ಹೋಗ್ತಿದ್ದೀಯಾ? ಅಥವಾ ಯಾವುದಾದರು ಕೆಲಸ ಹುಡುಕ್ತಿದ್ದೀಯೇನು, ಮನೆಕೆಲಸ, ತೋಟದ ಮಾಲಿ?" ಎಂದು ಪಕಪಕನೆ ನಕ್ಕ.

"ಗೇಲಿ ಮಾಡು, ಮಾಡು. ನಿಮ್ಮಂಥ ಹುಡುಗರಿಗೆ ಒಂದು ಆಶ್ಚರ್ಯ ಕಾದಿದೆ" ಮಸೀಜ ಉತ್ತರಿಸಿದ. "ನಾನು ಹುಡುಗಿ ಯೊಬ್ಬಳನ್ನು ಭೇಟಿ ಮಾಡೋಕ್ಕೆ ಹೋಗ್ತಿದ್ದೀನಿ, ನಿಮ್ಮ ಹುಡುಗೀರ ತರ ಸದಾ ಸಿಗರೇಟ್ ಎಳೀತಾ, ಕುಡಿದು ಮೈ ಊದಿಸಿಕೊಂಡಿರೊ ತರದವರಲ್ಲ. ನಾನು ಹೇಳ್ತಿರೋದು ನಿಜವಾದ ಹಳ್ಳಿ ಹುಡುಗಿ ವಿಚಾರ. ಇನ್ನೊಂದು ವಿಷಯ. ಅವಳಿಗೆ ವಾಸಕ್ಕೆ ಸೇವಕರ ಮನೆ ಬೇರೆ ಇದೆ. ಇನ್ನು ಮುಂದೆ ನಾನು ಬಾಡಿಗೆ ತೆರಬೇಕಾಗಿಲ್ಲ. ಅವಳು ಕೆಲಸ ದಲ್ಲಿರುವಷ್ಟು ದಿವಸ ಊಟಕ್ಕೆ ತೊಂದರೆಯಿಲ್ಲ..."

"ಅದೆಲ್ಲಾ ಬಿಟ್ಟಿ ಸಿಗಲ್ಲಪ್ಪ, ನೀನು ಅವರ ಕೈ

ತೋಟದಲ್ಲಿ ಕೆಲಸ ಮಾಡಬೇಕು, ಯಜಮಾನನ ಕಾರು ತೊಳೀಬೇಕು. ಇದೆಲ್ಲಾ ದರಿದ್ರ, ಕಚಡಾ ಕೆಲಸ." ಫಾಂಡಿ ತಲೆ ಅಲ್ಲಾಡಿಸಿ "ನಾನು ಯಾವತ್ತೂ ಇವೆಲ್ಲ ಮಾಡೋಲ್ಲ" ಅಂದ.

"ಈಗ ನೀನು ಮಾಡ್ತಿದ್ದೀಯಲ್ಲಾ, ಇದಕ್ಕಿಂತ ಅದು ಒಳ್ಳೇ ಕೆಲಸ ಕಣೋ, ಒಂದಲ್ಲಾ ಒಂದು ದಿನಾ, ನೀನು ಮೈಸಿ ಸಿಕ್ಕಿಬೀಳ್ತೀರಿ" ಮಸೀಜ ಎಚ್ಚರಿಸಿದ.

ಹೀಗೆ ಮಾತಾಡುತ್ತಾ ಮಸೀಜ ತನ್ನ ಬಳಿಯಿದ್ದ ಒಳ್ಳೆಯ ಸೂಟ್ ಕೊಟ್ಟ. ಫಾಂಡಿ ಅವನ ಸಾಧಾರಣ ಬಟ್ಟೆ ಧರಿಸಿದ. ಫಾಂಡಿ ಬುದ್ಧಿವಂತ, ಅವನು ಎಂದೂ ಹೆಚ್ಚು ಬೆಲೆಯ ಬಟ್ಟೆ ಕೊಳ್ಳುತ್ತಿರಲಿಲ್ಲ. ಅದೇ ಹಣದಲ್ಲಿ ಚೆನ್ನಾಗಿ ತಿಂದು, ಕುಡಿದು ಮಜಾ ಮಾಡೋದು ಅವನಿಗೆ ಗೊತ್ತು. ಅವನು ಹೊರಟುಬಿಟ್ಟ.

ನೆಲದ ಮೇಲೆ ಬಿಚ್ಚಿ ಎಸೆದಿದ್ದ ಮಾಸಲು ಬಟ್ಟೆ ತಾನು ತೊಟ್ಟಿದ್ದೆಂದು ಮಸೀಜನಿಗೆ ನಂಬಲಾಗಲಿಲ್ಲ. ಈಗ ಅವನು ಧರಿಸಿದ್ದ ನೀಲಿ ಬಣ್ಣದ, ಹೊಳೆವ ಸೂಟ್ ಅವನಿಗೆ ಸೊಬಗು ತಂದುಕೊಟ್ಟಿತ್ತು. ಆ ಮಾಸಿದ ಬಟ್ಟೆಯ ಜೇಬುಗಳಲ್ಲಿರುವುದನ್ನು ತೆಗೆದು ಸೂಟಿನಲ್ಲಿಟ್ಟುಕೊಂಡು ಅದನ್ನು ಕೊಳಕು ಮಾಡಬಾರದೆಂದು ನಿರ್ಧರಿಸಿದ. ಮೂರನೇ ದರ್ಜೆಯ ತಿಂಗಳ ಟಿಕೆಟ್ಟನ್ನು ಕೂಡ ಅಂದು ಬಳಸಬಾರದು ಅಂದುಕೊಂಡ. ಅವತ್ತೇನಿದ್ದರೂ ಎರಡನೇ ದರ್ಜೆಗೆ ಮೀಸಲು.

ಮಸೀಜ ಸ್ಟೇಷನ್ ಕಡೆ ಲವಲವಿಕೆಯಿಂದ, ತಲೆಯೆತ್ತಿ ನಡೆಯುತ್ತಾ ಹೊರಟ. ಟಾರ್ ರಸ್ತೆಯ ಮೇಲೆ ನಡೆಯುತ್ತಾ, ಕಾಲುಹಾದಿಯ ದೂಳು, ಬಟ್ಟೆಗೆ ಸೋಕದಂತೆ ನೋಡಿಕೊಂಡ. ಎದುರು ಬಂದವರು ಅಪರಿಚಿತ ರಾದರೂ ನಕ್ಕು ನಮಸ್ಕರಿಸುತ್ತಾ ಸಾಗಿದ. ಮಸೀಜ ತುಂಬ ಖುಷಿಯಾಗಿದ್ದ. ಜೀವನದಲ್ಲಿ ಒಂದಲ್ಲಾ ಒಂದು ರೀತಿಯ ಸಂತೋಷ, ಪ್ರತಿಫಲ ಇದ್ದೇ ಇರುತ್ತೆ. ಮನುಷ್ಯ ಅವನ ಸರದಿಗಾಗಿ ಕಾಯಬೇಕಷ್ಟೆ. ಏನೂ ತಿನ್ನದೆ ಮನೆಯಿಂದ ಹೊರಟನಾದ್ದರಿಂದ ಬಿಳಿಯ ಜನ ಮಾಡುವಂಥ ಒಳ್ಳೆಯ ಊಟ ಮಾಡಬೇಕು, ಗಬಗಬ ತಿನ್ನಬೇಕು ಅಂದುಕೊಂಡ.

ಕೇಪ್‌ಟೌನ್ ಸ್ಟೇಷನ್ನಿನಿಂದ ಬಸ್‌ಸ್ಟಾಪಿಗೆ ವೇಗವಾಗಿ ನಡೆದುಬಂದು, ಕೆಲವೇ ನಿಮಿಷಗಳಲ್ಲಿ ಸೀ ಪಾಯಿಂಟ್‌ಗೆ ಹೋಗುವ ಬಸ್ಸಿನಲ್ಲಿ ಕುಳಿತು ಬಿಟ್ಟಿದ್ದ. ಇಪ್ಪತ್ತನೇ ಬಸ್‌ಸ್ಟಾಪಿನಲ್ಲಿ ಇಳಿದು, ಮೌಂಟ್‌ಸ್ಟ್ರೀಟ್‌ಗೆ ಹೋಗಿ, ಬಲಗಡೆಯ ಮೂರನೇ ಗೇಟ್ ತಲುಪಿದರೆ, ಅವನಿಗಾಗಿ ಕಾಯುತ್ತಿರುವ ಹುಡುಗಿಯ ಮನೆಯನ್ನು ಸೇರಬಹುದು. ಸುಲಭದ ದಾರಿ. ಮಸೀಜ ತನ್ನ ಸೀಟಿನಲ್ಲಿ ತಾಳ್ಮೆಯಿಲ್ಲದೆ ಚಡಪಡಿಸುತ್ತಾ ಕುಳಿತಿದ್ದ. ಬಸ್ ಬಹಳ ಕಡೆ ನಿಂತು, ನಿಂತು ತುಂಬ ನಿಧಾನವಾಗಿ ಹೋಗ್ತಾಯಿದೆ ಅನ್ನಿಸಿತು. ನಡೆದು ಹೋಗಿದ್ದರೆ ಇನ್ನೂ ಬೇಗ ಹೋಗಬಹುದಾಗಿತ್ತು ಅಂದುಕೊಂಡ.

ಆ ವೇಳೆಗೆ ಕಂಡಕ್ಟರ್ 'ಬಸ್‌ಸ್ಟಾಪ್ ಇಪ್ಪತ್ತು' ಎಂದು ಕೂಗಿದ್ದೇ ತಡ, ಮಸೀಜ ಹೊರಗೆ ನೆಗೆದುಬಿಟ್ಟಿದ್ದ. ಬಸ್ ಇಳಿಯುತ್ತಿದ್ದಂತೆ ಇಬ್ಬರು ಆಫ್ರಿಕನ್ನರು ಎದುರು ದಿಕ್ಕಿನಿಂದ ವೇಗವಾಗಿ ಬರುತ್ತಿರುವುದು ಕಾಣಿಸಿತು. ಆತಂಕಕ್ಕೆ ಒಳಗಾದವರಂತೆ, ಹಿಂದೆ ತಿರುಗಿ ತಿರುಗಿ ನೋಡುತ್ತಾ, ಬೇರೆ ಬೇರೆ ದಿಕ್ಕುಗಳ ಕಡೆ ಕೈ ತೋರುತ್ತಾ, ಯಾವ ದಾರಿ ಹಿಡಿಯಬೇಕೆಂಬ ಗೊತ್ತುಗುರಿ ಇಲ್ಲದವರಂತೆ ಬರುತ್ತಿದ್ದರು. ಮಸೀಜ ನಿಂತು ಕುತೂಹಲದಿಂದ ಅವರನ್ನು ಗಮನಿಸುತ್ತಾ ತನ್ನ ಟೈ ಸರಿಪಡಿಸಿಕೊಂಡ. ಅವರು ಅವನನ್ನು ದಾಟಿ ಹೋಗುವಾಗ, "ಸೋದರ ನೀನು ತಪ್ಪುದಾರಿ ಹಿಡಿದಿದ್ದೀಯ. ಅಲ್ಲಿ ಪರಿಸ್ಥಿತಿ ಕೆಟ್ಟದಾಗಿದೆ" ಎಂದು ಒಬ್ಬ ಹೇಳಿದ. ಆ ಬಗ್ಗೆ ಅವರನ್ನು ವಿಚಾರಿಸಬೇಕು ಅನ್ನುವಷ್ಟರಲ್ಲಿ, ಮೂಲೆಯಲ್ಲಿ ತಿರುಗಿ ಅವರು ಕಣ್ಮರೆಯಾದರು.

ಏನಾದರೇನು, ಈ ದಿನವನ್ನಂತೂ ಯಾವುದೂ ಹಾಳುಮಾಡಲಾರದು. ಅವನ ಗೆಳೆಯರು ಕೊಚ್ಚಿಕೊಳ್ಳುತ್ತಿದ್ದ ರೋಚಕ ಸಂಗತಿಗಳಂತೆ ನನಗೂ ಅವರ ಮುಂದೆ ಕೊಚ್ಚಿಕೊಳ್ಳಲು ಒಂದು ಅವಕಾಶ ಬಂದೊದಗಿದೆ. ನನ್ನನ್ನು ಕೀಟಲೆ ಮಾಡುತ್ತಿದ್ದವರ ಬಾಯಿಗಳನ್ನೀಗ ಮುಚ್ಚಿಸಬಹುದು ಎಂದು ಬೀಗಿದ.

ಅವನು ಒಂದು ಹೆಜ್ಜೆ ಮುಂದಿಡುತ್ತಿದ್ದಂತೆ, ಒಂದು ಪೊಲೀಸ್ ವ್ಯಾನ್ ಗೋಚರಿಸಿತು. ಅವನು ಮುಂದಕ್ಕೆ ನಡೆದರೂ ಆತಂಕಗೊಂಡ. ನಾನೇಕೆ ಭಯ ಪಡಬೇಕು? ನಾನೇನೂ ಮಾಡಿಲ್ಲ, ಅಂದುಕೊಂಡು ತನ್ನನ್ನು ತಾನೇ ಸಮಾಧಾನ ಪಡಿಸಿಕೊಳ್ಳುತ್ತಾ ನಡೆದ. ಆದರೂ ಅವನಿಗೆ ಗೊತ್ತಿತ್ತು, ಈ ಪೊಲೀಸರು ಆಫ್ರಿಕನ್ನರನ್ನು ತಡೆದು ಪ್ರಶ್ನಿಸಲು ಕಾರಣಗಳಿಗಾಗಿ ಕಾಯುವವರಲ್ಲ ಎಂದು.

"ಏಯ್, ನೀನು, ಬಾ ಇಲ್ಲಿ" ವ್ಯಾನ್ ನಿಲ್ಲುತ್ತಿದ್ದಂತೆ ಪೊಲೀಸನೊಬ್ಬ ಇವನನ್ನು ಕೂಗಿ ಕರೆದ. ಮಸೀಜ ತನ್ನ ಹಿಂದೆ ಇರಬಹುದಾದ ಯಾರನ್ನಾದರೂ ಕರೆಯುತ್ತಿರಬಹುದೆಂಬ ಮುಗ್ಧತೆಯಿಂದ ಅತ್ತ ನೋಡಿದ. "ನೀನು" ಮತ್ತೆ ಅಸಹನೆಯ ಧ್ವನಿ, ಮಸೀಜ ಪ್ರಶ್ನಿಸುವವನಂತೆ ತನ್ನ ಕಡೆ ಬೆರಳು ತೋರಿಸಿಕೊಂಡ.

"ಹೌದು, ನೀನೆ!" ಪೊಲೀಸನೊಬ್ಬ ಕೋಪದಿಂದ ಗರ್ಜಿಸುತ್ತಾ, ಆಫ್ರಿಕನ್ ಭಾಷೆಯಲ್ಲಿ ಏನೋ ಗೊಣಗುತ್ತಾ ವ್ಯಾನ್‌ನಿಂದ ಹೊರಗೆ ಬಂದು "ಯಾವ ಕಡೆ ಹೊರಟಿದ್ದೀಯಾ?" ಎಂದು ಕೇಳಿದ.

"ಇಲ್ಲೆ, ಹತ್ತಿರದಲ್ಲಿ ಬಾಸ್, ಆ ಕಡೆ" ಮಸೀಜ ತಾನು ಹೋಗಬೇಕಾದ ದಿಕ್ಕು ತೋರುತ್ತಾ ಆದಷ್ಟು ಬೇಗ ಅಲ್ಲಿಗೆ ಹೋಗಬೇಕಾಗಿರುವುದನ್ನು ಸೂಚಿಸಿದ.

"ನೀವೆಲ್ಲಾ ಇಲ್ಲಿನವರು, ಸೀ ಪಾಯಿಂಟ್ ಹತ್ತಿರ ಜಾಗ ಮಾಡಿಕೊಂಡಿದ್ದೀರಾ? ಯಾರು ನೀನು?"

"ನಾನು..." ಪೊಲೀಸ್ ಅವನ ಕೈ ಹಿಡಿದುಕೊಂಡ. ಪೊಲೀಸನಿಗೆ ಏನು ಬೇಕು ಎಂದು ಮಸೀಜ ಕೇಳುವ ಹಾಗಿರಲಿಲ್ಲ. ಪಾಸ್‌ಗಾಗಿ ತನ್ನ ಜೇಬು ತಡಕಾಡಿದ. ಅದು ಅಲ್ಲಿರಲಿಲ್ಲ. ಎಲ್ಲಾ ಜೇಬುಗಳನ್ನೂ ಹುಡುಕಿದ. ಆದರೆ ಆ ಸಣ್ಣ ಪಾಸ್‌ಬುಕ್ ಎಲ್ಲೂ ಇರಲಿಲ್ಲ. ಮಸೀಜ ಗಾಬರಿಗೊಳಗಾದ.

"ಪಾಸ್ ಇಲ್ಲವಾ?" ಪೊಲೀಸ್ ಅವನ ತೋಳು ಹಿಡಿದು ಜೊತೆಯಲ್ಲಿ ಬರುವಂತೆ ಎಳೆದ.

"ದಯವಿಟ್ಟು ಬಾಸ್, ನಾನು..."

"ನಿಮ್ಮ ಕಳ್ಳತನ, ಹೊಡೆದಾಟ, ಇವೆಲ್ಲಾ ನೋಡಿ, ನೋಡಿ ನಮಗೆ ಸಾಕಾಗಿದೆ, ಸುಮ್ಮನೆ ನಡಿ!"

ಮಸೀಜನಿಗೆ ಆಗ ನೆನಪಾದದ್ದು, ಅವನು ಬಿಚ್ಚಿ ಎಸೆದಿದ್ದ ಆ ಮಾಸಿದ ಬಟ್ಟೆಗಳು. ಆ ಮಾಸಿದ ಬಟ್ಟೆಯ ಜೇಬಿನಲ್ಲಿ ಅವನ ಪಾಸ್ ಜೊತೆಗೆ ಮೂರನೇ ದರ್ಜೆ ಟಿಕೆಟ್ ಕೂಡ ಇತ್ತು. ಅದರೊಂದಿಗೆ ವಾರವೆಲ್ಲಾ ಬೆವರೊರಸಿ ಕೊಳಕಾಗಿದ್ದ ಕರ್ಚೀಫ್. ಮಸೀಜನಿಗೆ ಎಂಥಾ ತೊಂದರೆಯಲ್ಲಿ ಸಿಕ್ಕಿ ಬಿದ್ದೆ ಎನ್ನುವುದು ಆಗ ಅರಿವಿಗೆ ಬಂತು. ಕೆಲಸ ಹೋಗುತ್ತೆ, ಜೈಲು ಎಷ್ಟು ವರ್ಷ ಬೇಕಾದರೂ ಆಗಬಹುದು. ಅನಂತರ ಕೆಲಸ ಸಿಗುತ್ತೊ ಇಲ್ಲವೊ ಗೊತ್ತಿಲ್ಲ. ಮತ್ತೆ ಕೆಲಸ ಹುಡುಕಬೇಕಾಗುತ್ತೆ. ಗಡಿಪಾರು ಶಿಕ್ಷೆ ವಿಧಿಸಿದರೂ ವಿಧಿಸಬಹುದು...

ತಾನು ಭೇಟಿ ಮಾಡಬೇಕಾದ ಹುಡುಗಿಯ ನೆನಪಾಗುತ್ತಿದ್ದ ಹಾಗೆ ಮತ್ತೆ ಪ್ರಯತ್ನಿಸಲು ನಿರ್ಧರಿಸಿದ. "ದಯಮಾಡಿ ಬಾಸ್, ಅದು ನನ್ನ ಮನೆಯಲ್ಲಿದೆ ಸರ್..."

ಕೆಲವೇ ಕ್ಷಣಗಳಲ್ಲಿ ಜನರಿಂದ ತುಂಬಿತುಳುಕುತ್ತಿದ್ದ ವ್ಯಾನ್ ಒಳಕ್ಕೆ ಅವನನ್ನು ದಬ್ಬಿದರು. ಕೆಲಸಗಾರರ ವಸತಿ ನಿಲಯದಲ್ಲಿ ಯಾರೋ ಯಾರನ್ನೋ ಇರಿದು ಕೊಂದ ಸಂಗತಿ ಅಲ್ಲಿದ್ದವರ ಮಾತಿನಿಂದ ತಿಳಿದು ಬಂದಿತು. ವ್ಯಾನ್ ಈಗ ಪೊಲೀಸ್ ಸ್ಟೇಷನ್ ಕಡೆಗೆ ವೇಗವಾಗಿ ಓಡುತ್ತಿತ್ತು. ಆ ದಿನ ಮನೆಕೆಲಸದ ಹಳ್ಳಿಯ ಹುಡುಗಿಯೊಂದಿಗೆ ಕಳೆಯಬಹುದಾಗಿದ್ದ ಆ ಸಂತೋಷದ ಅಪೇಕ್ಷೆ ನಶಿಸಿಹೋಯಿತು. ಆಕೆ ತನಗಾಗಿ ನಿರೀಕ್ಷಿಸುತ್ತಿರುವ ಚಿತ್ರ ಮಸೀಜನ ಮನಸ್ಸಿನಲ್ಲಿ ಮೂಡಿತು. ಜನರು ಹಳ್ಳಿಯಿಂದ ಬಂದವ ರಾದರೂ ನಗರವು ಅವರನ್ನು ಭ್ರಷ್ಟರನ್ನಾಗಿ, ನಂಬಿಕೆಗೆ ಅರ್ಹರಲ್ಲದವರನ್ನಾಗಿ ಮಾಡಿ ಬಿಡುತ್ತದೆ ಎಂದು ಅವಳು ತೀರ್ಮಾನಿಸಿಬಿಡಬಹುದು.

ಮಸೀಜನಿಗೆ ಹಸಿವಿನಿಂದ ಹೊಟ್ಟೆ ತಾಳಹಾಕತೊಡಗಿತು. ತಾನು ಮನೆಯಲ್ಲಿ ಬಿಟ್ಟು ಬಂದ ಹೊಸ ಬ್ರೆಡ್ ತುಣುಕು ಅವನ ನೆನಪಿಗೆ ಬಂದಿತು.

(ಸೌತ್ ಆಫ್ರಿಕಾದ ಕತೆಗಾರ ರೊನಾಲ್ಡ್ ವಿಲಿಯಮ್ಸ್ ಬರೆದ **Home-Girl** ಎಂಬ ಇಂಗ್ಲಿಷ್ ಕತೆಯ ಅನುವಾದ)

ಮೂಲ : **ರೊನಾಲ್ಡ್ ವಿಲಿಯಮ್ಸ್**
ಕನ್ನಡಕ್ಕೆ : **ಕೆ. ಎನ್. ನಾಗರಾಜು (ರಾಜ್‌ನಾಗ್)**
ನಂ. ೯೮೬, 'ಸತ್ಯ ಸಂಪದ', ೨೯ನೇ ಮುಖ್ಯರಸ್ತೆ
ಪೂರ್ಣಪ್ರಜ್ಞ ನಗರ, ಬೆಂಗಳೂರು – ೫೬೦ ೦೬೧

# ಬೆವರ ಹನಿಯ ಮೂಲಕ ನೆಲದ ಸಿರಿಯ ಅನಾವರಣ

**ದೇಶದ ನಿರುದ್ಯೋಗ ಸಮಸ್ಯೆಗೆ ಒಂದು ಚಿಕ್ಕ ಪರಿಹಾರವಾಗಬಹುದಾದ ನರೇಗಾ ಯೋಜನೆಯ ಅನುಷ್ಠಾನಕ್ಕಿರುವ ಅಡೆತಡೆಗಳು, ಅನುಷ್ಠಾನಗೊಂಡ ನಂತರ ಎದುರಿಸಬೇಕಾದ ಸಮಸ್ಯೆಗಳು ಮತ್ತು ಅದರಿಂದ ಜನರಿಗೆ ಉಂಟಾಗಿರುವ ಪ್ರಯೋಜನಗಳೆಲ್ಲವನ್ನೂ ಸಮಗ್ರವಾಗಿ ಸಂಶೋಧಿಸಿ, ದಾಖಲಿಸಿರುವ 'ನೆಲದ ಸಿರಿ' ಮತ್ತು 'ಬೆವರ ಹನಿ' (ಪರ್ಲ್ಸ್ ಆಫ್ ಸ್ವೆಟ್) ಪುಸ್ತಕಗಳು ಅಭಿವೃದ್ಧಿ ಅರ್ಥಶಾಸ್ತ್ರಕ್ಕೆ ಅತ್ಯುತ್ತಮ ಕೊಡುಗೆಗಳಾಗಿವೆ.**

'ಹಸಿವು ನಮ್ಮ ದೇಶದ ದೊಡ್ಡ ಶತ್ರು' ಎಂದರು ಮಹಾತ್ಮ ಗಾಂಧಿ. ಹಾಗೆಯೇ, 'ಗ್ರಾಮ ಭಾರತದಿಂದ ಮಾತ್ರ ಸದೃಢ ಭಾರತ ನಿರ್ಮಾಣ ಸಾಧ್ಯ' ಎಂದೂ ಅವರು ಜಪಿಸಿದ್ದರು. ಈ ಮಹಾತ್ಮನ ಹೆಸರು ಹೊತ್ತ ರಾಷ್ಟ್ರೀಯ ಕಲ್ಯಾಣ ಯೋಜನೆ, 'ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಕಾಯಿದೆ'. ದೇಶದ ನಿರುದ್ಯೋಗ ಸಮಸ್ಯೆಗೆ ಒಂದು ಚಿಕ್ಕ ಪರಿಹಾರವಾಗಬಹುದಾದ ಈ ಯೋಜನೆಯ ಅನುಷ್ಠಾನಕ್ಕಿರುವ ಅಡೆತಡೆಗಳು, ಅನುಷ್ಠಾನಗೊಂಡ ನಂತರ ಎದುರಿಸಬೇಕಾದ ಸಮಸ್ಯೆಗಳು ಮತ್ತು ಅದರಿಂದ ಜನರಿಗುಂಟಾಗಿರುವ ಪ್ರಯೋಜನಗಳೆಲ್ಲವನ್ನೂ ಸಮಗ್ರವಾಗಿ ಸಂಶೋಧಿಸಿ, ದಾಖಲಿಸಿರುವ 'ನೆಲದ ಸಿರಿ' ಮತ್ತು 'ಬೆವರ ಹನಿ' (ಪರ್ಲ್ಸ್ ಆಫ್ ಸ್ವೆಟ್) ಪುಸ್ತಕಗಳು ಅಭಿವೃದ್ಧಿ ಅರ್ಥಶಾಸ್ತ್ರಕ್ಕೆ ಅತ್ಯುತ್ತಮ ಕೊಡುಗೆಗಳಾಗಿವೆ. ಕರ್ನಾಟಕದ ಪ್ರಮುಖ ಮಹಿಳಾ ಸಂಘಟನೆಗಳಲ್ಲಿ ಒಂದಾದ ಜನವಾದಿ ಮಹಿಳಾ ಸಂಘಟನೆಯ ನೇತೃತ್ವದಲ್ಲಿ ನಡೆದ ಈ ಯೋಜನೆಯ ಕಾರ್ಯಕ್ರಮದ ಅನುಷ್ಠಾನದಲ್ಲಿ ವ್ಯಕ್ತವಾದ ವೈವಿಧ್ಯಮಯ ಅನುಭವಗಳ ಸಾರ ಇಲ್ಲಿದೆ.

ಕಳೆದ ಹಲವಾರು ವರ್ಷಗಳಿಂದ ಭಾರತದ ಕೃಷಿ ಕ್ಷೇತ್ರ ಬಿಕ್ಕಟ್ಟನ್ನು ಎದುರಿಸುತ್ತಿದೆ. ಅದಕ್ಕೆ ಕಾರಣಗಳು ಹತ್ತು ಹಲವಾರು. ಸಕಾಲದಲ್ಲಿ ಮಳೆಯಾಗದೆ ಕೃಷಿಯಾಧಾರಿತ ಹಳ್ಳಿಗಳಲ್ಲಿ ನಿರುದ್ಯೋಗ ಮತ್ತು ಕಿತ್ತು ತಿನ್ನುವ ಬಡತನ ತಾಂಡವವಾಡುತ್ತಿದೆ. ಅನ್ಯ ದಾರಿಯಿಲ್ಲದೆ ಸಾಲದ ಹೊರೆ ಏರಿಸಿಕೊಂಡ ರೈತರು ಆತ್ಮಹತ್ಯೆಗೆ ಶರಣಾಗುತ್ತಿದ್ದಾರೆ ಮತ್ತು ನಗರಗಳಿಗೆ ಉದ್ಯೋಗ ಅರಸಿ ವಲಸೆ ಹೋಗುತ್ತಿದ್ದಾರೆ. ನಗರ ಗಳಿಗೆ ಗುಳೆ ಹೊರಡುವ ಹಳ್ಳಿಗರನ್ನು ತಡೆಯಲು ಮತ್ತು ಸ್ಥಳೀಯವಾಗಿ ಉದ್ಯೋಗಾವಕಾಶ ನೀಡಲು ೨೦೦೫ರಲ್ಲಿ ಮನಮೋಹನ್ ಸಿಂಗ್ ಪ್ರಧಾನಿಯಾಗಿದ್ದಾಗ ಜಾರಿಯಾದ್ದು "ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಕಾಯಿದೆ". ನಂತರ ೨೦೦೯ರ ಅಕ್ಟೋಬರ್ ೨ರಂದು "ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಕಾಯಿದೆ"ಯೆಂದು ಇದರ ಹೆಸರನ್ನು ಬದಲಾಯಿಸಲಾಯಿತು. ಇದನ್ನು ದೇಶದಲ್ಲಿ ಮೂರು ಹಂತಗಳಲ್ಲಿ ಜಾರಿ ಮಾಡಲಾಯಿತು. ೨೦೦೬ರಲ್ಲಿ ೨೦೦ ಜಿಲ್ಲೆಗಳು, ೨೦೦೭ರಲ್ಲಿ ೧೩೦ ಜಿಲ್ಲೆಗಳು ಮತ್ತು ೨೦೦೮ರಲ್ಲಿ ೨೯೫ ಜಿಲ್ಲೆಗಳಲ್ಲಿ ಈ ಯೋಜನೆ ಜಾರಿಯಾಯಿತು. ಸಮಾನ ಕೆಲಸಕ್ಕೆ ಸಮಾನ ಕೂಲಿ, ವರ್ಷಕ್ಕೆ ೧೦೦ ದಿನಗಳ ಕೆಲಸ, ಇತ್ಯಾದಿ ಕ್ರಾಂತಿಕಾರಿ ಅಂಶಗಳು ಈ ಕಾಯಿದೆಯ ಭಾಗವಾಗಿದೆ. ಇದನ್ನು ಸಮರ್ಪಕವಾಗಿ ಜಾರಿಗೊಳಿಸಿದರೆ ಜನರ ಸಂಕಷ್ಟವನ್ನು ಸರಿಪಡಿಸಲು ಸಾಧ್ಯವಿದೆ. ಬರ ಪರಿಸ್ಥಿತಿಯನ್ನು ಸಮರ್ಥವಾಗಿ ನಿಭಾಯಿಸಲು ಮತ್ತು ಭವಿಷ್ಯದಲ್ಲಿ ಇಂತಹ ಸಮಸ್ಯೆ ಎದುರಾಗದಂತೆ ಮುನ್ನೆಚ್ಚರಿಕೆ ವಹಿಸಲು ಸರ್ಕಾರದ ಜೊತೆ ಸಮುದಾಯ ಮತ್ತು ಸಂಘಟನೆಗಳು ಕೈಜೋಡಿಸಿದರೆ ಅಭಿವೃದ್ಧಿಯ ಕೆಲಸಗಳ ಅನುಷ್ಠಾನ ಸುಲಭ, ಹಾಗೆಯೇ ಜನರಿಗೂ ಅನುಕೂಲವಾಗುತ್ತದೆ.

**ಡಾ॥ ಎನ್. ಗಾಯತ್ರಿ**

ಈ ಕಾಯಿದೆ ಜನರ ಬದುಕಿನ ಹಕ್ಕನ್ನು ಕುರಿತದ್ದು. ಅವರ ಹಸಿವನ್ನು ಕುರಿತದ್ದು. ಉದ್ಯೋಗವನ್ನು ತಮ್ಮ ಹಕ್ಕನ್ನಾಗಿ ಕೇಳುವಂಥದ್ದು. ಇದು ದಿಢೀರನೆ ಆಳುವವರ ಮರ್ಜಿಯಿಂದ ಮೇಲಿನಿಂದ ಉದುರಿದ್ದಲ್ಲ. ಇದಕ್ಕಾಗಿ ಹಲವಾರು ಸಾಮೂಹಿಕ ಜನಪರ ಸಂಘಟನೆಗಳು ಅವಿರತವಾಗಿ ಹೋರಾಟ ನಡೆಸಿವೆ. 'ಉದ್ಯೋಗದ ಹಕ್ಕು ಮೂಲಭೂತ ಹಕ್ಕಾಗಲಿ', 'ಉದ್ಯೋಗ ಕೊಡಿ ಇಲ್ಲವೇ ನಿರುದ್ಯೋಗ ಭತ್ಯೆ ಕೊಡಿ', 'ಕನಿಷ್ಠ ಕೂಲಿ ಜಾರಿಯಾಗಲಿ'– ಮುಂತಾದ ಘೋಷಣೆಗಳೊಂದಿಗೆ ದೇಶದುದ್ದಗಲಕ್ಕೂ ಹಲವಾರು ಹೋರಾಟಗಳು ನಡೆದಿವೆ. ಹೀಗಾಗಿ ಈ ಚಳುವಳಿಯ ಮುಖ್ಯ ಉಸಿರೆಂದರೆ 'ಸಾರ್ವಜನಿಕ ವ್ಯವಸ್ಥೆ ನಮ್ಮದು–ನಮಗಾಗಿ' ಎನ್ನುವ ತತ್ವವೇ ಆಗಿದೆ. ಈ ಎಲ್ಲ ಹೋರಾಟಗಳ ಫಲ ಈ ಕಾಯಿದೆ. ಅಧಿಕಾರಾರೂಢ ಸರ್ಕಾರಗಳಿಗೂ ಜನಪ್ರಿಯವಾದ ಹಾಗೂ

ಜನಪರವಾದ ಕೆಲವು ಯೋಜನೆಗಳನ್ನು ರೂಪಿಸುವ ಇಚ್ಛೆ ಮತ್ತು ಜವಾಬ್ದಾರಿಯಿರುತ್ತದಲ್ಲಾ, ಅದರ ಫಲವಾಗಿ ಅರ್ಥಶಾಸ್ತ್ರಜ್ಞ ವಿದ್ವಾಂಸರಾಗಿದ್ದ ಅಂದಿನ ದೇಶದ ಪ್ರಧಾನಿಯವರ ಸರ್ಕಾರ ಈ ಯೋಜನೆಯನ್ನು ರೂಪಿಸಿತು. ಇಂತಹುದೊಂದು ಕಾಯಿದೆಯ ಜಾರಿಗಾಗಿ ಹೋರಾಟಮಾಡಿದ ಸಂಘಟನೆಗಳೇ ಇದರ ಯಶಸ್ವೀ ಅನುಷ್ಠಾನಕ್ಕಾಗಿ ಶ್ರಮಿಸಿದರೆ, ಅದರ ಫಲ ಹೇಗಿರಬಹುದು ಎಂಬುದಕ್ಕೆ ಉದಾಹರಣೆಯನ್ನು ಈ ಎರಡೂ ಪುಸ್ತಕಗಳಲ್ಲಿ ಕಾಣಬಹುದಾಗಿದೆ.

ಈ ಕಾಯಿದೆ ಜಾರಿಗೆ ಬಂದು ೧೧ ವರ್ಷಗಳಾಗಿವೆ. ಆದರೆ ಇದು ಜಾರಿಯಾಗಿರುವ ಪ್ರಮಾಣ ಶೇ. ೪೫ರಷ್ಟು ಮಾತ್ರ. ಒಂದು ಕಡೆ ಇದನ್ನು ಜಾರಿಗೊಳಿಸಬೇಕಾದ ಅಧಿಕಾರಿಗಳಿಗೆ ಮತ್ತು ಜನಪ್ರತಿನಿಧಿಗಳಿಗೆ ಕಾಳಜಿ ಇಲ್ಲ. ಅದರ ಅಗತ್ಯವಿರುವ ಕೆಲಸಗಾರರಿಗೂ ಅದನ್ನು ಪಡೆದುಕೊಳ್ಳಲು ಬೇಕಾದ ತಿಳಿವಿನ ಕೊರತೆ ಇದೆ. ಈ ಎರಡರ ಕೊರತೆಯನ್ನು ತುಂಬಲು ಮತ್ತು ಚಳುವಳಿಯೋಪಾದಿಯಲ್ಲಿ ಈ ಯೋಜನೆಯ ಅನುಷ್ಠಾನದಲ್ಲಿ ತೊಡಗಿಕೊಳ್ಳಲು ಮಾಡಿರುವ ಹಲವಾರು ಪ್ರಯತ್ನಗಳಲ್ಲಿ ಕರ್ನಾಟಕದಲ್ಲಿ ಜನವಾದಿ ಮಹಿಳಾ ಸಂಘಟನೆಯು ಮಂಡ್ಯ ಮತ್ತು ಕಲಬುರ್ಗಿ ಜಿಲ್ಲೆಯಲ್ಲಿ ಕೈಗೊಂಡ ಕ್ರಿಯಾಶೀಲ ಚಟುವಟಿಕೆಯ ವಿವರಣಾತ್ಮಕ ದಾಖಲೆಯು ಹಲವಾರು ಸತ್ಯಗಳನ್ನು ಬಿಚ್ಚಿಡುತ್ತದೆ.

ಮಂಡ್ಯ ಜಿಲ್ಲೆಯಲ್ಲಿರುವ ಒಟ್ಟು ಜನಸಂಖ್ಯೆ ೧೮,೦೮,೬೮೦ ಜನರು, ಅದರಲ್ಲಿ ಪುರುಷರು ೯,೦೯,೪೪೧ ಜನರಾದರೆ, ಮಹಿಳೆಯರು ೮,೯೦,೨೩೯ ಮಂದಿ. ಇವರಲ್ಲಿ ಉದ್ಯೋಗದ ಚೀಟಿ ಪಡೆದಿರುವವರು ೨,೫೧,೨೬೬ ಮಂದಿ. ಅದರಲ್ಲಿ ಕೆಲಸ ಪಡೆದುಕೊಂಡ ಒಟ್ಟು ಕುಟುಂಬಗಳು ೭೨,೮೫೭ ಮತ್ತು ಸೃಷ್ಟಿಯಾಗಿರುವ ಒಟ್ಟು ೨೯,೫೧,೧೯೧ ಮಾನವ ದಿನಗಳಲ್ಲಿ ಒಂದು ಕುಟುಂಬಕ್ಕೆ ದೊರೆತಿರುವುದು ಸರಾಸರಿ ೪೦ ಮಾನವ ದಿನಗಳು ಮಾತ್ರ. ಇವರಿಗೆ ವಿತರಣೆಯಾಗಿರುವ ಕೂಲಿ ೬೯.೨೧ ಕೋಟಿ ಮಾತ್ರ. ಅಖಿಲ ಭಾರತ ಜನವಾದಿ ಮಹಿಳಾ ಸಂಘಟನೆಯ ಮಂಡ್ಯ ಜಿಲ್ಲಾ ಸಮಿತಿಯ ಮಳವಳ್ಳಿ ತಾಲ್ಲೂಕಿನ ನೆಲಮಾಕನ ಹಳ್ಳಿ, ತಳಗವಾದಿ, ಕಂದೇಗಾಲ, ನಿಡಘಟ್ಟ, ದುಗ್ಗನಹಳ್ಳಿ, ಹಿಟ್ಟನಹಳ್ಳಿ ಕೊಪ್ಪಲು, ಬಂಡೂರು, ಸುಜ್ಜಲೂರು, ಹಾಡ್ಲಿ, ಅಗಸನಪುರ, ಡಿ. ಹಲಸನ ಹಳ್ಳಿ, ಹುಸ್ಕೂರು, ಹೊಸಹಳ್ಳಿ, ಕಿರುಗಾವಲು, ಮಿಕ್ಕೆರೆ, ಪೂರಿಗಾಲಿ, ಸರಗೂರು, ಯತ್ತಂಬಾಡಿ, ನಾಗೇಗೌಡನ ದೊಡ್ಡಿ ಪಂಚಾಯಿತಿಗಳು, ಮದ್ದೂರು ತಾಲ್ಲೂಕಿನ ದೊಡ್ಡ ಅರಸಿನಕೆರೆ, ಕೆ. ಎಂ. ದೊಡ್ಡಿ, ಚಿಕ್ಕ ಅರಸಿನಕೆರೆ, ಕೆ. ಶೆಟ್ಟಿಹಳ್ಳಿ, ಬಿದರಹಳ್ಳಿ, ಮಾದರಹಳ್ಳಿ ಪಂಚಾಯಿತಿಗಳು, ಮಂಡ್ಯ ತಾಲ್ಲೂಕಿನ ಬೇವಿನಹಳ್ಳಿ ಮತ್ತು ಕೊತ್ತತ್ತಿ, ನಾಗಮಂಗಲ ತಾಲ್ಲೂಕಿನ ಹರದಹಳ್ಳಿ – ಹೀಗೆ ೨೮ ಗ್ರಾಮ ಪಂಚಾಯಿತಿಗಳ ವ್ಯಾಪ್ತಿಯ ೫೪ ಗ್ರಾಮಗಳಲ್ಲಿ ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಕಾಯಿದೆಯ ಬಗ್ಗೆ ಜನರಲ್ಲಿ ಅರಿವು ಮೂಡಿಸಿ ಈ ಯೋಜನೆಯಲ್ಲಿ ತೊಡಗಿಕೊಳ್ಳುವಂತೆ ಮಾಡಿದೆ. ಹಾಗೆಯೇ ಮೂರು ಸ್ತರದ ಪಂಚಾಯಿತಿ



ಆಡಳಿತದೊಂದಿಗೆ ಸಂಪರ್ಕವಿರಿಸಿಕೊಂಡು ಯೋಜನೆಯ ಅನುಷ್ಠಾನಕ್ಕೆ ನೆರವಾಗಿದೆ. ಈ ಹಳ್ಳಿಗಳಲ್ಲಿ ಉದ್ಯೋಗ ಚೀಟಿಗಳನ್ನು ದೊರಕಿಸಿಕೊಡುವುದರ ಜೊತೆಗೆ ನಂತರ ಅವುಗಳ ನವೀಕರಣದ ಕ್ರಿಯೆಯಲ್ಲೂ ಸಂಘಟನೆ ಕೈಜೋಡಿಸಿದೆ.

೨೦೦೮ರಿಂದ ತೀವ್ರವಾಗಿ ನಡೆಸಿದ ಉದ್ಯೋಗದ ಹಕ್ಕಿನ ಹೋರಾಟದಲ್ಲಿ ಚಳುವಳಿಗಾರರು ಎದುರಿಸಿದ ರೋಮಾಂಚಕಾರಿ ಅನುಭವಗಳ ದಾಖಲೆ ಇಲ್ಲಿದೆ. "ಕೆಲಸ ಕೊಡಲು ನಾವು ರೆಡಿ ಇದ್ದೇವೆ, ಆದರೆ ಮೊದಲು ಜಾಬ್‌ಕಾರ್ಡ್ ಮಾಡಿಸಬೇಕು, ಬ್ಯಾಂಕ್ ಖಾತೆ ತೆರೆಯಬೇಕು, ನಂತರ ಫಾರಂ ನಂಬರ್ ೬ನ್ನು ಕೊಡಬೇಕು. ಇಷ್ಟೆಲ್ಲ ಕೆಲಸಗಳಿವೆ, ಮಾಡ್ತೀರಾ?" ಎಂದು ಸವಾಲೆಸೆದ ಪಂಚಾಯಿತಿಯವರಿಗೆ ಉತ್ತರವಾಗಿ ಸಂಘಟನೆಯ ಸದಸ್ಯರು ಕೆಲಸಗಾರರಿಂದ ಆ ಎಲ್ಲ ದಾಖಲೆಗಳನ್ನು ದೊರಕಿಸಿಕೊಡಲು ಮುಂದಾದರು. ಕೆಲಸಗಾರರ ಈ ಉತ್ಸಾಹ ಕಂಡು ಈ ಜನರ ಮೇಲೆ ತಮ್ಮ ನಿಯಂತ್ರಣ ತಪ್ಪಿಹೋಗಬಹುದೆಂದು ಊರಿನ ಜಮೀನ್ದಾರರು ಮತ್ತು ಕೆಲವು ಪಂಚಾಯಿತಿ ಸದಸ್ಯರು ಜನರ

ಕಾಲೆಳೆಯುವ ಪ್ರಯತ್ನ ಮಾಡಿದ್ದುಂಟು : 'ಹೆಂಗುಸ್ರು ಹಾರೆ, ಗುದ್ದಲಿ ಹಿಡಿದು ಗೇಮೆ ಗೇಯ್ತಾರಾ? ಇವ್ರು ಹಿಟ್ಟು ಮಾಡ್ಕೊಂಡು ಮಡ್ಕೆ ಕೇರ್ಯೋವ್ರು. ಸುಮ್ನೆ ಎಮ್ಮೆ, ದನ ಮೇಯ್ಸಿಕೊಂಡು ಇರದೆ, ಹಾರೆ ಗುದ್ಲಿ ಹಿಡ್ಕಂಡ್ ಬಂದವ್ರೆ. ದೇಸ ಉದ್ದಾರಾದ್ದೇ?' ಎಂದು ಹಂಗಿಸಿದ್ದುಂಟು. ಆದರೆ ಇದ್ಯಾವುದನ್ನೂ ಲೆಕ್ಕಿಸದೆ ಅಂಚೆದೊಡ್ಡಿ ನಾಲೆಯ ಹೂಳೆತ್ತುವ ಕಾರ್ಯವನ್ನು ಅಲ್ಲಿನ ಗ್ರಾಮದ ಮಹಿಳೆಯರು ಒಂದು ವಾರದಲ್ಲಿ ಮುಗಿಸಿಬಿಟ್ಟರು. ವ್ಯಂಗ್ಯವಾಡಿದ್ದ ರೈತರೂ ಮಹಿಳೆಯರ ಈ ಕೆಲಸ ಮೆಚ್ಚಲೇಬೇಕಾಯಿತು.

ಜನರಿಗೆ ಹೇಗೆ ಉದ್ಯೋಗ ಖಾತ್ರಿಯ ಬಗ್ಗೆ ಸರಿಯಾದ ಅರಿವಿರಲಿಲ್ಲವೋ ಹಾಗೆಯೇ ಅತ್ತಕಡೆ ಗ್ರಾಮ ಪಂಚಾಯಿತಿಯಲ್ಲೂ ಉದ್ಯೋಗ ಖಾತ್ರಿಯ ಬಗ್ಗೆ ಸರಿಯಾದ ಅರಿವು ಇರಲಿಲ್ಲ. ಕ್ರಿಯಾ ಯೋಜನೆಯಲ್ಲಿ ಉದ್ಯೋಗ ಖಾತ್ರಿ ಕಾಮಗಾರಿಗಳನ್ನು ಸೇರಿಸುವುದೂ ಗೊತ್ತಿರಲಿಲ್ಲ. ಆಗ ಜನವಾದಿ ಸಂಘಟನೆಯವರೇ ಗ್ರಾಮ ಪಂಚಾಯಿತಿಯವರಿಗೂ ತಿಳುವಳಿಕೆ ನೀಡುವ ಕೆಲಸ ಮಾಡಿದರು.

ಈ ಪುಸ್ತಕಗಳು ಪ್ರಕಟಿಸುವ ಅತ್ಯಂತ ಮುಖ್ಯ ಅಂಶವೆಂದರೆ, ಉದ್ಯೋಗ ಖಾತ್ರಿ ಕಾಯಿದೆಯ ಅನುಷ್ಠಾನಕ್ಕಾಗಿ ನಡೆಯುತ್ತಿರುವ ಹೋರಾಟಗಳು ಅಲ್ಲಲ್ಲಿ ಸಾಮಾಜಿಕ ಬದಲಾವಣೆಯ ಸಣ್ಣಸಣ್ಣ ಕಂಪನಗಳನ್ನು ಹುಟ್ಟುಹಾಕಿವೆ. ಅಸ್ಪೃಶ್ಯತೆಯ ನಿವಾರಣೆ, ಎಲ್ಲ ಜಾತಿಯ ಜನರು ಒಟ್ಟಾಗಿರುವುದು, ಕೆಲಸಗಾರರು ಪಾಳೇಗಾರಿ ಶಕ್ತಿಗಳಿಗೆ ಸೆಡ್ಡುಹೊಡೆಯುವುದು ಮುಂತಾದ ಬದಲಾವಣೆಗಳನ್ನು ಕಾಣಬಹುದಾಗಿದೆ. ಮದ್ಯಪಾನ ವಿರೋಧಿ ಚಳುವಳಿಗಳು ಗಟ್ಟಿಗೊಳ್ಳುತ್ತಿರುವುದರ ಜೊತೆಗೆ, ಮಹಿಳಾ ಚಳುವಳಿಯ ಎಳೆಗಳು ಒಂದಾಗುತ್ತಿವೆ. ಜೊತೆಗೆ ಗ್ರಾಮ ಪಂಚಾಯಿತಿಯನ್ನು ಪ್ರವೇಶಿಸಿ ತಮ್ಮ ರಾಜಕೀಯ ಹಕ್ಕುಗಳನ್ನು ಪಡೆದುಕೊಳ್ಳಬೇಕು ಎಂಬುದರ ಬಗ್ಗೆಯೂ ಇಲ್ಲಿನ ಮಹಿಳೆಯರು ಜಾಗೃತರಾಗುತ್ತಿದ್ದಾರೆ. ಈ ಕೆಲವು ಮಹಿಳೆಯರು ಗ್ರಾಮ ಪಂಚಾಯಿತಿಯನ್ನು ಪ್ರವೇಶಿಸಿದ್ದಾರೆ, ಕೂಡ. ಮಹಿಳೆಯರಲ್ಲಿ ಜಾಗೃತವಾದ ಈ ರಾಜಕೀಯ ಪ್ರಜ್ಞೆ ಉದ್ಯೋಗ ಖಾತ್ರಿ ಕಾಯಿದೆಯು ನೀಡಿದ ಶಕ್ತಿಯೆಂದರೆ ತಪ್ಪಾಗದು. ಆದರೆ, ಮಹಿಳೆಯರು, ಬಡಜನರು, ದಲಿತರು ಮತ್ತು ಇತರೆ ದುರ್ಬಲ ವರ್ಗದವರಿಗೆ ಶಕ್ತಿಯಾಗಿ ಕಂಡಿರುವ ಈ ಕಾಯಿದೆಯನ್ನು ಮತ್ತೊಂದು ಸ್ಥಾಪಿತ ವರ್ಗ ಹೇಗೆ 'ವಿನಾಶಕಾರಿ'ಯಾಗಿ ಕಂಡಿದೆಯೆಂಬುದನ್ನು ಇಲ್ಲಿನ ಬರಹಗಳು ದಾಖಲಿಸಿವೆ.

ಇನ್ನು ಕಲಬುರ್ಗಿಯಲ್ಲಿ ೭ ತಾಲ್ಲೂಕುಗಳು, ೨೨೦ ಗ್ರಾಮ ಪಂಚಾಯಿತಿಗಳಿವೆ. ಅಬ್ದುಲ್ ನಜೀರ್ ಸಾಬ್ ಗ್ರಾಮೀಣ ಅಭಿವೃದ್ಧಿ ಸಂಸ್ಥೆಯ ವರದಿಯ ಪ್ರಕಾರ ಈ ಜಿಲ್ಲೆಯ ೯೬% ಗ್ರಾಮಪಂಚಾಯಿತಿಗಳು ಮಾನವ ಅಭಿವೃದ್ಧಿ ಸೂಚ್ಯಂಕಕ್ಕಿಂತ ಕೆಳಗಿವೆ. ಇಲ್ಲಿನ ಅಲಂದ್‌ನಲ್ಲಿ ೩೯ ಗ್ರಾಮ ಪಂಚಾಯಿತಿಗಳಿವೆ. ಇಲ್ಲಿ ೨,೪೬,೦೦೦ ಮಾನವ ದಿನಗಳನ್ನು ಸೃಷ್ಟಿಸಿಯಾಗಿತ್ತು. ಹಾಗೆಯೇ ಅಫ್‌ಜಲ್‌ಪುರ್ ತಾಲ್ಲೂಕಿನಲ್ಲಿಯೂ ೪೦,೦೦೦ ಮಾನವ ದಿನಗಳನ್ನು ಸೃಷ್ಟಿಸಲಾಗಿತ್ತು. ಅಫ್‌ಜಲ್‌ಪುರ್‌ದಲ್ಲಿನ ಕೆರೆಯ ಪುನಶ್ಚೇತನದ ಕತೆಯು ಜನವಾದಿ ಮಹಿಳಾ ಸಂಘಟನೆಯ ಅಪರೂಪದ ಕತೆಯಾಗಿದೆ. ಸಂಪೂರ್ಣವಾಗಿ ಪುನಃ ಕಟ್ಟಲಾದ ಈ ಕ್ರಿಯೆ ಸ್ತ್ರೀ ಶಕ್ತಿಯ ಅತ್ಯುತ್ತಮ ಪ್ರದರ್ಶನವಾಗಿದೆ. ಜನವಾದಿ ಮಹಿಳಾ ಸಂಘಟನೆಯ ಸದಸ್ಯರು ಆಡಳಿತಾಧಿಕಾರಿಗಳು, ವಿಶ್ವವಿದ್ಯಾಲಯದ ಬುದ್ಧಿಜೀವಿಗಳು ಮತ್ತು ಸಮಾಜದ ಎಲ್ಲ ಪ್ರಗತಿಪರರನ್ನೂ ತೊಡಗಿಸಿಕೊಂಡು ಮೂಡಿಸಿರುವ ಜನಜಾಗೃತಿ ಅಪರೂಪದ್ದು.

ಭಾರತದ ಬೆನ್ನೆಲುಬು ರೈತ, ಅನ್ನದಾತ – ಎಂದು ಬಿಂಬಿಸುವ ಸರ್ಕಾರಗಳು ಅವರ ಬದುಕನ್ನು ಉತ್ತಮಪಡಿಸಲು ಪ್ರಾಮಾಣಿಕ ಆಸಕ್ತಿವಹಿಸುತ್ತಿಲ್ಲ. ಇಂತಹ ಕೃಷಿ ಬಿಕ್ಕಟ್ಟಿನ ಸಂದರ್ಭದಲ್ಲಿ ನರೇಗಾ ಯೋಜನೆಯ ಪ್ರಾಮುಖ್ಯತೆಯನ್ನು ಕಡೆಗಣಿಸುವುದಕ್ಕಾಗುವುದಿಲ್ಲ ಎಂಬ ಅಂಶವನ್ನು ಇಲ್ಲಿನ ಕಾರ್ಯ ಮನದಟ್ಟು ಮಾಡಿಕೊಡುತ್ತಿದೆ. ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆಯಿಂದ ಹೂಡಿಕೆಯಾಗುವ ಎಲ್ಲ ಶ್ರಮವೂ ಸಂಪತ್ತನ್ನು ಸೃಷ್ಟಿಸುತ್ತಿದೆ; ಆರ್ಥಿಕ ಉತ್ಪಾದಕತೆಯನ್ನು ಹೆಚ್ಚಿಸುತ್ತಿದೆ. ಹಾಗೆಯೇ ಗ್ರಾಮೀಣ ಮೂಲ ಸಂರಚನೆಯನ್ನು ಬಲಗೊಳಿಸುತ್ತಿದೆ ಮತ್ತು ಪ್ರಾಕೃತಿಕ ಭೂ ಸಂಪತ್ತನ್ನು ಪುನರ್‌ವೃದ್ಧಿಸುತ್ತಿದೆ. ಈ ಯೋಜನೆಯನ್ನು ಭ್ರಷ್ಟಾಚಾರದಿಂದ ವಿಮುಕ್ತಗೊಳಿಸುವುದು ಈ ಮಹಿಳಾ ಸಂಘಟನೆಗೇ ಒಂದು ದೊಡ್ಡ ಸವಾಲೇ ಆಗಿದೆ. ಆದರೂ ಜನಸಂಘಟನೆಯ



ದೃಷ್ಟಿಯಿಂದ ಇದಕ್ಕೆ ಹೆಚ್ಚಿನ ಮಹತ್ವ ಕೊಡಬೇಕಾದ್ದು ಅವಶ್ಯಕ. ಜನರ ಹೃದಯಕ್ಕೆ ನೇರವಾಗಿ ಈ ಯೋಜನೆ ತಟ್ಟುವುದರಿಂದ ಈ ಕೆಲಸದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಜನರು ಭಾಗವಹಿಸುತ್ತಾರೆ. ಚಿಕ್ಕಪುಟ್ಟ ಕೆಲಸ ಹುಡುಕಿಕೊಂಡು ಪಟ್ಟಣಕ್ಕೆ ವಲಸೆಹೋಗುವ ಹಳ್ಳಿಗರ ಸಮಸ್ಯೆಗಳನ್ನು ಈ ಕಾಯಿದೆ ಯಶಸ್ವಿಯಾಗಿ ನಿಭಾಯಿಸುತ್ತದೆ. ಅದರಿಂದಾಗಿ ಮಕ್ಕಳು ಶಾಲೆ ಬಿಡುವುದನ್ನು ತಪ್ಪಿಸಬಹುದು. ಕುಟುಂಬಗಳು ಒಟ್ಟಾಗಿ ಇರುವಂತೆಯೂ ನೋಡಿಕೊಳ್ಳಬಹುದು.

ಇಷ್ಟೆಲ್ಲ ಪರಿಣಾಮಕಾರಿ ಮಹತ್ವವುಳ್ಳ ಈ ಯೋಜನೆಯು ಸರ್ಕಾರದ ನಿರ್ಲಕ್ಷ್ಯದಿಂದ ಸೊರಗಿದೆ. ಪ್ರಸಕ್ತ ಹಣಕಾಸು ವರ್ಷದಲ್ಲಿ ರೂ. ೧೨,೦೦೦ ಕೋಟಿಗಿಂತ ಹೆಚ್ಚು ಬಾಕಿ ಉಳಿಸಿಕೊಂಡಿದೆ. ಕಳೆದ ವರ್ಷ ಶೇಕಡ ೭೩% ಮಂದಿಗೆ ಹಣ ಬಡವಾಡೆ ಮಾಡುವುದು ವಿಳಂಬವಾಗಿದೆ.

"ಇದು ಅನುಭವಗಳ ದಾಖಲಾತಿಯೇ ಹೊರತು ಅಧ್ಯಯನದ ವರದಿಯಲ್ಲ. ಹಾಗೂ ಇದು ಬರೀ ಯಶಸ್ವಿ ಕಥೆಗಳ ದಾಖಲಾತಿಯೂ ಅಲ್ಲ. ಇದು ಪ್ರಕ್ರಿಯೆಗಳ ದಾಖಲಾತಿ. ಇಲ್ಲಿ ಸೋಲುಗಳನ್ನೂ ದಾಖಲಾಗಿಸಿದೆ" ಎಂದು ವಿನಯಪೂರ್ವಕವಾಗಿ ಹೇಳಿಕೊಳ್ಳುವ ಈ ಪುಸ್ತಕಗಳು ತೆರೆದಿಡುವ ವಿಷಯಗಳು ಸಂಶೋಧನಾ ವಿದ್ಯಾರ್ಥಿಗಳಿಗೆ ವಿಪುಲವಾದ ಮಾಹಿತಿಯನ್ನು ಒದಗಿಸುತ್ತವೆ. "ಈ ದಾಖಲಾತಿಯಲ್ಲಿ ಬಂದಿರುವ ಅನೇಕಾನೇಕ ಅಂಶಗಳನ್ನು ಪ್ರತ್ಯೇಕವಾಗಿ ತೆಗೆದುಕೊಂಡು ಸ್ವತಂತ್ರ ಅಧ್ಯಯನಗಳನ್ನು ಮಾಡಬಹುದು. ಉದಾಹರಣೆಗೆ, ಉದ್ಯೋಗ ಖಾತ್ರಿಯ ಕೂಲಿ ಮೊತ್ತ ಕೃಷಿಯ ಕೂಲಿಯ ಮೊತ್ತದ ಮೇಲೆ ಬೀರಿರುವ ಪ್ರಭಾವ; ಮಹಿಳೆಯರ ಮೇಲೆ ಸಮಾನ ಕೂಲಿಯ ತತ್ವದ ಪರಿಣಾಮ ಮತ್ತು ಪ್ರಭಾವ; ಕಾಯಿದೆಯ ಅನುಷ್ಠಾನದಲ್ಲಿ ಗ್ರಾಮ ಪಂಚಾಯಿತಿಗಳ ಪಾತ್ರ ಮತ್ತು ಗ್ರಾಮ ಪಂಚಾಯಿತಿ ಸದಸ್ಯರ ಪಾಲ್ಗೊಳ್ಳುವಿಕೆ; ಕಾಯಿದೆಯ ಕಾಮಗಾರಿಗಳಲ್ಲಿ ಪುರುಷರ ಭಾಗವಹಿಸುವಿಕೆ ಮತ್ತು ಅವರ ಅಭಿಪ್ರಾಯ; ಮಹಿಳೆಯರ ಬಲವರ್ಧನೆ; ದಲಿತರ ಅಭಿವೃದ್ಧಿ ಸಾಧ್ಯತೆಗಳು; ಸಮಗ್ರ ಗ್ರಾಮೀಣಾಭಿವೃದ್ಧಿಯ ಸಾಧ್ಯತೆಗಳು; ವಿಭಿನ್ನ ಯೋಜನೆಗಳ ಸಂಯೋಜನೆ, ಇತ್ಯಾದಿ, ಇತ್ಯಾದಿ. ಇಂತಹ ಅಧ್ಯಯನಗಳನ್ನು ಕಾಯಿದೆಯ ಅನುಷ್ಠಾನದ ಒಂದು ಭಾಗವಾಗಿ ಮಾಡಲಾಗಿದೆ." ಮಹಿಳಾ ಅಧ್ಯಯನವನ್ನು ಬೋಧಿಸುವ ಮತ್ತು ಸಂಶೋಧನೆ ನಡೆಸುವ ಶಾಲಾ ಕಾಲೇಜುಗಳು ಈ ಅಂಶದತ್ತ ಗಮನ ಹರಿಸಬೇಕಾಗಿದೆ.

"ಮಹಿಳಾ ಸಂಘಟನೆಗಳು ಮತ್ತು ಮಹಿಳಾ ಚಳುವಳಿ ಕ್ರಿಯಾಶೀಲವಾಗಿ ಕೆಲಸ ಮಾಡಿದಾಗ ಸಮಾಜ ಬದಲಾವಣೆಗೆ ದಿಕ್ಸೂಚಿಯಾಗಬಹುದು" ಎಂಬ ಅಂಶ ಈ ಎರಡೂ ಪುಸ್ತಕಗಳನ್ನು ಓದಿ ಮುಚ್ಚಿದ ನಂತರ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿಯುತ್ತದೆ.

**ಡಾ॥ ಎನ್. ಗಾಯತ್ರಿ**
ನಂ. ೨೦೧, 'ಸ್ಕೈಲೈನ್ ಗೋಲ್ಡನ್ ರೇಸ್', ಛತ್ರಂ ಬ್ಲಾಕ್
ಕೆಂಪೇಗೌಡ ನಗರ, ಗವೀಪುರಂ, ಬೆಂಗಳೂರು – ೫೬೦ ೦೧೯

ಸಂಬಂಧಗಳೆಂದರೆ ಹೀಗೆ ಅಲ್ವೇ? ಜೀವಗಳೇ ಶಾಶ್ವತವಲ್ಲ ಅಂದ ಮೇಲೆ ಸಂಬಂಧಗಳನ್ನು ಶಾಶ್ವತಗೊಳಿಸುವುದು ಸಾಧ್ಯವೇ? ಜೀವನವೆಂಬ ಪ್ರಯಾಣದಲ್ಲಿ ನಡುನಡುವೆ ಸಿಗುವ, ಬೀಳ್ಕೊಡುವ ಈ ಪರಿಯ ನೆನಪುಗಳೇ ಮನದಾಳದಲ್ಲಿ ಗಟ್ಟಿಗೊಳ್ಳುತ್ತವೆ. ಈ ಮನೆ ಮಗಳ ಸಂಬಂಧವೂ ಇದಕ್ಕಿಂತ ಭಿನ್ನವಾಗಿಲ್ಲ. ಹೇಳಬೇಕಾಗಿರುವುದಿಷ್ಟೆ. ಬೆಕ್ಕಿನ ನೆನಪಾದಾಗಲೆಲ್ಲಾ ನನ್ನ ಮಗ ಹೇಳುವ "ಅಮ್ಮಾ, ಬೆಕ್ಕು ಎಲ್ಲೇ ಇರಲಿ, ಅದು ಚೆನ್ನಾಗಿರಲಿ" ಎಂಬ ಮಾತಿಗೆ ಧ್ವನಿಗೂಡಿಸುವುದಷ್ಟೇ ನನ್ನ ಪಾಲಿಗೆ ಉಳಿದಿರುವ ದಾರಿ.

# ಮನೆ ಮಗಳು

ಡಾ|| ಸುಲತಾ ವಿದ್ಯಾಧರ್

ಮನುಷ್ಯ ಸಂಘಜೀವಿ ಅಲ್ಲವೇ? ತನ್ನ ಸುತ್ತಮುತ್ತಲ ಜೀವಿಗಳೊಂದಿಗೆ ಬೆರೆತು ಬಾಳುವುದರಲ್ಲಿ ಬದುಕಿನ ಸಾರ್ಥಕ್ಯವಿದೆ, ಸಂತೋಷವಿದೆ, ಎನ್ನುತ್ತಾರೆ ಅನುಭವಸ್ಥರು. ಸಹಬಾಳ್ವೆಗೆ ಮನುಷ್ಯನೇ ಬೇಕೆಂದಿಲ್ಲ. ಯಾವ ಪ್ರಾಣಿ–ಪಕ್ಷಿಗಳೂ ಕೂಡ ನಮ್ಮ ವಲಯದೊಳಗೆ ಬಂದುಬಿಡಬಹುದು. 'ಅಲ್ಪರ ಸಂಗ ಅಭಿಮಾನ ಭಂಗ' ಎನ್ನುವ ಮಾತಿನಂತೆ ಅಲ್ಪರಾದ ಮನುಷ್ಯರೊಂದಿಗಿನ ಒಡನಾಟಕ್ಕಿಂತ ಎಷ್ಟೋ ಬಾರಿ ಮುಗ್ಧ ಪ್ರಾಣಿಗಳೊಂದಿಗೆ ಬದುಕುವುದೇ ಚಂದ ಎನಿಸುವುದಿಲ್ಲವೇ? ಒಂದು ಕಾಲದ ಅವಿಭಕ್ತ ಕುಟುಂಬವೆಲ್ಲಾ ಮಾಯವಾಗಿ ನಾವೆಲ್ಲಾ ಈಗ ಬೆಕ್ಕಿನ ಬಿಡಾರ ಕಟ್ಟಿಕೊಂಡವರು. ಇಂತಹ ಬಿಡಾರದಲ್ಲಿ ನಿಜವಾದ ಬೆಕ್ಕೊಂದು ಮನೆ ಮಗಳಾಗಿ ಸೇರಿಕೊಂಡು ಮನ ಬೆಳಗಿದ ಕತೆಯನ್ನು ನಿಮ್ಮ ಮುಂದೆ ಹೇಳಲೇಬೇಕೆನಿಸುತ್ತದೆ.

ಸುಮಾರು ನಾಲ್ಕು ವರ್ಷಗಳ ಕಾಲ ನಮ್ಮ ಮನೆಯ ಸದಸ್ಯತ್ವ ಪಡೆದು ಸಂಸಾರ ಹಿಗ್ಗಿಸಿಕೊಂಡ ಮುದ್ದಾದ ಹೆಣ್ಣುಬೆಕ್ಕೊಂದು ನೀಡಿದ ಅನುಭವ ಪ್ರಪಂಚವೇ ವಿಶಿಷ್ಟವಾದುದು. ಒಂದು ಸಂಜೆ ದಿಢೀರನೆ ಮನೆಯ ಹಿಂಬದಿಯಿಂದ ಅಡುಗೆಮನೆಗೆ ನುಗ್ಗಿದ ಹೆಣ್ಣುಬೆಕ್ಕಿನ ಮರಿಯೊಂದು ನಮಗೆ ಒಮ್ಮೆಲೇ ಆಶ್ಚರ್ಯ ಹಾಗೂ ಅನುಕಂಪವನ್ನು ಹುಟ್ಟಿಸಿತ್ತು. ಕಪ್ಪು–ಬಿಳಿ ಮಿಶ್ರಿತವಾಗಿದ್ದ ಈ ಮರಿಯನ್ನು ನೋಡಿದೊಡನೆ ಹೆಣ್ಣೋ, ಗಂಡೋ ಎನ್ನುವುದು ತಕ್ಷಣಕ್ಕೆ ತಿಳಿಯದಿದ್ದರೂ ಸಮಾಜದಲ್ಲಿ ಹುಟ್ಟಿದೊಡನೆ ಬಹಳ ಬೇಗ ತಿರಸ್ಕಾರಕ್ಕೆ ಒಳಗಾಗುವುದು ಹೆಣ್ಣು ಜೀವವಲ್ಲವೇ? ಹಾಗಾಗಿ ಹೆಣ್ಣು ಬೆಕ್ಕೇ ಇರಬೇಕು ಎನ್ನುವ ತೀರ್ಮಾನಕ್ಕೆ ಬರಲು ನಮಗೆ ಹೆಚ್ಚು ಸಮಯ ಬೇಕಾಗಲಿಲ್ಲ. ಹೊಟ್ಟೆಗಿಲ್ಲದೆ ಸೊರಗಿಹೋಗಿದ್ದರೂ ಮಿಂಚುತ್ತಿದ್ದ ಅದರ ಕಣ್ಣೋಟಕ್ಕೆ ಮನಸೋತು ಮಾನವ ಸಹಜ ಕರುಣೆಯೊಂದು ಅದಕ್ಕೆ ಆಶ್ರಯ ನೀಡುವಂತೆ ಮಾಡಿತು. ನನ್ನ ಮಗನಿಗಂತೂ ಬೆಕ್ಕಿನ ಮರಿಯ ಆಗಮನ ಮನೆಗೊಂದು ಹೊಸ ತಂಗಿ ಬಂದಷ್ಟೇ ಸಂತೋಷವಾಯಿತು. ಕೆಲವೇ ದಿನಗಳಲ್ಲಿ ಮನೆಯವರ ಬಗೆಗೆ ವಿಶ್ವಾಸ ಹುಟ್ಟಿ ಎಲ್ಲರೊಳಗೊಂದಾಗಿ ಬದುಕ ತೊಡಗಿತು. ಛೇ! ಯಾರೋ ಪಾಪಿಗಳು ಹೆಣ್ಣುಮರಿಯೆಂದು ಬೀದಿಗೆಸೆದಿದ್ದಾರೆ. ಅಯ್ಯೋ, ಹೆಣ್ಣು ಜನ್ಮದ ಪಾಡೇ? ಮನುಷ್ಯರ ಹಾಗೆ ನಾಯಿ–ಬೆಕ್ಕುಗಳ ಬಗೆಗೂ ಈ ಲಿಂಗ ತಾರತಮ್ಯವೇ? ಹುಟ್ಟಿಗೆ ಹೆಣ್ಣೇ ಕಾರಣ ಎಂಬುದನ್ನು ಈ ಸಮಾಜ ಮರೆತು ಬದುಕುತ್ತಿದೆಯಲ್ಲ! ಎಂದು ಗೊಣಗಿದೆ. ಈ ಮರಿಯು ಕಣ್ಣೆದುರು ಬಂದಾಗೆಲ್ಲಾ ನನ್ನೊಳಗಿನ ಸ್ತ್ರೀತನ ಜಾಗೃತಗೊಳ್ಳುತ್ತಿತ್ತು. ಇದರ ಸಂಪೂರ್ಣ ಹೊಣೆ ಹೊತ್ತ ನನ್ನ ಮಗ, ಶಾಲೆಗೆ ಹೋಗುವ ಮೊದಲು, ಶಾಲೆಯಿಂದ ಬಂದ ಮೇಲೆ ಬೆಕ್ಕಿನ ಯೋಗಕ್ಷೇಮ ನೋಡಿಕೊಳ್ಳುವುದರಲ್ಲೇ ಹೆಚ್ಚಿನ ಸಮಯ ಕಳೆಯತೊಡಗಿದ. ಪದೇ ಪದೇ 'ಅಮ್ಮಾ, ಬೆಕ್ಕಿಗೆ ಊಟ ಹಾಕಿದ್ರಾ? ತಿಂಡಿ ನೀಡಿದ್ರಾ?' – ಇವೇ ಪ್ರಶ್ನೆಗಳು. ಅವನಿಗೆ ನೀಡುತ್ತಿದ್ದ ಊಟತಿಂಡಿಗಳಲ್ಲಿ ಬೆಕ್ಕಿಗೂ ಪಾಲು ನೀಡಲು ತೊಡಗಿದ. ಎಷ್ಟೋ ಸಲ ಅವನ ಒಪ್ಪಿಗೆ ಇಲ್ಲದೆ ತಟ್ಟೆಯಿಂದ ಕಬಾಬನ್ನೋ, ಫಿಶ್ ಫ್ರೈಯನ್ನೋ ಎಗರಿಸುವಷ್ಟು ಸಲುಗೆ ಬೆಳೆಸಿಕೊಂಡಿತು. ದಿನದಿಂದ ದಿನಕ್ಕೆ ಹುಣ್ಣಿಮೆಯ ಚಂದಿರನ ಹಾಗೆ ಮೈ ತುಂಬಿಕೊಂಡು ಬೆಳೆದ ಈ ಮನೆ ಮಗಳು ತಾಯಿಯಾಗುವ ಸಂಭ್ರಮಕ್ಕೆ ಅಡಿಯಿಟ್ಟಳು. ಒಂದು ದಿನ ಮಗ, ಅಮ್ಮಾ ಬೆಕ್ಕು ಏನೋ ತಿಂದಿದೆ. ಅದರ ಹೊಟ್ಟೆ ಎಷ್ಟು ದೊಡ್ಡದಾಗಿದೆ! ಎಂದು ಕುತೂಹಲದ ಕಣ್ಣುಗಳಿಂದ ಹೇಳಿದ. "ಅದು ತಿಂದು ಹಾಗಾಗಿದ್ದಲ್ಲ ಪುಟ್ಟಾ, ಅದರ ಹೊಟ್ಟೆಯಲ್ಲಿ ಪಾಪು ಇದೆ" ಎಂದೆ. ತಕ್ಷಣ ಆತ, "ಏನಮ್ಮಾ ಪಾಪು ಇದೆಯಾ? ಈ ಬೆಕ್ಕಿಗೆ



ಮದ್ವೇನೇ ಆಗಿಲ್ಲ, ಪಾಪು ಹೇಗೆ ಬಂತು?" ಎಂದು ಸವಾಲೆಸೆದ. "ಅರೇ! ಮದ್ವೆ ಆಗಿಯೇ ಪಾಪು ಬರಬೇಕು ಎಂದು ಹೇಳಿದವರಾರು?" ಹುಬ್ಬೇರಿಸಿ ಕೇಳಿದೆ. ಅವನು ಅಷ್ಟಕ್ಕೇ ಸುಮ್ಮನಾಗದೆ, "ನೀವೇ ಹೇಳಿದ್ದಲ್ವಾ, ಮದ್ವೆ ಆದ್ಮೇಲೆ ಪಾಪು ಹೊಟ್ಟೆಯಲ್ಲಿ ಸೇರಿಕೊಳ್ತದೆ. ಆಮೇಲೆ ಹೊಟ್ಟೆ ಸೀಳಿ ಹೊರಗೆ ತರ್ತಾರೆ ಅಂತ" ಎಂದ. "ನಿಮಗೆ ಮದ್ವೆ ಆದ್ಮೇಲೆ ಅಲ್ವಾ ನಾನು ನಿಮ್ಮ ಹೊಟ್ಟೆಯೊಳಗೆ ಹೊಕ್ಕಿದ್ದು?" ಮರು ಪ್ರಶ್ನೆ ಎಸೆದ. "ಹೌದು ಮಾರಾಯ ಸುಮ್ಮನಿರು" ಎಂದೆ. ಅದಕ್ಕೆ ಅವನು "ಯಾಕೆ ಸುಮ್ಮನಿರಬೇಕು? ನಿಮಗೆ ಮಾತ್ರ ಮದುವೆ ಬೇಕು, ಬೆಕ್ಕಿಗೆ ಮದ್ವೆ ಬೇಡ್ವಾ?" ಪುಟ್ಟನಂತೂ ಬೆಕ್ಕಿನ ಪರ ವಹಿಸಿಯೇ ಮಾತನಾಡತೊಡಗಿದ. "ನೋಡು ಪುಟ್ಟಾ, ಅದು ಮದುವೆ ಮಾಡಿಕೊಂಡೇ ಇಲ್ಲಿಗೆ ಬಂದದ್ದು." ಸಮಾಧಾನ ಮಾಡಲು ಪ್ರಯತ್ನಿಸಿದೆ. ನನ್ನ ಯಾವ ಸಮಾಧಾನದ ಮಾತುಗಳೂ ಅವನಿಗೆ ತೃಪ್ತಿ ನೀಡಲಿಲ್ಲ. ಅದಕ್ಕೆ ಮದುವೆಯಾಗಿದ್ಯಾ? ಹಾಗಾದರೆ ಅದರ ಗಂಡ ಎಲ್ಲಿ? ಛೇ! ಮಕ್ಕಳ ಪ್ರಶ್ನೆ ಮುಗಿಯುವಂಥದೇ ಅಲ್ಲ. ಏನಾದರೂ ತಲೆಹರಟೆ ಕೇಳ್ತಾನೆ ಇರ್ತವೆ. ಸುಳ್ಳು ಹೇಳುವುದರಿಂದ ಎದುರಾಗುವ ಅಪಾಯಗಳೇನು ಎಂಬುದು ಅರ್ಥವಾಗತೊಡಗಿತು. "ನೋಡು ಪುಟ್ಟಾ, ಇದರ ಗಂಡ ಇನ್ನೊಂದು ಮನೆಗೆ ಹೋಗಿದೆ. ಇದು ಮಾತ್ರ ಇಲ್ಲಿಗೆ ಬಂದಿದೆ" ಎಂದು ಮುಂದಿನ ಪ್ರಶ್ನೆಯ ನಿರೀಕ್ಷೆಯಲ್ಲಿಯೇ ಹೇಳಿದೆ. "ಓಹೋ ಹಾಗಾ? ಗಂಡ ಒಂದು ಮನೆಯಲ್ಲಿ, ಹೆಂಡತಿ ಇನ್ನೊಂದು ಮನೆಯಲ್ಲಿ ಇರಬಹುದಾ?" ಅಯ್ಯೋ ಶಿವನೇ, ಈ ಪ್ರಶ್ನೆಗಳು ಮುಗಿಯುವುದೇ ಇಲ್ಲ. ಅಂತೂ ಈ ಬೆಕ್ಕು ನನ್ನ ಮಗನ ಮೂಲಕ ನನ್ನನ್ನು ಪರೀಕ್ಷೆ ಮಾಡಿಸುತ್ತಿದೆಯಲ್ಲಾ ಎಂದೆನಿಸಿತು. ಅಂತೂ ಪುಟ್ಟನ ಬಾಯಿ ಮುಚ್ಚಿಸಬೇಕಾದರೆ ಸಾಕೋ ಸಾಕಾಯಿತು.

ಒಂದು ದಿನ ಈ ಮನೆ ಮಗಳು ಮುದ್ದಾದ ಮೂರು ಮರಿಗಳಿಗೆ ಜನ್ಮ ನೀಡಿದಳು. ವಿಷಯ ತಿಳಿದ ಪುಟ್ಟನ ಸಂತೋಷಕ್ಕೆ ಪಾರವೇ ಇಲ್ಲ. ಮನೆ ತುಂಬಾ ಓಡಾಡಿದ ಪುಟ್ಟ ಕೈಯಲ್ಲಿ ಸೂಜಿ ನೂಲು ಹಿಡಿದುಕೊಂಡು ಬಂದು, "ಅಮ್ಮಾ, ಆ ದಿನ ನಿಮ್ಮ ಹೊಟ್ಟೆಯೊಳಗಿಂದ ನಾನು ಬಂದಾಗ ನಿಮ್ಮ ಹೊಟ್ಟೆ ಹೊಲಿದರಲ್ಲಾ, ಈಗ ಈ ಬೆಕ್ಕಿನ ಹೊಟ್ಟೆ ಹೊಲೀಬೇಕಲ್ಲಾ" ಎಂದ. ನನಗೆ ಈಗ ಪೇಚಿಗಿಟ್ಟು ಕೊಂಡಿತು. ಅವನ ಬಾಯಿ ಮುಚ್ಚಿಸುವುದಕ್ಕೆ ತಕ್ಷಣ ಒಂದು ಉಪಾಯ ಹುಡುಕಿದೆ. "ನೋಡು ಪುಟ್ಟಾ, ಮನುಷ್ಯರಿಗಾದ್ರೆ ಡಾಕ್ಟ್ರು ಹೊಟ್ಟೆ ಹೊಲೀತಾರೆ. ಪ್ರಾಣಿಗಳಲ್ಲಿ ಡಾಕ್ಟ್ರಗಳಿಲ್ಲ. ಅದಕ್ಕೆ ದೇವರೇ ನಮಗೆ ಗೊತ್ತಿಲ್ಲದ ಹಾಗೆ ಬಂದು ಹೊಲಿಗೆ ಹಾಕಿ ಹೋಗ್ತಾರೆ" ಎಂದು ರೈಲು ಬಿಟ್ಟೆ. ಆಗ ಆತ ಕುತೂಹಲದಿಂದ, "ಹೌದಾ! ಅಮ್ಮಾ, ಇನ್ನೊಂದು ಸಾರಿ ನಾನು ಬೆಕ್ಕಾಗಿ ಹುಟ್ಟುತ್ತೇನೆ. ಯಾಕೆಂದರೆ ದೇವರನ್ನು ನೋಡೋಕಾಗುತ್ತೆ ಅಲ್ವ ಅಮ್ಮಾ" ಎಂದ ತನ್ನ ಮುಗ್ಧತೆಯ ಧ್ವನಿಯಲ್ಲಿ. ಪಾಪ, ಅವನ ಮುಗ್ಧ ಭಾವನೆಗೆ ಒಳಗೊಳಗೆ ನಗು ಬರುತ್ತಿದ್ದರೂ ತೋರಿಸಿ ಕೊಳ್ಳಲಾಗದೆ ಸರಿ ಎನ್ನುವಂತೆ ತಲೆ ಅಲ್ಲಾಡಿಸಿದೆ. ಹಾಗೆ ಹೇಳಿ ಪುಟ್ಟ ಒಂದು ದೊಡ್ಡ ರಟ್ಟಿನ ಬಾಕ್ಸನ್ನು ತಂದು ಬಾಣಂತಿ ಕೋಣೆಯನ್ನು ನಿರ್ಮಿಸಿಯೇ ಬಿಟ್ಟ. ಆದರೂ ವಿಧಿ ಬರಹ ಮೀರುವವರಾರು ಹೇಳಿ? ಒಂದು ದಿನ ಯಾರೂ ಇಲ್ಲದ ಹೊತ್ತಲ್ಲಿ ಮೂರೂ ಮರಿಗಳು ನಾಯಿ ಬಾಯಿಗೆ ಆಹುತಿ ಯಾದವು. ಸಂಜೆ ಮನೆಗೆ ಬಂದ ಪುಟ್ಟ ಅತ್ತಿದ್ದೇ ಅತ್ತಿದ್ದು. ಅದುವರೆಗೂ ಮನೆ ಹತ್ತಿರ ಸುಳಿದಾಡುತ್ತಿದ್ದ ಎಲ್ಲಾ ಪ್ರಾಣಿಗಳನ್ನು ಪ್ರೀತಿ–ಅನುಕಂಪದಿಂದ ಕಾಣುತ್ತಿದ್ದ ಪುಟ್ಟನಿಗೆ ಈ ಕ್ಷಣದಿಂದ ನಾಯಿ ಅವನ ಪರಮ ವೈರಿಯಾಯಿತು. ಮೂರೂ ಮರಿಗಳನ್ನೂ ಒಮ್ಮೆಲೇ ಕಳೆದುಕೊಂಡು ತನುಭಾರ, ಮನಭಾರದಿಂದ ಕೊರಗುತ್ತಿದ್ದ ತಾಯಿಯ ಪಾಡು ಯಾರಿಗೆ ಹೇಳಲಿ? ಹೀಗೆ ಮೂರು ಮರಿಗಳಂತೆ ಮೂರು ವರ್ಷಕ್ಕೆ ಒಂಬತ್ತು ಮರಿಗಳನ್ನು ಹೆತ್ತು ಅವುಗಳಲ್ಲಿ ಏಳನ್ನು ನಾಯಿ ಬಾಯಿಗೆ ನೀಡಿದಳು. ಎರಡನೆಯ ಬಾರಿ ಮೂರು ಮರಿಗಳನ್ನು ನೀಡಿ ನಾಯಿಗೆ ಆಹಾರವಾದಾಗ ನನ್ನ ತಾಳ್ಮೆಯ ಕಟ್ಟೆ ಒಡೆಯಿತು. ನಾಯಿಯ ಬಾಯಿಗೆ ನೀಡುವುದಕ್ಕಾಗಿಯೇ ಈ ತಾಯಿ ಮಕ್ಕಳನ್ನು ಹೆತ್ತ ಹಾಗಾಯ್ತಲ್ಲ! ಇದಕ್ಕೊಂದು ಪರಿಹಾರ ಹುಡುಕಲೇಬೇಕು ಎಂದು ತೀರ್ಮಾನಿಸಿದೆ. ಆಗ ಹೊಳೆದದ್ದು ಒಂದೇ ದಾರಿ. ಅದೇನೆಂದರೆ ತಾಯಿ ಬೆಕ್ಕಿಗೆ ಸಂತಾನಹರಣ ಶಸ್ತ್ರಚಿಕಿತ್ಸೆ ಮಾಡಿಸುವುದು. ಹೆಣ್ಣಾಗಿ ಹುಟ್ಟಿ ಇನ್ನೊಂದು ಹೆಣ್ಣು ಜೀವದ ಹೆರುವ ಸ್ವಾತಂತ್ರ್ಯವನ್ನು ಕಿತ್ತುಕೊಳ್ಳುವುದು ಸರಿಯೇ? – ಎಂಬ ಪ್ರಶ್ನೆ ನನ್ನಲ್ಲಿ ಮೂಡಿದರೂ, ಹುಟ್ಟಿ ಕಂತ್ರಿ ನಾಯಿಗಳ ಬಾಯಿಗೆ ಆಹಾರ ವಾಗುವುದಕ್ಕಿಂತ ಭೂಮಿಗೆ ಬಾರದಿರುವುದೇ ವಾಸಿಯಲ್ಲವೇ? ಎಂದು ಯೋಚಿಸಿ ಶಸ್ತ್ರಚಿಕಿತ್ಸೆ ಮಾಡಿಸುವುದಕ್ಕೆ ಮುಂದಾದೆ. ಮೂಡುಬಿದಿರೆಯಲ್ಲಿ ಪಶು ವೈದ್ಯಕೀಯ ಆಸ್ಪತ್ರೆ ಇದೆ ಎನ್ನುವುದನ್ನು ಕೇಳಿದ್ದೆ. ಓದುವುದರಲ್ಲಿ ಸೋಮಾರಿಯಾದರೂ ಇಂತಹ ಉಸಾಬರಿಗೆಲ್ಲಾ ತುದಿಗಾಲಲ್ಲಿ ನಿಲ್ಲುವ ನನ್ನ ತಮ್ಮನೊಬ್ಬ ಈಗ ಸಹಾಯಕ್ಕೆ ಬಂದ. ನಾನು ಬೆಕ್ಕಿನೊಂದಿಗೆ ಸ್ಕೂಟರ್ ಹಿಂಬದಿ ಕುಳಿತೆ. ಆತ ಸ್ಕೂಟರ್ ಓಡಿಸಿದ. 'ಅಂದಣವೇರಿದ ಸೊಣಗದ ಬುದ್ಧಿಯೂ, ಸ್ಕೂಟರ್ ಏರಿದ ಬೆಕ್ಕಿನ ಬುದ್ಧಿಯೂ ಒಂದೇ' ಅಲ್ಲವೇ? ಎಂಬಂತೆ ಸ್ವಲ್ಪ ದೂರ ಹೋಗುವಷ್ಟರಲ್ಲೇ ಯಾವ ಮುನ್ಸೂಚನೆಯನ್ನೂ ನೀಡದೆ ಸಂಸಾರದಲ್ಲಿ ಬೇಸತ್ತ ಹೆಣ್ಣೊಬ್ಬಳು ಏಕಾಏಕಿ ಬಾವಿಗೋ, ಕೆರೆಗೋ ಹಾರುವಂತೆ ನನ್ನ ಕಾಲ ಮೇಲಿಂದ ದಬಕ್ಕನೆ ಕೆಳಗೆ ಹಾರಿದಳು. ತಮ್ಮನಿಗೆ ಸ್ಕೂಟರ್ ನಿಲ್ಲಿಸುವಂತೆ ಸೂಚಿಸಿ ಕೆಳಗೆ ಇಳಿಯ ಬೇಕೆನ್ನುವಷ್ಟರಲ್ಲಿ ಬಿದ್ದಂಬೀಳಾ ಓಟ ಕಿತ್ತಳು. ನನಗೆ ನಗಬೇಕೋ, ಅಳಬೇಕೋ ಒಂದೂ ಗೊತ್ತಾಗಲಿಲ್ಲ. ಅಂತೂ ಬಂದ ಹಾದಿಗೆ ಸುಂಕವಿಲ್ಲ ಎಂಬಂತೆ ಹಿಂದಿರುಗಿದೆವು. ನನಗೆ ಬೆಕ್ಕು ಹೋದದ್ದಕ್ಕಿಂತಲೂ ದೊಡ್ಡ ತಲೆಬಿಸಿಯಾದದ್ದು ಪುಟ್ಟನನ್ನು ಎದುರಿಸು ವುದಾಗಿತ್ತು. ಗೇಟಿನ ಬಳಿಯೇ ಕಾದು ಕುಳಿತಿದ್ದ ಅವನು ನಾವು ಗೇಟೊಳಗೆ ಪ್ರವೇಶಿಸುತ್ತಲೇ ಅಮ್ಮಾ,

**ಅಭಿನಂದನೆ...**

ಮೂಡುಬಿದಿರೆ ಶಿವರಾಮ ಕಾರಂತ ಪ್ರತಿಷ್ಠಾನವು ನೀಡುವ 'ಶಿವರಾಮ ಕಾರಂತ ಪ್ರಶಸ್ತಿ'ಯು ಸಾಹಿತಿ ದೇವನೂರ ಮಹಾದೇವ ಅವರಿಗೆ ಲಭಿಸಿದೆ. ಲೇಖಕರಿಗೆ 'ನವಕರ್ನಾಟಕ' ಹಾಗೂ 'ಹೊಸತು' ಬಳಗದ ಅಭಿನಂದನೆಗಳು.

ಬೆಕ್ಕಿಗೆ ಹೇಗೆ ಆಪರೇಷನ್ ಮಾಡಿದ್ರು ಎಂದು ಇನ್ನೂ ಏನೇನೋ ಕೇಳಬೇಕೆನ್ನುವಷ್ಟರಲ್ಲಿ ಬೆಕ್ಕು ಕಾಣದಾದಾಗ ಅವನ ಮುಖ ಗಾಳಿ ಕಳೆದುಕೊಂಡ ಬಲೂನಿನಂತಾಯ್ತು. ನಡೆದ ವಿಷಯವನ್ನು ಪ್ರಾಮಾಣಿಕಳಾಗಿ ವಿವರಿಸಿದೆ. ಸುಮ್ನೆ ಬಿಡ್ತಾನ ಇವನು! "ಅಮ್ಮಾ, ನಡೀರಿ ಬೆಕ್ಕನ್ನು ಹುಡುಕಿ ತರೋಣ" ಎನ್ನುತ್ತಾ ಹೊರಡಲು ಸಿದ್ಧನಾದ. ನನಗಂತೂ ರೇಗಿತು. "ಸ್ವಲ್ಪ ಸುಮ್ಮಿರ್ತೀಯಾ, ಹೋಗಲಿ ಬಿಡು. ಎಲ್ಲಾದ್ರೂ ಸೇರ್ಕೊಳ್ತದೆ. ಮಾರಿ ಹೋಯ್ತು. ಕಿರಿಕಿರಿ ತಪ್ಪಲ್ಲಾ" ಎಂದೆ. ತಕ್ಷಣ ಅವನು "ಅಲ್ಲಾ, ಆ ದಿನ ಮರಿ ಬಂದು ಸೇರ್ದಾಗ, ಊರಿನವ್ರಿಗೆಲ್ಲಾ ಬೈತಿದ್ರಿ...? ಹೆಣ್ಣುಜೀವ ಕೇಳುವವರಿಲ್ಲ, ಅಯ್ಯೋ! ಹೆಣ್ಣಿನ ಜನ್ಮವೇ ಅಂತ ಏನೇನೋ ಭಾಷಣ ಬಿಗೀತಿದ್ರಿ. ಈಗ ನೋಡಿದ್ರೆ ಮಾರಿ ಹೋಯ್ತು ಅಂತೀರಿ? ಅಯ್ಯೋ ಎಷ್ಟು ಕೆಟ್ಟವರು ನೀವು" ಎಂದುಬಿಟ್ಟ. ಹೌದು, ಈ ಮಕ್ಕಳೆದುರು ಮಾತನಾಡುವಾಗ ತುಂಬ ಜಾಗ್ರತೆಯಾಗಿರಬೇಕು. ನಮ್ಮ ಮಾತನ್ನು ನಾವು ಮರೆತರೂ ಮಕ್ಕಳು ಮರೆಯುವುದಿಲ್ಲ. ಏನೇ ಆಗಲಿ, ಈ ಬೆಕ್ಕು ಸಾಕಿ ಪಾಪ ಕಟ್ಟಿಕೊಳ್ಳುವ ಕೆಲಸ ಯಾರಿಗೆ ಬೇಕು? ನಿಶ್ಚಿಂತೆಯಿಂದ ಇದ್ದು ಬಿಡೋಣ ಎಂದು ತೀರ್ಮಾನಿಸಿದೆ.

'ತಾನೊಂದು ಬಗೆದರೆ ದೈವವೊಂದು ಬಗೆವುದು' ಎಂಬ ಮಾತು ನನ್ನಂಥವರಿಗಾಗಿಯೇ ಸೃಷ್ಟಿಯಾಗಿರ ಬೇಕು ಎಂದೆನಿಸಿದ್ದು ಒಂದು ಮಧ್ಯಾಹ್ನ ಕಾಲೇಜಿನಿಂದ ಮನೆಗೆ ಬರುವಾಗ ಗೇಟಿನೆದುರು ಪ್ರತ್ಯಕ್ಷವಾದ ಈ ಮನೆ ಮಗಳನ್ನು ನೋಡಿದಾಗಲೇ. ಹೆರಿಗೆ ಸಮಯ ಸಮೀಪಿಸಿದ ಹೆಣ್ಣು ಮಗಳೊಬ್ಬಳು ತಾಯಿ ಮನೆಯನ್ನೇ ಅರಸಿಕೊಂಡು ಬರುವ ಹಾಗೆ ಈ ಮನೆ ಮಗಳು ಹೊಟ್ಟೆ ಹೊತ್ತುಕೊಂಡು ನನ್ನನ್ನು ಕಂಡೊಡನೆ ತನ್ನ ಪರಿಚಯವನ್ನು ಖಾತ್ರಿಗೊಳಿಸಿಕೊಳ್ಳುವಂತೆ ಪಿಳಿಪಿಳಿ ಕಣ್ಣು ಬಿಟ್ಟುಕೊಂಡು ನೋಡುತ್ತಾ ನಿಂತಾಗ ನನ್ನೊಳಗೆ ನಿಜವಾದ ತಾಯ್ತನ ಎಚ್ಚರಗೊಂಡು ಕರುಳು ಚುರುಕ್ಕೆಂದಿತು. ಈಗಾಗಲೇ ಆರು ಮಕ್ಕಳನ್ನು ಹೆತ್ತು ಸುಸ್ತಾಗದೆ ಮುಂದಿನ ಮಕ್ಕಳ ನಿರೀಕ್ಷೆಯಲ್ಲಿ ಕಾತರಿಸುತ್ತಿದ್ದ ಅದರ ನೋಟ ನನ್ನನ್ನು ಅಣಕಿಸುತ್ತಿತ್ತು. ಒಂದು ಹೆತ್ತೇ ಜಗತ್ತಿನ ಮಹಾನ್ ಸಾಧಕಿ ಎನ್ನುವ ಹಾಗೆ ಹೆಮ್ಮೆಪಡುತ್ತಿದ್ದ ನನಗೆ, ಈ ಬೆಕ್ಕಿನ ಎದುರು ನಾನು ಏನೇನೂ ಅಲ್ಲ ಎಂಬ ಸತ್ಯದ ಅರಿವಾದದ್ದು ಆಗಲೇ.

ಏನೇ ಆಗಲಿ, ಹಿಂದಿನ ಸಂದರ್ಭಗಳಲ್ಲಿ ಆದಂತೆ ಈ ಸಲ ಆಗಬಾರದು. ಮರಿಗಳನ್ನು ಸುರಕ್ಷಿತವಾಗಿ ಬೆಳೆಸಬೇಕು ಎಂಬ ಮಾನವೀಯ ಪ್ರಜ್ಞೆಯಿಂದ ಮನೆ ಮಗಳನ್ನು ಸ್ವಾಗತಿಸಿ ಆಶ್ರಯ ನೀಡಿದೆ. ಅಂತೂ ಹೆರಿಗೆ ದಿನ ಬಂದೇ ಬಿಡ್ತು. ಪ್ರಸವ ವೇದನೆಯ ಯಾವ ಚಿಹ್ನೆಗಳನ್ನೂ ತೋರ್ಪಡಿಸಿಕೊಳ್ಳದೆ ಮತ್ತೆ ಮೂರು ಮರಿಗಳಿಗೆ ಜನ್ಮ ನೀಡಿದಳು. ಅಲ್ಲಾ, ಈ ಪ್ರಾಣಿಗಳಿಗೆ ಪ್ರಸವ ವೇದನೆ ಎನ್ನುವುದು ಇರುವುದೇ ಇಲ್ವೇ? ನಾಯಿ-ಬೆಕ್ಕು-ದನ ಇವುಗಳ ಹೆರಿಗೆಗೆ ಎಷ್ಟೋ ಬಾರಿ ನಾನು ಸಾಕ್ಷಿಯಾಗಿದ್ದೆ. ಆದರೆ ಮನುಷ್ಯನಿಗಿರುವ ವೇದನೆ ಇವುಗಳಿಗೇಕಿಲ್ಲ? ಅಥವಾ ಎಂತಹ ನೋವನ್ನೂ ತಡೆದುಕೊಳ್ಳುವಷ್ಟು ಮನಸ್ಸು ಗಟ್ಟಿಯಾಗಿರುತ್ತದೋ? ಒಬ್ಬ ಮಗನನ್ನೇ ಹೊರಗೆ ತರುವಾಗ ಇಡೀ ಆಸ್ಪತ್ರೆಗೆ ಆಸ್ಪತ್ರೆಯೇ ಒಂದಾಗುವಂತೆ ನಾನು ಮಾಡಿದ ರಂಪಾಟ ಎಣಿಸಿದರೆ ಈಗ ನಾಚಿಕೆಯಾಗುತ್ತದೆ. ಇದಕ್ಕೇ ಇರಬೇಕು ನನ್ನ ಅಜ್ಜಿ ಹೇಳುತ್ತಿದ್ದುದು, 'ಬಾಯಿ ಬಾರದ ಪ್ರಾಣಿಗಳಿಗೆ ದೇವರ ವರ ಜಾಸ್ತಿ' ಎಂದು. ಈ ಬಾರಿ ಪುಟ್ಟನೂ ಜಾಗೃತನಾದ. ತಾಯಿ-ಮಕ್ಕಳಿಗೆ ಅಡುಗೆಮನೆಯ ಒಂದು ಮೂಲೆಯಲ್ಲಿಯೇ ವ್ಯವಸ್ಥೆ ಕಲ್ಪಿಸಿದ. ಸುಮಾರು ಒಂದು ತಿಂಗಳಾಗುವಷ್ಟರಲ್ಲಿ ಮರಿಗಳು ಓಡಾಡಲು ಪ್ರಾರಂಭಿಸಿದವು. ಹೊಸ್ತಿಲಿನಿಂದ ಹೊರಗೆ ಓಡುವ ತವಕ ಹೆಚ್ಚಾಯಿತು. ಬೆಕ್ಕು ಹೆರುವುದನ್ನೇ ಕಾದು ಕುಳಿತಿದ್ದ ಕಂತ್ರಿ ನಾಯಿ ಅಂತೂ ಒಂದು ಮರಿಯನ್ನು ಕಬಳಿಸಿಯೇ ಬಿಟ್ಟಿತು. ಏನು ಮಾಡುವುದು? ಬದುಕುವುದಕ್ಕೂ ಯೋಗ ಬೇಡವೇ? ಉಳಿದಿದ್ದ ಎರಡು ಮರಿಗಳನ್ನು ಎರಡು ತಿಂಗಳವರೆಗೆ ಹದ್ದಿನ ಕಣ್ಣಲ್ಲಿ ನೋಡಿ ಎಲ್ಲಾದರೂ ಬದುಕಿ ಕೊಂಡಿರಲಿ ಎಂದು ಪರಿಚಯದವರಿಗೆ ದತ್ತು ನೀಡಿದೆವು. ಒಂಭತ್ತು ಮಕ್ಕಳನ್ನು ಹೆತ್ತು ತಬ್ಬಲಿಯಾದ ತಾಯಿಯ ರೋದನ ಕೇಳಬೇಕೇ? ಒಂದೇ ಸವನೆ ಅಳುತ್ತಾ ಮನೆಯ ಮೂಲೆ-ಮೂಲೆಗಳನ್ನು ಹುಡುಕುವಾಗ ನನ್ನೊಳಗೆ ಅಸಹಾಯಕ ಪರಿಸ್ಥಿತಿಯ ರಾಕ್ಷಸಿಯೊಬ್ಬಳು ಇಣುಕುತ್ತಿದ್ದಳು. ಮಕ್ಕಳ ಹುಟ್ಟಿಗೆ ಕಾರಣನಾದವನು ಎಲ್ಲಿದ್ದಾನೋ? ಹೋಗಲಿ ಮಕ್ಕಳ ಮುಖ ನೋಡಿಯಾದರೂ ದುಃಖ ಮರೆಯುತ್ತೇನೆಂದರೆ ಆ ಭಾಗ್ಯವೂ ಇಲ್ಲವಾಯಿತು ಈ ಮನೆ ಮಗಳಿಗೆ. ಉಳಿದವರು ಎಷ್ಟಿದ್ದೂ ಏನು ಪ್ರಯೋಜನ! ಎಂಬ ಜಿಗುಪ್ಸೆ ಮೂಡಿತೋ ಏನೋ, ಒಂದು ದಿನ ಇದ್ದಕ್ಕಿದ್ದಂತೆ ಕಾಣೆಯಾದಳು ಈ ಮನೆ ಮಗಳು. ಅನ್ನದ ಋಣವನ್ನು ಮರೆಯದೆ, ಸಣ್ಣ-ಪುಟ್ಟ ಇಲಿ, ಜಿರಲೆಗಳನ್ನು ನಿಯಂತ್ರಿಸುತ್ತಾ, ತನ್ನ ನಿಷ್ಠಾವಂತ ಕಾಯಕ ಎಸಗುತ್ತಾ ಬಂದಿರುವ ಈಕೆ ಹೇಳದೆ ಕೇಳದೆ ಮನೆ ಬಿಟ್ಟುಹೋಗಲು ಕಾರಣವೇನು?

ಉಳಿದ ಎರಡು ಮಕ್ಕಳನ್ನು ತನ್ನಿಂದ ಅಗಲಿಸಿದರು ಎಂಬ ಕೋಪಕ್ಕೆ ತೋರಿಸಿದ ಪ್ರತೀಕಾರವೇ ಇದು? ಇಲ್ಲ, ತನ್ನ ವಂಶ ಬೆಳಗುವುದಕ್ಕೆ ಸೂಕ್ತವಾದ ವಾತಾವರಣ ಈ ಮನೆಯಲ್ಲಿಲ್ಲ ಎಂದು ಬೇರೊಂದು ಮನೆಯನ್ನು ಅರಸಿಕೊಂಡು ಹೋಗಿರಬಹುದೇ? ಅಥವಾ ಜೀವನದಲ್ಲಿ ಬೇಸತ್ತು ಬದುಕಿಗೇನೇ ವಿದಾಯ ಹೇಳಿರಬಹುದೇ? ಎಲ್ಲವೂ ಉತ್ತರ ಸಿಗದ ಪ್ರಶ್ನೆಗಳಾಗಿ ಇಂದಿಗೂ ಕಾಡುತ್ತಿವೆ. ಒಂದು ಮಗುವಿನ ತಾಯಿಯಾಗಿ ಒಂಭತ್ತು ಮಕ್ಕಳ ತಾಯಿಯನ್ನು ಅರ್ಥಮಾಡಿಕೊಳ್ಳುವಲ್ಲಿ ನಾನು ಸೋತಿರಬಹುದು. ಆದರೆ ತಾಯಿ ಹೃದಯ ಎನ್ನುವುದು ಮಕ್ಕಳನ್ನು ಹೆತ್ತೇ ಬರಬೇಕೆಂದಿಲ್ಲವಲ್ಲ? ಬೆಕ್ಕಿನ ನೆನಪಾದಾಗಲೆಲ್ಲಾ ಕಣ್ಣನ್ನು ತೇವ ಮಾಡಿಕೊಳ್ಳುವ ನನ್ನ ಮಗನದ್ದೂ ತಾಯಿ ಹೃದಯವಲ್ಲವೇ!

ಸಂಬಂಧಗಳೆಂದರೆ ಹೀಗೆ ಅಲ್ವೇ? ಜೀವಗಳೇ ಶಾಶ್ವತವಲ್ಲ ಅಂದ ಮೇಲೆ ಸಂಬಂಧಗಳನ್ನು ಶಾಶ್ವತ ಗೊಳಿಸುವುದು ಸಾಧ್ಯವೇ? ಜೀವನವೆಂಬ ಪ್ರಯಾಣ ದಲ್ಲಿ ನಡುನಡುವೆ ಸಿಗುವ, ಬೀಳ್ಕೊಡುವ ಈ ಪರಿಯ ನೆನಪುಗಳೇ ಮನದಾಳದಲ್ಲಿ ಗಟ್ಟಿಗೊಳ್ಳುತ್ತವೆ. ಈ ಮನೆ ಮಗಳ ಸಂಬಂಧವೂ ಇದಕ್ಕಿಂತ ಭಿನ್ನವಾಗಿಲ್ಲ. ಹೇಳಬೇಕಾಗಿರುವುದಿಷ್ಟೇ. ಬೆಕ್ಕಿನ ನೆನಪಾದಾಗಲೆಲ್ಲಾ ನನ್ನ ಮಗ ಹೇಳುವ "ಅಮ್ಮಾ, ಬೆಕ್ಕು ಎಲ್ಲೇ ಇರಲಿ, ಅದು ಚೆನ್ನಾಗಿರಲಿ" ಎಂಬ ಮಾತಿಗೆ ಧ್ವನಿ ಗೂಡಿಸುವುದಷ್ಟೇ ನನ್ನ ಪಾಲಿಗೆ ಉಳಿದಿರುವ ದಾರಿ.

**ಡಾ॥ ಸುಲತಾ ವಿದ್ಯಾಧರ್**
'ವಾತ್ಸಲ್ಯ', ಒಂಟಿಕಟ್ಟೆ, ಮೂಡಬಿದರೆ – ೫೭೪ ೨೨೭
ದಕ್ಷಿಣ ಕನ್ನಡ ಜಿಲ್ಲೆ

# ಬದಲಾಗುತ್ತಿರುವ ಸಾಮಾಜಿಕ ಸಂದರ್ಭದಲ್ಲಿ ಆದಿಕರ್ನಾಟಕ ಸಮುದಾಯದ ಜೀವನಾವರ್ತಕ ಆಚರಣೆಗಳು

## – ಒಂದು ವಿಮರ್ಶೆ

ಒಬ್ಬ ವ್ಯಕ್ತಿ ಅಥವಾ ವ್ಯಕ್ತಿಗಳು ತಮ್ಮ ಜೀವನದಲ್ಲಿ ಜನನದಿಂದ ಸಾವಿನವರೆಗೆ ಆಚರಿಸುವ ಆಚರಣೆಗಳನ್ನು ಜೀವನಚಕ್ರ ಆಚರಣೆಗಳು ಅಥವಾ ಜೀವನಾವರ್ತಕ ಆಚರಣೆಗಳು ಎಂದು ಕರೆಯಲಾಗುತ್ತದೆ. ಜೀವನಚಕ್ರ ಅಧ್ಯಯನದಿಂದ ವ್ಯಕ್ತಿಯೊಬ್ಬ ತನ್ನ ಬಾಲ್ಯಾವಸ್ಥೆಯಿಂದ ಸಾವಿನವರೆಗೆ ವಿಭಿನ್ನ ಬಗೆಯ ವ್ಯಕ್ತಿಗತ ಪರಿವರ್ತನೆಯ ಪ್ರಕ್ರಿಯೆಗೆ ಒಳಗಾಗುವುದನ್ನು ತಿಳಿದುಕೊಳ್ಳಬಹುದಾಗಿದೆ. ಜೊತೆಗೆ, ವಿಭಿನ್ನ ಜೀವನ ಹಂತಗಳಲ್ಲಿನ ವ್ಯಕ್ತಿಗಳ ಪಾತ್ರಗಳು ಮತ್ತು ಸಾಮಾಜಿಕ ಸ್ಥಾನಮಾನಗಳನ್ನು ಹಾಗೂ ಒಂದು ಹಂತದಿಂದ ಇನ್ನೊಂದು ಹಂತದಲ್ಲುಂಟಾಗುವ ಸ್ಥಿತ್ಯಂತರಗಳನ್ನು ಅರ್ಥಮಾಡಿಕೊಳ್ಳಬಹುದಾಗಿದೆ. ಪ್ರಪಂಚದ ಎಲ್ಲಾ ಸಮುದಾಯದ ಸಂಸ್ಕೃತಿಗಳ ಜನರೂ ಕೂಡ ಇಂತಹ ಹಂತಗಳನ್ನು (ಜನನ, ನಾಮಕರಣ, ಪ್ರೌಢಾವಸ್ಥೆ, ವಿವಾಹ, ಗರ್ಭಧಾರಣೆ, ವೃದ್ಧಾಪ್ಯ ಮತ್ತು ಸಾವು) ಹಾಯ್ದುಹೋಗುವವರೇ ಆಗಿರುವುದರಿಂದ ಜೀವನಾವರ್ತಕ ಆಚರಣೆಗಳ ಅಧ್ಯಯನಗಳು ಸಂಸ್ಕೃತಿ ಮತ್ತು ಸಂಸ್ಕೃತಿ ನಡುವಿನ ಸಾಮ್ಯತೆ ಮತ್ತು ವ್ಯತ್ಯಾಸಗಳನ್ನು ಅರ್ಥೈಸಿಕೊಳ್ಳಲು ಬಹಳಷ್ಟು ಸಹಾಯಕವಾಗಿವೆ. ಪ್ರಸ್ತುತ ಲೇಖನದಲ್ಲಿ ಬದಲಾಗುತ್ತಿರುವ ಸಾಮಾಜಿಕ ಸಂದರ್ಭದಲ್ಲಿ ಆದಿಕರ್ನಾಟಕ ಸಮುದಾಯದ ಜೀವನಾವರ್ತಕ ಆಚರಣೆಗಳು ಹೇಗೆ ಬದಲಾಗುತ್ತಿವೆ ಎಂಬುದನ್ನು (ವಿಶೇಷವಾಗಿ, ಮೈಸೂರು ಜಿಲ್ಲೆಯನ್ನು ಅನುಲಕ್ಷಿಸಿ) ವಿಮರ್ಶಿಸಲಾಗಿದೆ. ಆದಿಕರ್ನಾಟಕ ಸಮುದಾಯವನ್ನು ಹೊಲೆಯ, ಬಲಗೈ, ಪಂಚಮ, ಅಂತ್ಯಜ, ಛಲವಾದಿ ಮುಂತಾದ ವಿವಿಧ ಹೆಸರುಗಳಿಂದ ಕರೆಯಲಾಗುತ್ತದೆ.

೨೦೧೧ನೇ ಜನಗಣತಿ ಪ್ರಕಾರ ಇವರು ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಕಂಡುಬಂದರೂ ಕೂಡ ಮೈಸೂರು, ಚಾಮರಾಜನಗರ, ಮಂಡ್ಯ, ಹಾಸನ, ಬೆಂಗಳೂರು, ರಾಮನಗರ, ರಾಯಚೂರು, ಕಲಬುರ್ಗಿ ಮುಂತಾದ ಜಿಲ್ಲೆಗಳಲ್ಲಿ ಅಧಿಕವಾಗಿ ಕಂಡುಬರುತ್ತಾರೆ. ಆದಿಕರ್ನಾಟಕ ಸಮುದಾಯದ ಒಟ್ಟು ಜನಸಂಖ್ಯೆ ರಾಜ್ಯದಲ್ಲಿ ೨೯,೨೦,೯೪೨ರಷ್ಟಿದೆ. ಅಂದರೆ ಒಟ್ಟು ಪರಿಶಿಷ್ಟ ಜಾತಿ ಜನಸಂಖ್ಯೆಯಲ್ಲಿ ಆದಿಕರ್ನಾಟಕ ಸಮುದಾಯದ ಜನಸಂಖ್ಯೆ ಶೇ. ೨೭.೯ರಷ್ಟಿದೆ. ಮೊದಲೇ ತಿಳಿಸಿದ ಹಾಗೆ ಇತರ ಹೆಸರುಗಳಿಂದ ಕರೆಯುವ ಈ ಸಮುದಾಯದ ಜನಸಂಖ್ಯೆಯನ್ನು ಒಟ್ಟಾಗಿ ನೋಡಿದರೆ (ಹೊಲೆಯ–೭,೯೨,೭೮೫, ಹೊಲಾರ್–೧೫೪೪೮, ಬಲಗೈ–೨,೧೮೦ ಮತ್ತು ಛಲವಾದಿ–೨,೧೯,೬೨೬) ಇವರ ಜನಸಂಖ್ಯೆ ಒಟ್ಟು ಪರಿಶಿಷ್ಟ ಜಾತಿ ಜನಸಂಖ್ಯೆಯಲ್ಲಿ ಶೇ. ೩೭.೬ರಷ್ಟಾಗುತ್ತದೆ. ಈ ಸಮುದಾಯವು ಶತಶತಮಾನಗಳಿಂದ ತುಳಿತಕ್ಕೊಳಗಾದ ಹಾಗೂ ಸಕಲ ಸವಲತ್ತುಗಳಿಂದಲೂ ವಂಚಿತವಾದ ಸಮುದಾಯವಾಗಿದೆ.

**ಜನನ :** ಜನನವು ಯಾವುದೇ ವ್ಯಕ್ತಿಯ ಹುಟ್ಟು ಅಥವಾ ಜನನ ಜೀವನಾವರ್ತಕ ಆಚರಣೆಗಳಲ್ಲಿ ಮೊದಲ ಹಂತ. ಆದಿಕರ್ನಾಟಕ ಸಮುದಾಯದ ಜನನ ಆಚರಣೆಗಳು ಅಥವಾ ಸಂಸ್ಕಾರಗಳು ಮತ್ತು ಇತರ ಸಮುದಾಯಗಳ

**ಡಾ॥ ಕೆ. ಶೈಲಜ**
**ಡಾ॥ ಬಿ. ಆರ್. ಮಂಜುನಾಥ**







ಆಚರಣೆಗಳ ನಡುವೆ ಸಾಮ್ಯತೆಯಿದ್ದರೂ ಕೂಡ ಅವು ವಿಭಿನ್ನವಾಗಿವೆ. ಈ ಮೊದಲು ಸಮುದಾಯದ ಹಿರಿಯರಿಂದ ಮನೆಯಲ್ಲೆ ಹೆರಿಗೆ ಮಾಡಿಸಲಾಗುತಿತ್ತು. ಹೀಗೆ ಹೆರಿಗೆ ಮಾಡಿಸುವವರನ್ನು ಸೂಲಗಿತ್ತಿಯರು ಎಂದು ಕರೆಯಲಾಗುತ್ತದೆ. ಆದರೆ ಈಗ ಶೇ. ೮೦ಕ್ಕೂ ಹೆಚ್ಚು ಹೆರಿಗೆಗಳನ್ನು ಆಸ್ಪತ್ರೆಯಲ್ಲಿ ಮಾಡಿಸಲಾಗುತ್ತದೆ. ಆಸ್ಪತ್ರೆಯಿಂದ ಬಂದ ನಂತರ ತಾಯಿ ಮತ್ತು ಮಗುವಿಗೆ ಬಿಸಿನೀರಿನಿಂದ ಸ್ನಾನ ಮಾಡಿಸಿ ಆರತಿ ಮಾಡಿ ಮನೆಯೊಳಗೆ ಕರೆದುಕೊಂಡು ಹೋಗಿ ಪ್ರತ್ಯೇಕವಾಗಿ ಕೊಠಡಿಯೊಂದರಲ್ಲಿ ಇರಿಸುತ್ತಾರೆ. ಪ್ರತಿ ಮೂರು ದಿನಕ್ಕೊಮ್ಮೆ ಅನುಭವಸ್ಥ ಹಿರಿಯ ಹೆಂಗಸರಿಂದ ತಾಯಿ ಮತ್ತು ಮಗುವಿಗೆ ಸೀಗೆಕಾಯಿ, ಅರಿಶಿನಪುಡಿಯನ್ನು ಮಿಶ್ರಣಮಾಡಿ ಮೈಗೆ ಹಚ್ಚಿ ಸ್ನಾನ ಮಾಡಿಸುತ್ತಾರೆ. ಮಗು ಜನಿಸಿದ ೫ನೇ ದಿನಕ್ಕೆ ಮನೆಯೊಳಗೆ ಸಣ್ಣ ಗುಳಿಯೊಂದನ್ನು ಮಾಡಿ ಅದರೊಳಗೆ ಅನ್ನ ಮತ್ತು ಸಿಹಿ ತಿನಿಸನ್ನು, ಜೊತೆಗೆ ಕುಂಭತ್ತಿ ಎಂಬ ಹುಳುವೊಂದನ್ನು ಹಾಕಿ ಮಣ್ಣಿನಿಂದ ಮುಚ್ಚುತ್ತಾರೆ. ಇದನ್ನು 'ಗುಳಿ ಬಾಯಿಗೆ ಅನ್ನ ಹಾಕುವುದು' ಅಥವಾ 'ಗುಳಿಶಾಸ್ತ್ರ' ಅಥವಾ 'ಗುಣಿಶಾಸ್ತ್ರ' ಎಂದು ಕರೆಯುತ್ತಾರೆ. ಈ ಸಂದರ್ಭದಲ್ಲಿ ತೆಂಗಿನಕಾಯಿ, ಬಾಳೆಹಣ್ಣು, ಎಲೆ ಅಡಿಕೆಯನ್ನಿಟ್ಟು ಪೂಜೆ ಮಾಡಿ ೫ ಜನ ಮುತ್ತೈದೆಯರಿಗೆ ಅರಿಶಿನ ಕುಂಕುಮವನ್ನು ಕೊಡುತ್ತಾರೆ.

ಮಗು ಹುಟ್ಟಿದ ೯ನೇ ದಿನಕ್ಕೆ ಸೂತಕ ತೆಗೆಯುತ್ತಾರೆ. ಇದಕ್ಕೆ ಮಡಿಕೆ ತೆಗೆಯುವುದು ಎನ್ನುತ್ತಾರೆ. ಅಂದರೆ ದಾಯಾದಿಗಳು, ಸಂಬಂಧಿಗಳೆಲ್ಲ ತಮ್ಮ ತಮ್ಮ ಮನೆಗಳಿಗೆ ಸುಣ್ಣ ಬಣ್ಣ ಬಳಿದು ಮನೆಯನ್ನು ಹಾಗೂ ಮನೆಯೊಳಗಿನ ವಸ್ತುಗಳನ್ನು ಸ್ವಚ್ಛಗೊಳಿಸಿ ೯ನೇ ದಿನಕ್ಕೆ ಪೂಜೆಮಾಡಿಸಿ, ಹೊಸ ಮಡಿಕೆಯಿಂದ ನೀರನ್ನು ತರುತ್ತಾರೆ. ಆ ಸಂದರ್ಭದಲ್ಲಿ ಗ್ರಾಮದ ಹಿರಿಯರಿಗೆ ನೆಂಟರಿಗೆ ಹಾಗೂ ಬಂಧು ಬಾಂಧವರಿಗೆ ಸಿಹಿ ಊಟ ಹಾಕಲಾಗುತ್ತದೆ, ನಂತರ ದಾಸಪ್ಪ ಅಥವಾ ಗುಡ್ಡಪ್ಪರವರನ್ನು ಕರೆಸಿ ಹೊಸ ಮಡಿಕೆಯಿಂದ ತಂದ ನೀರನ್ನು ಮನೆಗೆಲ್ಲ (ತೀರ್ಥ ಎರಚುವುದು) ಚಿಮುಕಿಸುತ್ತಾರೆ. ಈ ಸಂದರ್ಭದಲ್ಲಿ ಜಾಗಟೆ ಮತ್ತು ಶಂಖದಿಂದ ಶಬ್ದ ಹೊರಡಿಸುತ್ತಾರೆ; ಇದಕ್ಕೆ 'ಶಂಖ ಕೂಗಿಸುವುದು' ಎಂದು ಕರೆಯುತ್ತಾರೆ. ಇಲ್ಲಿಗೆ ಸೂತಕ ಕಳೆಯಿತು ಎಂದು ಭಾವಿಸಲಾಗುತ್ತದೆ.

ತಾಯಿ ಮತ್ತು ಮಗುವನ್ನು ನೋಡಲು ಯಾರೇ ಬಂದರೂ ಮನೆಯ ಹೊರಗಡೆ ಒಂದೆರಡು ನಿಮಿಷ ಕುಳಿತು ಕೈಕಾಲು ತೊಳೆದು ಗೋಮೂತ್ರ ಮತ್ತು ಸಗಣಿ ತುಳಿದುಕೊಂಡು ಮನೆಯೊಳಗೆ ಬರಬೇಕು. ನೇರವಾಗಿ ಬಂದರೆ ಅವರ ಮೂಲಕ ದುಷ್ಟ ಶಕ್ತಿಗಳು ಸೇರಿ ಮಗುವಿಗೆ ತೊಂದರೆಯಾಗುತ್ತದೆ ಎಂಬ ನಂಬಿಕೆಯಿದೆ. ಇದನ್ನು ಸೋಕಾಗುತ್ತದೆ ಎಂದೂ ಕರೆಯುತ್ತಾರೆ. ಮಗು ಅತಿಯಾಗಿ

## ಪೊರಕೆಗಳು



**ನಾ**ವು.....
ಕೊರಳಿಗೆ ನೇಣು ಬಿಗಿಸಿಕೊಂಡವರು
ಒಂದೇ ಬದಿ ಗುಡಿಸಿ ಗುಂಡಾಂತರ ಮಾಡಿ
ಸೊಂಟ ಮುರಿಸಿಕೊಂಡು ಸದಾ ಮೂಲೆಯಲ್ಲಿ
ಬಿದ್ದಿರುವ ನಾವುಗಳು ಮೂಲೆಗುಂಪಾದವರು
ಟೈಲ್ಸ್, ತರಕಲು, ಗಾರೆ, ಮಣ್ಣು, ಬಯಲು
ಏನನ್ನೂ ಲೆಕ್ಕಿಸದೇ ಅಡಿಯಿಂದ ಮೇಲಕ್ಕೆ
ನಮ್ಮನ್ನು ಸವೆಸಿ ಸವೆಸಿ ಇನ್ನೊಂದಿಷ್ಟು
ಪ್ರಾಣ ಇದ್ದಾಗಲೇ ಉರಿದುರಿದು ಬೆಂಕಿಯಾಗಿ
ಬೂದಿಯಾಗುವವರು ನಾವು.

ನೀವು...
ಮಗು ರಚ್ಚೆ ಹಿಡಿದಾಗ ನನ್ನ ನೀವಳಿಸಿ
ದೃಷ್ಟಿ ತೆಗೆಯುವವರು
ಮುಂದುವರೆದು ಸೋಕು ತೆಗೆದಾಗ ನನ್ನ
ಕೈ ಕಾಲು ಬೆರಳುಗಳ ಕತ್ತರಿಸಿ ಕೆಂಪು
ಕೆಂಡಕ್ಕೆಸೆದು ಚಟ್‌ಪಟ್ ಶಬ್ದಕ್ಕೆ ನಿರಾಳರಾಗುವವರು
ಇನ್ನು ಮನೆಯೊಳಗಿನ ರಣಯುದ್ಧಗಳಲ್ಲಿ
ಪಾಶುಪತಾಸ್ತ್ರದಂತೆ ಬಳಸುವವರು.

ಈಗೀಗ....
ನನಗೆ ಹೊಸಬಟ್ಟೆ ತೊಟ್ಟು ಮಾಲುಗಳಲ್ಲಿ
ದುಬಾರಿಗೆ ಬಿಕರಿ ಮಾಡುವವರೆ
ಪುಢಾರಿಗಳೆಲ್ಲ ಬೀದಿ ತೊಡೆದು
ನನ್ನೊಂದಿಗೆ ಫೋಟೋ ಕ್ಲಿಕ್ಕಿಸಿಕೊಳ್ಳುವವರೆ
ನನ್ನ ಚಿತ್ರ ಮುಂದಿಟ್ಟು ವೋಟು ಕೇಳುವವರೆ
ಕೃತಿಯಲ್ಲಿಲ್ಲದೆ, ಮಾತು ಭಾಷಣಗಳಲ್ಲಿ
ನನ್ನ ಮೇಲೆಕ್ಕೆತ್ತುವವರೆ.

ಮಹಾಶಯರೆ....
ಶತಶತಮಾನಗಳಿಂದ ತಳಪಾಯದಲ್ಲಿದ್ದು
ತೊಡೆದು ತೊಡೆದು ತೊಡರಿ ಹೋಗಿದ್ದೇನೆ
ಪಲ್ಲಂಗದ ಮೇಲಲ್ಲ
ಒಂದೆರಡಡಿ ಮೇಲೆಯಾದರೂ ಕೂರಿಸಿ
ಸುಖಾಸೀನನಾಗಿ ಕೊಂಚ ಕನಸು ಕಾಣಬೇಕು
ಆ ಕನಸಿನ ಕನಸು ಕನವರಿಸುತ್ತ
ಸವೆದು ಸವೆದು ಸವಕಲಾಗುತ್ತಿದ್ದೇನೆ
ಮತ್ತಷ್ಟು ಸವಕಲಾಗುತ್ತಿದ್ದೇನೆ.

**ಮಣಜೂರು ಶಿವಕುಮಾರ್**
ಶಿಕ್ಷಕರು, ಮಣಜೂರು ಗ್ರಾಮ, ಕಿರಂಗಾಲ ಅಂಚೆ
ಸೋಮವಾರಪೇಟೆ ತಾಲ್ಲೂಕು
ಕೊಡಗು ಜಿಲ್ಲೆ – ೫೭೧೨೩೨

ಅತ್ತರೆ ಬೇರೆಯವರ ದೃಷ್ಟಿ ತಾಗಿದೆ ಎಂಬ ನಂಬಿಕೆಯಿಂದ ವೀಳ್ಯದ ಎಲೆ ಅಥವಾ ಪೊರಕೆಯಿಂದ ನೀವಳಿಸಿ ಅದನ್ನು ಸುಟ್ಟು ಅದರ ಬೂದಿಯನ್ನು ತಾಯಿ ಮತ್ತು ಮಗುವಿನ ಹಣೆಗೆ ಹಚ್ಚುತ್ತಾರೆ.

ಬಾಣಂತಿ ಅಥವಾ ತಾಯಿಗೆ ಆಹಾರ ನೀಡುವಲ್ಲಿ ಕೆಲವು ನಿಯಮ ಮತ್ತು ನಿಷಿದ್ಧಗಳಿವೆ. ಊಟ ಮಾಡುವಾಗ ಅನ್ನದೊಂದಿಗೆ ಉಪ್ಪು, ಕಾರ, ಹುಳಿಯಿರುವ ಸಾಂಬಾರನ್ನು ಕೊಡುವುದಿಲ್ಲ; ಬದಲಿಗೆ ಮೆಣಸು, ಬೆಳ್ಳುಳ್ಳಿ, ಸೀಗಡಿ ಪುಡಿ ಮಿಶ್ರಣಮಾಡಿ ಊಟ ಕೊಡುತ್ತಾರೆ. ಈ ನಿಯಮವನ್ನು ಸುಮಾರು ೫ ತಿಂಗಳ ವರೆಗೂ ಕಟ್ಟುನಿಟ್ಟಾಗಿ ಪಾಲಿಸುತ್ತಾರೆ. ಇದರೊಂದಿಗೆ ಶೀತ ಪದಾರ್ಥಗಳನ್ನು ತಿನ್ನುವುದಿಲ್ಲ; ಏಕೆಂದರೆ, ಹಾಲುಣ್ಣುವ ಮಗುವಿಗೆ ತೊಂದರೆಯಾಗುತ್ತದೆ ಎಂಬುದಾಗಿ ಭಾವಿಸುತ್ತಾರೆ. ಆದರೆ ಇತ್ತೀಚಿನ ದಿನಗಳಲ್ಲಿ ಆರೋಗ್ಯ ಅರಿವು ಕಾರ್ಯಕ್ರಮಗಳಿಂದ ಈ ನಿಯಮ ಮತ್ತು ನಿಷಿದ್ಧಗಳು ಸಡಿಲಗೊಳ್ಳುತ್ತಿವೆ ಹಾಗೂ ವೈದ್ಯರು ಸೂಚಿಸಿದ್ದನ್ನು ಕೂಡ ಪಾಲಿಸುತ್ತಾರೆ.

**ನಾಮಕರಣ**

ಆದಿಕರ್ನಾಟಕ ಸಮುದಾಯದಲ್ಲಿ ನಾಮಕರಣ ವಿಶಿಷ್ಟವಾದ ಆಚರಣೆಯಾಗಿದೆ. ಮಗು ಜನಿಸಿದ ೯ನೇ ದಿನಕ್ಕೆ, ಅಂದರೆ ಸೂತಕ ತೆಗೆಯುವ ದಿನಕ್ಕೆ ಮಗುವಿಗೆ ತಮ್ಮ ಕುಲದೇವರ ಹೆಸರನ್ನಿಡುತ್ತಾರೆ. ಹಿಂದೆ ಗಂಡುಮಗುವಿಗೆ ರಂಗ, ವೆಂಕಟಯ್ಯ, ಹನುಮಯ್ಯ, ಹನುಮಂತ, ಮಾದಯ್ಯ, ಕುಳ್ಳಯ್ಯ, ತೋಪಯ್ಯ, ಕರಿಯಯ್ಯ, ದೊಡ್ಡದಾಸಿ, ಚಿಕ್ಕದಾಸಿ, ಗೋವಿಂದ, ಸಿದ್ದಯ್ಯ, ಸಣ್ಣದಯ್ಯ, ಜೋಗಯ್ಯ ಮುಂತಾದ ಹೆಸರುಗಳನ್ನೂ, ಹೆಣ್ಣುಮಕ್ಕಳಿಗೆ ಹನುಮಿ, ರಾಮಿ, ದೊಡ್ಡಮ್ಮ, ಚಿಕ್ಕಮ್ಮ, ರಾಜಿ, ತಾಯಮ್ಮ, ಕರಿಯಮ್ಮ, ಮಾಯಮ್ಮ, ತೋಪಿ, ಕಾಳಿ ಮುಂತಾದ ಹೆಸರುಗಳನ್ನೂ ಇಡುತ್ತಿದ್ದರು. ಆದರೆ ಇತ್ತೀಚೆಗೆ ಗಂಡುಮಕ್ಕಳಿಗೆ ಗೌತಮ, ರಾಹುಲ, ಸುಭಾಷ್, ಶಶಾಂಕ್, ತೇಜ ಇತ್ಯಾದಿ ಹೆಸರುಗಳನ್ನೂ ಹಾಗೂ ಹೆಣ್ಣುಮಕ್ಕಳಿಗೆ ಪ್ರಕೃತಿ, ಪ್ರಗತಿ, ಪೂರ್ವಿಕ, ಚಂದನ, ಚಿತ್ರ, ಬಿಂದು, ಇಂಚರ, ಮಾನಸ ಮುಂತಾದ ಹೆಸರುಗಳನ್ನೂ ಇಡುತ್ತಾರೆ. ಇತ್ತೀಚಿನ ದಿನಗಳಲ್ಲಿ ವಿದ್ಯಾವಂತರು ಬೌದ್ಧಧರ್ಮದೆಡೆಗೆ ಆಕರ್ಷಿತರಾಗುತ್ತಿದ್ದು, ಬೌದ್ಧಧರ್ಮದ ಹೆಸರುಗಳನ್ನಿಡುವುದನ್ನು ಕಾಣಬಹುದಾಗಿದ್ದು, ಮಕ್ಕಳ ಹೆಸರಿನ ಮುಂದೆ ಶಾಕ್ಯ, ಮೌರ್ಯ, ಪ್ರಬುದ್ಧ, ರಾಹುಲ ಮುಂತಾದ ಹೆಸರುಗಳನ್ನು ಸೇರಿಸುವುದು ರೂಢಿಯಾಗಿದೆ.

ಕೆಲವರು ಮಗು ಹುಟ್ಟಿದ ಒಂದು ವರ್ಷಕ್ಕೆ ಮನೆ ದೇವರ ದೇವಸ್ಥಾನದಲ್ಲಿ ಪೂಜೆ ಮಾಡಿಸಿ ಮಗುವಿಗೆ ಅಲ್ಲಿನ ಪುರೋಹಿತರಿಂದ ನಾಮಕರಣ ಮಾಡಿಸುತ್ತಾರೆ. ಆ ಸಂದರ್ಭದಲ್ಲಿ ಹೆಸರನ್ನು ಮಗುವಿನ ಕಿವಿಯಲ್ಲಿ ಮೂರು ಬಾರಿ ಹೇಳುತ್ತಾರೆ. ಹಾಗೆಯೇ ಇತರ ಮೂವರಿಂದ ಮಗುವಿನ ಹೆಸರನ್ನು ಕಿವಿಯಲ್ಲಿ ಮೂರು ಬಾರಿ ಹೇಳಿಸುತ್ತಾರೆ. ಇಲ್ಲಿಗೆ ನಾಮಕರಣ ಶಾಸ್ತ್ರ ಮುಗಿಯುತ್ತದೆ. ನಂತರ ದೇವಸ್ಥಾನದಲ್ಲಿ ಅಥವಾ ಒಂದೆಡೆ ಸೇರಿ ಕುರಿ ಅಥವಾ ಕೋಳಿಯನ್ನು ದೇವರಿಗೆ ಅರ್ಪಿಸಿ ಅಡುಗೆ ಮಾಡಿ ಮೊದಲು ದೇವರಿಗೆ ಎಡೆಯಿಟ್ಟು, ನಂತರ ನಾಮಕರಣಶಾಸ್ತ್ರಕ್ಕೆ ಬಂದ ಬಾಂಧವರೆಲ್ಲರೂ ಒಟ್ಟಿಗೆ ಊಟ ಮಾಡುತ್ತಾರೆ. ಇತ್ತೀಚಿನ ದಿನಗಳಲ್ಲಿ ಹುಟ್ಟಿದ ದಿನ, ಸಮಯವನ್ನು ನೋಡಿ ರಾಶಿಗನುಗುಣವಾಗಿ ಹಾಗೂ ಸಂಖ್ಯಾಶಾಸ್ತ್ರಕ್ಕನುಗುಣವಾಗಿ ಬ್ರಾಹ್ಮಣ ಪುರೋಹಿತರ ಸಲಹೆ ಪಡೆದು ಹೆಸರಿಡುವುದು ಸಾಮಾನ್ಯವಾಗಿದೆ.

**ಪ್ರೌಢಾವಸ್ಥೆ**

ಹೆಣ್ಣು ಋತುಮತಿಯಾದಾಗ ಆಕೆಯನ್ನು ಪ್ರತ್ಯೇಕವಾಗಿಟ್ಟು ಸ್ನಾನ ಮಾಡಿಸಿ ವಿಶಿಷ್ಟವಾದ ಆಹಾರ ಕೊಟ್ಟು ಆರೈಕೆ ಮಾಡುತ್ತಾರೆ. ಪ್ರತಿ ದಿನ ಬೆಳಿಗ್ಗೆ ಮತ್ತು ರಾತ್ರಿ ಕೊಬ್ಬರಿ, ಬೆಲ್ಲ, ಉದ್ದಿನ ಕಾಳು ಕೊಡುತ್ತಾರೆ. ಪ್ರತಿದಿನ ಅಥವಾ ಪ್ರತಿ ಮೂರುದಿನಕ್ಕೊಮ್ಮೆ ಬಿಸಿನೀರಿನ ಸ್ನಾನ ಮಾಡಿಸಿ ಸಾಂಬ್ರಾಣಿ ಹೊಗೆಯಿಂದ ತಲೆಕೂದಲು ಒಣಗಿಸಿ ಮಾಂಸದೂಟವನ್ನು ಉಣಬಡಿಸುತ್ತಾರೆ. ಹೀಗೆ ಮಾಡುವುದರಿಂದ ಮುಂದೆ ದೈಹಿಕವಾಗಿ ಬಳಲುವುದಿಲ್ಲ ಎಂಬ ನಂಬಿಕೆಯಿದೆ. ಹೆಣ್ಣು ಋತುಮತಿಯಾದ ಮೂರನೇ ದಿನಕ್ಕೆ 'ಸೊಪ್ಪು ಹಾಕುವ ಶಾಸ್ತ್ರ' ಮಾಡುತ್ತಾರೆ. ಅಂದರೆ ಹೆಣ್ಣಿನ ಸೋದರಮಾವ ತೆಂಗಿನಗರಿ, ಹಲಸು ಮತ್ತು ಹತ್ತಿಯ ಸೊಪ್ಪನ್ನು ತಂದು ಆ ವಸ್ತುಗಳಿಂದ ಗುಡಿಸಿಲನ್ನು ನಿರ್ಮಿಸುತ್ತಾನೆ. ನಂತರ ಋತುಮತಿಯಾದ ಹುಡುಗಿಯನ್ನು ಆ ಗುಡಿಸಿಲಿನಲ್ಲಿ ಕೂರಿಸುತ್ತಾರೆ. ಹಿಂದಿನ



ಕಾಲದಲ್ಲಿ ಋತುಮತಿಯಾದ ಹೆಣ್ಣುಮಗಳು ಆ ಗುಡಿಸಿಲಿನಲ್ಲೆ ವಾಸಿಸಬೇಕಿತ್ತು. ಆ ಗುಡಿಸಿಲು ಮನೆಯಿಂದ ಸ್ವಲ್ಪ ದೂರದಲ್ಲಿರುತ್ತಿತ್ತು ಹಾಗೂ ಆಕೆಯೊಂದಿಗೆ ಸಹಾಯಕ್ಕಾಗಿ ಮಹಿಳೆಯೊಬ್ಬಳಿರುತ್ತಿದ್ದಳು. ಆದರೆ ಇತ್ತೀಚೆಗೆ ಗುಡಿಸಿಲನ್ನು ಮನೆಯ ಮೂಲೆಯೊಂದರಲ್ಲಿ ಚಿಕ್ಕದಾಗಿ ನಿರ್ಮಿಸುತ್ತಾರೆ. ನಂತರ ಎಲೆ, ಅಡಿಕೆ, ಬೆಲ್ಲ, ಎಳ್ಳುಂಡೆ, ತಂಬಿಟ್ಟು, ಹಣ್ಣು ಹಂಪಲುಗಳು ಹಾಗೂ ನವಧಾನ್ಯಗಳನ್ನು ಒಂಭತ್ತು ತಟ್ಟೆಯಲ್ಲಿ ತುಂಬಿಸಿ ಮುತ್ತೈದೆಯರನ್ನು ಕರೆದು ಶಾಸ್ತ್ರ ಮಾಡಿಸಿ ಮಡಿಲಿಗೆ ತುಂಬುತ್ತಾರೆ. ಇದನ್ನು 'ಮಡಿಲು ತುಂಬುವುದು' ಅಥವಾ 'ಸೋಗಲು ಉಯ್ಯುವುದು' ಎಂದು ಕರೆಯುತ್ತಾರೆ. ನಂತರ ೯ನೇ ದಿನಕ್ಕೆ ಮನೆಗೆ ಸುಣ್ಣ ಬಣ್ಣ ಬಳಿದು ಸೂತಕ ತೆಗೆಯುತ್ತಾರೆ. ಈ ಸಂದರ್ಭದಲ್ಲಿ ಹುಡುಗಿಯ ಕೈಯಿಂದ ವೀಳ್ಯದೆಲೆಯನ್ನು ನೀರು ತುಂಬಿದ ಮಡಿಕೆಗೆ ಬಿಡಿಸುತ್ತಾರೆ ಹಾಗೂ ಆ ನೀರನ್ನು ತೆಗೆದುಕೊಂಡು ಹೋಗಿ ತೆಂಗಿನ ಮರಕ್ಕೆ ಬಿಡುತ್ತಾರೆ. ಅಲ್ಲಿಗೆ ಪ್ರೌಢಾವಸ್ಥೆ ಆಚರಣೆ ಮುಗಿಯುತ್ತದೆ. ಹಿಂದಿನ ಕಾಲದಲ್ಲಿ ಹೆಚ್ಚು ಕಡಿಮೆ ಒಂದು ವರ್ಷದವರೆಗೆ ಅಥವಾ ವಿವಾಹವಾಗುವವರೆಗೆ ಋತುಮತಿಯಾದ ಹುಡುಗಿಯನ್ನು ಹೊರಗಡೆ ಕಳುಹಿಸುತ್ತಿರಲಿಲ್ಲ. ಆದರೆ ಇತ್ತೀಚಿನ ದಿನಗಳಲ್ಲಿ ಈ ಪ್ರಮಾಣ ತುಂಬ ಕಡಿಮೆಯಾಗಿದೆ. ಸಾಮಾನ್ಯವಾಗಿ ಶಾಸ್ತ್ರವೆಲ್ಲ ಮುಗಿದ ಒಂದು ತಿಂಗಳ ನಂತರ ಶಾಲೆಗೆ ಕಳುಹಿಸುತ್ತಾರೆ.

**ವಿವಾಹ**

ಆದಿಕರ್ನಾಟಕ ಸಮುದಾಯದಲ್ಲಿ ಜಾತಿಗಳ ಮಟ್ಟದಲ್ಲಿ ಒಳಬಾಂಧವ್ಯ ಹಾಗೂ ಕುಲಗಳ ಮಟ್ಟದಲ್ಲಿ ಹೊರಬಾಂಧವ್ಯ ವಿವಾಹ ಪದ್ಧತಿಯನ್ನು ಕಾಣಬಹುದಾಗಿದೆ. ಇವರಲ್ಲಿ ಒಂದೇ ಕುಲದಲ್ಲಿ ವಿವಾಹ ಏರ್ಪಡುವುದಿಲ್ಲ ಏಕೆಂದರೆ ಒಂದೇ ಕುಲದವರು ಅಣ್ಣ ತಮ್ಮಂದಿರು ಎಂಬ ಭಾವನೆಯಿದೆ. ಹೆಣ್ಣುಮಕ್ಕಳಿಗೆ ೧೬ರಿಂದ ೧೮ ವರ್ಷದ ನಡುವೆ ಹಾಗೂ ಗಂಡುಮಕ್ಕಳಿಗೆ ೨೧ರಿಂದ ೨೫ ವಯಸ್ಸಿನ ನಡುವೆ ವಿವಾಹ ಮಾಡುತ್ತಾರೆ. ಮೊದಲು ಇವರಲ್ಲಿ ಬಾಲ್ಯವಿವಾಹ ಅಸ್ತಿತ್ವದಲ್ಲಿತ್ತು. ಇತ್ತೀಚಿನ ದಿನಗಳಲ್ಲಿ ಅಪರೂಪಕ್ಕೊಂದು ನಡೆಯುತ್ತದೆ. ಏಕಪತ್ನಿ ವಿವಾಹ ಪದ್ಧತಿ ಅಸ್ತಿತ್ವದಲ್ಲಿದೆ. ಆದರೆ ಮೊದಲ ಪತ್ನಿಗೆ ಮಕ್ಕಳಾಗದಿದ್ದರೆ ಎರಡನೇ ಮದುವೆಯಾಗುತ್ತಿದ್ದರು. ವಿಧವಾ ವಿವಾಹಕ್ಕೂ ಅವಕಾಶವಿತ್ತು; ಆದರೆ ಇತ್ತೀಚಿನ ದಿನಗಳಲ್ಲಿ, ಅದರಲ್ಲೂ ಗ್ರಾಮೀಣ ಪ್ರದೇಶದಲ್ಲಿ ವಿಧವಾ ವಿವಾಹ ಅಪರೂಪವಾಗಿದ್ದರೂ ಈ ಸಮುದಾಯದಲ್ಲಿ ವಿಧವಾ ವಿವಾಹಕ್ಕೆ ಸಾಮಾಜಿಕ ಮಾನ್ಯತೆಯಿದೆ.

ಸೋದರಮಾವ ಅಥವಾ ಸೋದರತ್ತೆಯ ಮಗ ಅಥವಾ ಮಗಳನ್ನು ಹಾಗೂ ಅಕ್ಕನ ಮಗಳನ್ನು ವಿವಾಹವಾಗುವುದು ರೂಢಿಯಲ್ಲಿದೆ. ಆದರೆ ಯಾವುದೇ ಕಾರಣಕ್ಕೂ ತಂಗಿಯ ಮಕ್ಕಳನ್ನು ವಿವಾಹವಾಗುವುದಿಲ್ಲ. ವಿವಾಹಕ್ಕೆ ಪೋಷಕರ, ಹಿರಿಯರ ಹಾಗೂ ವಧುವರರ ಸಮ್ಮತಿ ಅಗತ್ಯವಾಗಿರುತ್ತದೆ. ಪರಸ್ಪರ ಒಪ್ಪಿಗೆಯಾದರೆ ವರನ ಮನೆಯ ಕಡೆಯಿಂದ ಊರಿನ ಯಜಮಾನನೂ ಸೇರಿ ೫ ಅಥವಾ ೯ ಜನ ವಧುವಿನ ಮನೆಗೆ ಹೋಗಿ ವಧುವಿಗೆ ಹೂ ಮುಡಿಸುತ್ತಾರೆ. ನಂತರ 'ಒಪ್ಪಂದ' ಮಾಡಿಕೊಳ್ಳುತ್ತಾರೆ. ಇದನ್ನು 'ಒಪ್ಪಿನ ಮಾತು' ಎಂದು ಸಹ

ಕರೆಯುತ್ತಾರೆ. ಈ ಸಂದರ್ಭದಲ್ಲಿ ಸಾಮಾನ್ಯವಾಗಿ ವರದಕ್ಷಿಣೆಗೆ ಸಂಬಂಧಿಸಿದಂತಹ ವಿಷಯಗಳನ್ನು ಪ್ರಸ್ತಾಪಿಸುತ್ತಾರೆ. ನಂತರ ವರ ಹಾಗೂ ವಧುವಿನ ಕಡೆಯವರು ಒಳ್ಳೆಯ ದಿನ ಅಂದರೆ (ಶುಕ್ರವಾರ ಮತ್ತು ಭಾನುವಾರ) ಪುರೋಹಿತರ ಬಳಿ ಹೋಗಿ ವಿವಾಹದ ದಿನಾಂಕವನ್ನು ಗುರುತಿಸಿಕೊಳ್ಳುತ್ತಾರೆ ಹಾಗೂ ವಧು ವರರ ಪೋಷಕರು ಲಗ್ನ ಕಟ್ಟಿಸುವ ಬಗ್ಗೆ ಚರ್ಚಿಸಿ 'ಲಗ್ನ ಕಟ್ಟಿಸುತ್ತಾರೆ'. ಇದಕ್ಕೆ 'ಗಡಿ ಕಟ್ಟಿಸುವುದು' ಎಂದು ಸಹ ಕರೆಯುತ್ತಾರೆ. ನಂತರ ಧಾರಾ ಮುಹೂರ್ತ ಮೂರು ಅಥವಾ ಐದು ದಿನ ಇರುವಾಗ ವಧುವಿಗೆ ವಧುವಿನ ಮನೆಯಲ್ಲಿ ಹಾಗೂ ವರನಿಗೆ ವರನ ಮನೆಯಲ್ಲಿ ಅರಿಶಿನ, ಸೀಗೆಪುಡಿಯನ್ನು ಹರಳೆಣ್ಣೆಯೊಂದಿಗೆ ಮಿಶ್ರಣ ಮಾಡಿ ಮೈ ಕೈಗೆ ಹಚ್ಚಿ ಬಿಸಿ ನೀರಿನಿಂದ ಸ್ನಾನ ಮಾಡಿಸುತ್ತಾರೆ. ಮೊದಲಿಗೆ ವಧು ಅಥವಾ ವರನ ತಂದೆ ತಾಯಿ ವಧು ಅಥವಾ ವರನ ತಲೆಗೆ ನೀರು ಹಾಕುತ್ತಾರೆ ನಂತರ ಬಂಧು ಬಳಗದವರೆಲ್ಲ ಒಬ್ಬರಾದ ಮೇಲೆ ಒಬ್ಬರಂತೆ ನೀರು ಹಾಕುತ್ತಾರೆ. ಇದನ್ನು 'ಬಳಗದ ನೀರು' ಎಂದು ಕರೆಯುತ್ತಾರೆ. ಸ್ನಾನ ಮಾಡಿಸಿದ ನಂತರ ವಧುವರರಿಗೆ ಹೊಸ ಬಟ್ಟೆ ತೊಡಿಸಿ, ಕಳಸ ಪೂಜಿಸಿ ೫ ಜನ ಮುತ್ತೈದೆಯರಿಂದ ಅಕ್ಕಿ ಸೋಸುವ ಮತ್ತು ಭತ್ತ ಕುಟ್ಟುವ ಶಾಸ್ತ್ರವನ್ನು ಮಾಡಿಸುತ್ತಾರೆ. ಇದಕ್ಕೆ 'ಒನಕೆ ಶಾಸ್ತ್ರ' ಎಂದು ಕರೆಯುತ್ತಾರೆ. ಈ ಸಂದರ್ಭದಲ್ಲಿ ಸಮುದಾಯದ ಹಿರಿಯ ಮಹಿಳೆಯರು ಶೋಭಾನೆ ಪದವನ್ನು ಹಾಡುತ್ತಾರೆ. ನಂತರ ವಿವಾಹವಾಗುವವರೆಗೆ ವಧುವರರು ಹೊರಗಡೆ ಹೋಗುವಂತಿಲ್ಲ. ಸ್ತಂಭ ಮುಹೂರ್ತದ ದಿನ ಸೋದರಮಾವನಿಂದ ಮುಹೂರ್ತದ ಕಂಬ ತರಿಸಿ ಚಪ್ಪರ ಹಾಕಿ ಅದರಲ್ಲಿ ಮುಹೂರ್ತ ಕಂಬವನ್ನು ನೆಟ್ಟು ಪೂಜೆ ಮಾಡಿ ದೀಪ ಬೆಳಗಿಸುತ್ತಾರೆ. ಮಾರನೇ ದಿನ ಅಂದರೆ ಧಾರಾ ಮುಹೂರ್ತದ ದಿನ ವರನು ವಧುವಿಗೆ ತಾಳಿ ಕಟ್ಟುವ ಮೂಲಕ ವಿವಾಹ ಪೂರ್ಣಗೊಳ್ಳುತ್ತದೆ. ವಿವಾಹವನ್ನು ಸಾಮಾನ್ಯವಾಗಿ ಅದೇ ಸಮುದಾಯದ ದಾಸಪ್ಪ ಅಥವಾ ಗುಡ್ಡಪ್ಪ ಎಂಬುವವರು ನೆರವೇರಿಸುತ್ತಾರೆ. ಮೊದಲು ವರನ ಮನೆಯಲ್ಲಿ ವಿವಾಹವೇರ್ಪಡುತ್ತಿತ್ತು. ಆದರೆ ಈಗ ಬಹುಪಾಲು ವೆಚ್ಚವನ್ನು ವಧುವಿನ ಕಡೆಯವರು ವಹಿಸಿಕೊಂಡು ಕಲ್ಯಾಣ ಮಂಟಪದಲ್ಲಿ ಮಾಡುತ್ತಾರೆ. ಇತ್ತೀಚೆಗೆ ವಿವಾಹ ಕಾರ್ಯ ನೆರವೇರಿಸಲು ಬ್ರಾಹ್ಮಣ ಪುರೋಹಿತರನ್ನು ಕರೆಸುವುದು ರೂಢಿಯಲ್ಲಿದೆ. ವಿವಾಹದ ನಂತರ ಎಲ್ಲರಿಗೂ ಅನುಕೂಲಕರವಾದ ದಿನವೊಂದನ್ನು ಗುರುತಿಸಿಕೊಂಡು 'ಬೀಗರ ಔತಣ'ವನ್ನು ಏರ್ಪಡಿಸುತ್ತಾರೆ. ಹೆಣ್ಣಿನ ಮನೆಯವರು ವಿವಾಹ ಮಾಡಿಕೊಟ್ಟರೆ ಗಂಡಿನ ಮನೆಯವರು ಹಾಗೂ ಗಂಡಿನ ಮನೆಯವರು ವಿವಾಹ ಮಾಡಿಕೊಟ್ಟರೆ ಹೆಣ್ಣಿನ ಮನೆಯವರು ಬೀಗರ ಔತಣವನ್ನು ಏರ್ಪಡಿಸುತ್ತಾರೆ. ಬೀಗರ ಔತಣಕ್ಕೆ ಸಾಮಾನ್ಯವಾಗಿ ಮಾಂಸಾಹಾರವನ್ನು ಅಡುಗೆ ಮಾಡಲಾಗುತ್ತದೆ. ವಿವಾಹಿತೆ ಮಹಿಳೆ ತಾಳಿ, ಕಾಲುಂಗುರ, ಹಣೆಗೆ ಅರಿಶಿನ ಕುಂಕುಮ ಹಾಗೂ ಕೈಗೆ ಗಾಜಿನ ಬಳೆಗಳನ್ನು ತೊಡುತ್ತಾಳೆ. ವಿವಾಹ ವಿಚ್ಛೇದನಕ್ಕೆ ಅವಕಾಶವಿರುವಂತೆ ವಿಚ್ಛೇದಿತರಿಗೆ, ವಿಧವೆ, ವಿಧುರರ ಮರುವಿವಾಹಕ್ಕೂ ಅವಕಾಶವಿದೆ. ಆದರೆ ಅಂತಹ ವಿವಾಹಗಳು ಸರಳವಾಗಿರುತ್ತವೆ. ಇದನ್ನು 'ಕೂಡುವಳಿ' ಎಂದು ಕರೆಯಲಾಗುತ್ತದೆ.

**ಸೀಮಂತ**

ಜನನ ಪೂರ್ವ ಆಚರಣೆಯನ್ನು ಸೀಮಂತ ಎಂದು ಕರೆಯುತ್ತಾರೆ. ವಿವಾಹದ ನಂತರ ಹೆಣ್ಣು ಚೊಚ್ಚಲ ಗರ್ಭ ಧರಿಸಿದಾಗ ೭ನೇ ಅಥವಾ ೯ನೇ ತಿಂಗಳಿಗೆ ಸೀಮಂತವನ್ನು ಗಂಡನ ಮನೆಯಲ್ಲಿ ನೆರವೇರಿಸಲಾಗುತ್ತದೆ. ಗರ್ಭಿಣಿಗೆ ಹೊಸ ಸೀರೆಯನ್ನುಡಿಸಿ, ಆಕೆ ಬಯಸಿದ ತಿನಿಸುಗಳನ್ನು, ಅಕ್ಕಿ–ಬೆಲ್ಲ, ಹಣ್ಣು ಹಂಪಲು ಹಾಗೂ ಧವಸ ಧಾನ್ಯಗಳನ್ನು ೫ ತಟ್ಟೆಗಳಲ್ಲಿ ತುಂಬಿಸಿಡುತ್ತಾರೆ. ನಂತರ ಮುತ್ತೈದೆಯರಿಂದ ಶಾಸ್ತ್ರ ಮಾಡಿಸಿ ಹೆಣ್ಣಿನ ಮಡಿಲಿಗೆ ತಟ್ಟೆ ತುಂಬಿಸುತ್ತಾರೆ. ಇದನ್ನು 'ಮಡಿಲು ತುಂಬುವ ಶಾಸ್ತ್ರ' ಎಂದು ಕರೆಯುತ್ತಾರೆ. ನಂತರ ಗರ್ಭಿಣಿ ಸ್ತ್ರೀಯು ಹಿರಿಯರ ಕಾಲಿಗೆ, ಅತ್ತೆ ಮಾವಂದಿರ ಕಾಲಿಗೆ ನಮಸ್ಕರಿಸುತ್ತಾಳೆ. ಇಲ್ಲಿಗೆ ಒಂದು ಹಂತದ ಶಾಸ್ತ್ರ ಮುಗಿಯುತ್ತದೆ. ನಂತರ ಬಂದವರಿಗೆಲ್ಲ ಸಿಹಿ ಊಟ ಹಾಕುತ್ತಾರೆ. ಊಟದ ನಂತರ ಎಲ್ಲರೂ ಗರ್ಭಿಣಿ ಸ್ತ್ರೀಯನ್ನು ಸಂಭ್ರಮದಿಂದ ತವರು ಮನೆಗೆ ಕಳುಹಿಸಿಕೊಡುತ್ತಾರೆ. ಸಾಮಾನ್ಯವಾಗಿ ಮೊದಲ ಹೆರಿಗೆ ಹೆಣ್ಣಿನ ತಾಯಿಯ ಮನೆಯಲ್ಲಿ ನೆರವೇರುತ್ತದೆ.

**ಮರಣ ಸಂಸ್ಕಾರ**

ಆದಿಕರ್ನಾಟಕ ಸಮುದಾಯದಲ್ಲಿ ಯಾರಾದರೂ ಮರಣ ಹೊಂದಿದರೆ ಇತರ



ಸಮುದಾಯದವರಂತೆ ಮನೆಯ ಮುಂದೆ ಬೆಂಕಿ ಹಾಕುತ್ತಾರೆ. ಬಂಧು–ಬಾಂಧವರಿಗೆ, ನೆಂಟರಿಗೆ, ಇತರರಿಗೆ ತಿಳಿಸುತ್ತಾರೆ. ಬಂಧು–ಬಳಗದವರು ಸೇರುತ್ತಿದ್ದಂತೆ ಮೃತದೇಹಕ್ಕೆ ಅರಿಶಿನ ಹಚ್ಚಿ ಸ್ನಾನ ಮಾಡಿಸುತ್ತಾರೆ. ಬಂದವರೆಲ್ಲ ಪ್ರತಿಯೊಬ್ಬರೂ ಶವದ ತಲೆಗೆ ನೀರು ಹುಯ್ಯುತ್ತಾರೆ. ಇದನ್ನೂ ಕೂಡ ಬಳಗದ ನೀರು ಎಂದು ಕರೆಯುತ್ತಾರೆ. ನಂತರ ಹೊಸ ಬಟ್ಟೆಯುಡಿಸಿ ಎಲ್ಲರೂ ಪೂಜೆ ಮಾಡಿದ ನಂತರ ಕುಟುಂಬದ ಸದಸ್ಯರಿಗೆ ಶವದ ಕೈಯಿಂದ ಧವಸ ಧಾನ್ಯಗಳನ್ನು ಕೊಡಿಸುತ್ತಾರೆ. ಈ ವಿಧಿ ವಿಧಾನಗಳು ಮುಗಿದ ನಂತರ ಬಿದಿರಿನಿಂದ ಸಿದ್ಧಪಡಿಸಿದ ಚಟ್ಟದ ಮೇಲೆ ಮಲಗಿಸಿ ಅಥವಾ ಬಿದಿರಿನಿಂದ ತಯಾರಿಸಿದ ಮಂಟಪದೊಳಗೆ ಕೂರಿಸಿ ಪೂಜೆ ಮಾಡಿ ಸ್ಮಶಾನಕ್ಕೆ ಹೊತ್ತೊಯ್ಯುತ್ತಾರೆ. ಈ ಮಂಟಪಕ್ಕೆ 'ಕುರ್ಜು' ಎಂದು ಕರೆಯುತ್ತಾರೆ. ವಿವಾಹಿತರನ್ನು ಜೋಡಿ ಬಡಿಯಲ್ಲಿಯೂ ಹಾಗೂ ಅವಿವಾಹಿತರನ್ನು ಒಂಟಿ ಬಡಿಯಲ್ಲಿಯೂ ಹೊತ್ತೊಯ್ಯುತ್ತಾರೆ. ಈ ಸಮುದಾಯ ದವರಲ್ಲಿ ಸತ್ತವರನ್ನು ಸಾಮಾನ್ಯವಾಗಿ ಹೂಳುವ ಪದ್ಧತಿ ರೂಢಿಯಲ್ಲಿದೆ. ಆದರೆ ಆತ್ಮಹತ್ಯೆ ಮಾಡಿಕೊಂಡರೆ ಅಥವಾ ಇತರ ಅಸಹಜ ಸಾವಿನಿಂದ ಸತ್ತರೆ ಸುಡುವ ಪದ್ಧತಿಯಿದೆ. ಹೂಳುವಾಗ ೬ ಅಡಿ ಉದ್ದ ಹಾಗೂ ೩ ಅಡಿ ಅಗಲದ ಗುಂಡಿ ತೆಗೆದು ದಕ್ಷಿಣಕ್ಕೆ ತಲೆಯಿಟ್ಟು ಹೂಳುತ್ತಾರೆ. ಹೂಳುವಾಗ ಅವರು ಬಳಸುತಿದ್ದ ವಸ್ತುಗಳನ್ನು ಜೊತೆಯಲ್ಲಿಡುತ್ತಾರೆ. ದೀಕ್ಷೆ ಪಡೆದ ಗುರುಗಳು ಅಥವಾ ಜೋಗಿಗಳು, ದಾಸಪ್ಪಂದಿರು ಮರಣ ಹೊಂದಿದರೆ, ಅವರನ್ನು ಪೂರ್ವ ದಿಕ್ಕಿಗೆ ಮುಖ ಮಾಡಿ ಕೂರಿಸಿ ಹೂಳುವ ಪದ್ಧತಿಯಿದೆ. ಶವಸಂಸ್ಕಾರದ ನಂತರ ಮರಣ ಹೊಂದಿದವರ ಮನೆಗೆ ಎಲ್ಲರೂ ಬಂದು ಹುಣಸೆ ಹುಳಿಯ ನೀರನ್ನು ಮುಟ್ಟಿ ದೀಪ ನೋಡಿ ಅಕ್ಕಿ ಕಾಳನ್ನು ಮನೆಯೊಳಕ್ಕೆ ಎಸೆದು ಹೋಗುತ್ತಾರೆ.

ಶವಸಂಸ್ಕಾರವಾದ ಮೂರನೇ ದಿನಕ್ಕೆ ಹಾಲು–ತುಪ್ಪ ಕಾರ್ಯವನ್ನು ಹಾಗೂ ೧೧ನೇ ದಿನಕ್ಕೆ ತಿಥಿ ಕಾರ್ಯವನ್ನು ನೆರವೇರಿಸುತ್ತಾರೆ. ತಿಥಿ ಕಾರ್ಯಕ್ಕೆ ಸಾಮಾನ್ಯವಾಗಿ ಮಾಂಸದೂಟವನ್ನು ತಯಾರಿಸಿ ಎಡೆ ಇಡುತ್ತಾರೆ. ಅವರು ಇಷ್ಟಪಡುತ್ತಿದ್ದ ತಿಂಡಿ ತಿನಿಸುಗಳನ್ನು ಸಮಾಧಿಯ ಮೇಲೆ ಇಡುತ್ತಾರೆ. ಕಾಗೆಗಳು ಬಂದು ತಿಂದರೆ ಕಾಗೆಯ ರೂಪದಲ್ಲಿ ಸತ್ತ ವ್ಯಕ್ತಿ ಬಂದು ತಿಂದರೆಂದು ನಂಬುತ್ತಾರೆ. ನಂತರ ಪ್ರಸಾದ ರೂಪದಲ್ಲಿ ಎಲ್ಲರೂ ಊಟ ಮಾಡುತ್ತಾರೆ.

ಹೀಗೆ ಆದಿಕರ್ನಾಟಕ ಸಮುದಾಯದವರ ಜೀವನಾವರ್ತಕ ಆಚರಣೆಗಳು ಬದಲಾಗುತ್ತಿರುವ ಸಮಾಜದಲ್ಲಿ ಸಂಸ್ಕೃತೀಕರಣಗೊಳ್ಳುತ್ತಿವೆ. ಈ ಮೊದಲು ಇತರ ಸಮುದಾಯದ ಆಚರಣೆಗಳಿಗೆ ಹೋಲಿಸಿದಂತೆ ಹೆಚ್ಚಿನ ವಿಭಿನ್ನತೆಗಳಿರುತ್ತಿದ್ದವು. ಆದರೆ ಇತ್ತೀಚಿನ ದಿನಗಳಲ್ಲಿ ಸಾಮಾಜೀಕರಣ ಪ್ರಕ್ರಿಯೆ ಮತ್ತು ಅನುಕರಣೆ ಯಿಂದಾಗಿ ಆದಿಕರ್ನಾಟಕ ಸಮುದಾಯದ ಆಚರಣೆಗಳಲ್ಲಿ ಸಾಮ್ಯತೆಯನ್ನು ಕಾಣಬಹುದಾಗಿದೆ.

**ಡಾ|| ಕೆ. ಶೈಲಜ**
ನಂ. ೫೬, 'ರಜತಾದ್ರಿ ನಿಲಯ', ಬೆಂಡರವಾಡಿ ಗ್ರಾಮ, ಗುಂಡ್ಲುಪೇಟೆ ತಾಲ್ಲೂಕು,
ಚಾಮರಾಜನಗರ ಜಿಲ್ಲೆ

# ಅನ್ನ, ಹಸಿವೆ ಹಾಗೂ ಸಾಮಾಜಿಕ ಧೋರಣೆಗಳು

ಭಾರತದ ಸಂವಿಧಾನ ಮಾರ್ಗದರ್ಶಿ ತತ್ವಗಳು ಸೂಚಿಸುವಂತೆ ರಾಜಕೀಯ ಸ್ವಾತಂತ್ರ್ಯದೊಡನೆ ನಾಗರಿಕರಿಗೆ ಆರ್ಥಿಕ ಸ್ವಾತಂತ್ರ್ಯವನ್ನು ದೊರಕಿಸಿಕೊಡುವುದು ಸಂವಿಧಾನದ ಶಿಲ್ಪಿ ಡಾ॥ ಅಂಬೇಡಕರ್ ಅವರ ಆಶಯವಾಗಿತ್ತು. ರಾಷ್ಟ್ರದ ಬಾಹ್ಯ ಸುರಕ್ಷತೆಯನ್ನು ಕಾಪಾಡುವುದು ಎಷ್ಟು ಮಹತ್ವದ್ದಾಗಿದೆ, ಅಷ್ಟೇ ಮಹತ್ವ ದೇಶದ ಪ್ರತಿಯೊಬ್ಬ ಪ್ರಜೆಗೂ ಆಹಾರ ಭದ್ರತೆಯನ್ನು ಒದಗಿಸಿಕೊಡುವುದಾಗಿದೆ. ಭಾರತದ ಬಡತನ ಹಾಗೂ ಹಸಿವೆಗಳ ಬಗ್ಗೆ ಮನನೊಂದು ಸುಮಾರು ೧೨೫ ವರ್ಷಗಳ ಹಿಂದೆಯೇ "ಹಸಿದ ಹೊಟ್ಟೆಗೆ ಧರ್ಮ ಬೋಧನೆ ಮಾಡುವುದು ಅಪರಾಧ" ಎಂಬ ವಿವೇಕಾನಂದರ ವಾಣಿ ಎಷ್ಟು ಅರ್ಥಪೂರ್ಣ ಹಾಗೂ ಪ್ರಸ್ತುತವಾಗಿದೆ! ಅನ್ನ ಮಾನವನ ಮೂಲಭೂತ ಅವಶ್ಯಕತೆ ಹಾಗೂ ಹಕ್ಕು. ಇಂತಹ ಗಂಭೀರ ವಿಷಯದ ಬಗ್ಗೆ ಪ್ರತಿಗಾಮಿ ವಿಚಾರ ಧಾರೆಗಳಿಂದ ಕುರುಡರಾಗದೆ ವೈಜ್ಞಾನಿಕ ಹಾಗೂ ಜನಪರ ಧೋರಣೆಗಳು ಹಾಗೂ ಆಚರಣೆಗಳು ನಮಗಿಂದು ಬೇಕಾಗಿವೆ.

**ಡಾ॥ ರಾಜೇಂದ್ರ ಪೋದ್ದಾರ**

ಅನ್ನ ಮಾನವನ ಬದುಕಿನ ಮೂಲಭೂತ ಅವಶ್ಯಕತೆಗಳಲ್ಲಿ ಅತೀ ಮುಖ್ಯವಾದದ್ದು. ಅನ್ನದ ಅಭಾವದಿಂದಾಗಿ ನಿರಂತರ ಹಸಿವೆಯಿಂದ ಬಳಲುವ ಪ್ರಜೆಯ ಭೌತಿಕ, ಬೌದ್ಧಿಕ ಹಾಗೂ ಕರ್ತೃತ್ವ ಶಕ್ತಿಗಳು ಸಹಜವಾಗಿಯೇ ಕುಂಠಿತಗೊಳ್ಳುತ್ತವೆ ಎಂಬುದು ಸಾಮಾನ್ಯ ಜ್ಞಾನ. ಅಸಹಾಯಕರಾಗಿ ಹಸಿವೆಗೆ ಬಲಿಯಾಗುವ ಪ್ರಜೆಗಳಿಂದ ರಾಷ್ಟ್ರ ಪ್ರೇಮ ಅಥವಾ ರಾಷ್ಟ್ರ ನಿರ್ಮಾಣದ ಅದಮ್ಯ ಶಕ್ತಿಯನ್ನು ಬಯಸುವುದಾದರೂ ಹೇಗೆ? ಒಂದೆಡೆ ಅಂತರರಾಷ್ಟ್ರೀಯ ಮಟ್ಟದಲ್ಲಿ ಜ್ಞಾನ, ವಿಜ್ಞಾನ, ತಂತ್ರಜ್ಞಾನ, ಮಾಹಿತಿ ತಂತ್ರಜ್ಞಾನ, ಮಿಲಿಟರಿ ಪರಾಕ್ರಮಗಳಲ್ಲಿ ವೈಭವವನ್ನು ಸಾರುವ ಭಾರತ ಇನ್ನೊಂದೆಡೆ ಹಸಿವೆ ದಾರಿದ್ರ್ಯಗಳ ಸಂಕಟವನ್ನು ಹೇಗೆ ಅರಗಿಸಿಕೊಳ್ಳುತ್ತದೆ? ಇತ್ತೀಚಿನ ದಿನಗಳಲ್ಲಿ ಬಡತನ, ಅನ್ನ ಹಾಗೂ ಹಸಿವೆಯ ಸಂಕಷ್ಟಗಳಿಗೆ ಸಂಬಂಧಿಸಿದ ಸಾಮಾಜಿಕ ಧೋರಣೆಗಳು ಕಳವಳಕಾರಿಯಾಗಿವೆ. ಹಸಿವಿನ ಈ ಕಳವಳಗಳ ಮಧ್ಯೆ ಕೆಲವು ಕಠೋರ ಸತ್ಯಗಳು ನಮ್ಮ ಪ್ರಜ್ಞೆಗೆ ಸವಾಲಾಗಿವೆ. ದೇಶ ಅತ್ಯಧಿಕ ಆಹಾರ ಉತ್ಪಾದನೆ (೨೭೭ ದಶಲಕ್ಷ ಟನ್)ಯನ್ನು ಸಾಧಿಸಿರುವುದನ್ನು ಹಾಗೂ ಅಪಾರ ಧಾನ್ಯದ ಸಂಗ್ರಹ (೬೦ ದಶಲಕ್ಷ ಟನ್) ಹೊಂದಿರುವ ಮಾಹಿತಿಗಳನ್ನು ಸರಕಾರಗಳು ಹೆಮ್ಮೆಯಿಂದ ಹೊರಗೆಡಹುತ್ತಿರಬೇಕಾದರೆ ಪ್ರತಿನಿತ್ಯ ದೇಶದ ಸುಮಾರು ೨೫ ಕೋಟಿ ಜನ ಒಂದು ಹೊತ್ತು ಊಟಕ್ಕೂ ಗತಿ ಇಲ್ಲದೆ ಹಸಿವೆಯಿಂದ ಬಳಲಬೇಕಾಗಿದೆ! ಇಂತಹ ಕಠೋರ ಸತ್ಯ ಹಾಗೂ ವಿಪರ್ಯಾಸಗಳನ್ನು ಒಪ್ಪಿಕೊಳ್ಳುವುದಾಗಲೀ ಅವುಗಳನ್ನು ವಿವರಿಸುವ ಅಥವಾ ಸೂಕ್ತ ಪರಿಹಾರಗಳನ್ನು ಪ್ರತಿಪಾದಿಸುವ ಧೈರ್ಯವಾಗಲಿ ಇಲ್ಲದಿರುವುದು ಭಾರತೀಯ ಬುದ್ಧಿಜೀವಿಗಳ ವೈಫಲ್ಯದ ಸಂಕೇತವಾಗಿದೆ.

ಹಸಿವೆಗೆ ಸಂಬಂಧಿಸಿದ ಸುಮಾರು ನಾಲ್ಕು ದಶಕಗಳ ಹಿಂದಿನ ಘಟನೆಯೊಂದನ್ನು ನೆನೆಸಿಕೊಂಡಾಗ ಕರುಳು ಕಿತ್ತುಬರುತ್ತದೆ, ಕಣ್ಣುಗಳು ಹನಿಗೂಡುತ್ತವೆ. ನಮ್ಮೂರಿನಲ್ಲಿ ಒಂದು ಬಡಕುಟುಂಬ. ಆ ಕುಟುಂಬದಲ್ಲಿ ತಂದೆ, ತಾಯಿ, ಮಗಳು ಹಾಗೂ ನಾಲ್ಕು ಜನ ಗಂಡುಮಕ್ಕಳು. ಬರಗಾಲ, ನಿರುದ್ಯೋಗ, ಬಡತನ, ತುತ್ತು ಅನ್ನಕ್ಕೆ ಗತಿಯಿಲ್ಲದ ಸ್ಥಿತಿ, ಹಾಗೊಂದು ವೇಳೆ ಕಷ್ಟಪಟ್ಟು ದುಡಿದು ನಾಲ್ಕು ಕಾಸು ಗಳಿಸಿದರೂ ತುತ್ತಿನ ಚೀಲ ತುಂಬಿಸಿಕೊಳ್ಳಲು ಅನ್ನವೇ ದೊರೆಯದ ಬರಗಾಲದ ದಾರುಣ ಪರಿಸ್ಥಿತಿ. ಹೀಗಿದ್ದಾಗ ಅದೊಂದು ಕರಾಳ ದಿನ, ನಾನು ನಮ್ಮ ತಾಯಿ ಜೊತೆಗೆ ಹೊಲದಲ್ಲಿ ಕೆಲಸ ಮಾಡುತ್ತಿರಬೇಕಾದರೆ, ಬೇಸಿಗೆಯ ಬವಣೆಗೆ ಮರದ ನೆರಳಿನ ಆಶ್ರಯಕ್ಕೆ ಬಂದಾಗ ಕಂಡ ಚಿತ್ರಣ ಹೃದಯವಿದ್ರಾವಕವಾಗಿತ್ತು. ನಮ್ಮ ಜೊತೆ ಕೆಲಸದಲ್ಲಿ ತೊಡಗಿದ್ದ ಕೆಲಸದಾಳು ಕೂಡ ನೆರಳಿನಾಶ್ರಯಕ್ಕೆ ಸರಿದುಬಂದಿದ್ದ. ನೋಡನೋಡುತ್ತಿದ್ದಂತೆ ಆ ಮನುಷ್ಯ ವಾಂತಿ ಮಾಡಿಕೊಳ್ಳಲಾರಂಭಿಸಿದ್ದನ್ನು ನೋಡಿ ದಿಗಿಲಾಯಿತು. ನಮ್ಮಮ್ಮ "ಏನಾಯಿತಪ್ಪಾ" ಎಂದು ಕೇಳುತ್ತಿದ್ದಂತೆ ಮನುಷ್ಯನ ಒಡಲಾಳದಿಂದ ಹೊರಗೆ ನುಗ್ಗಿ ಬಂದದ್ದು ಬೇವಿನ ಬೀಜಗಳು. ಅಮ್ಮ ಅವನನ್ನು ವಿಚಾರಿಸಲಾಗಿ ಮುಂಜಾನೆ ಕೆಲಸಕ್ಕೂ ಬರುವ ಮುಂಚೆ ಮನೆಯಲ್ಲಿ ತಿನ್ನಲು ಏನೂ ಇರದೆ, ಅವನು ನೇರವಾಗಿ ಹೊಲಕ್ಕೆ ಬಂದು ಕೆಲಸ ಪ್ರಾರಂಭಿಸಿದಾಗ ಹೊಟ್ಟೆ ಚುರುಗುಟ್ಟಿದೆ. ಹಸಿವೆಯ ಸಂಕಟ ತಾಳಲಾರದೆ ಆತ ಹಣ್ಣಾದ ಸಿಹಿ ಬೇವಿನಹಣ್ಣುಗಳನ್ನೇ ತಿಂದುಬಿಟ್ಟಿದ್ದ. ಮಧ್ಯಾಹ್ನದ ಬಿಸಿಲಿನ ತಾಪಕ್ಕೆ ಹೊಟ್ಟೆ ಉಬ್ಬರಿಸಿ ಆ ಸಹೋದರ ಬೇವಿನ ಬೀಜಗಳನ್ನು ಹೊರಹಾಕಿದ್ದನ್ನು ಕಣ್ಣಾರೆ ನೋಡಿದ್ದು ನನ್ನ ಜೀವನದ ಅತೀ ಕಹಿ ಘಟನೆಗಳಲ್ಲೊಂದಾಗಿದೆ.





ಆ ಕಾರಣಕ್ಕಾಗಿಯೇ ಇಂದಿಗೂ ನನ್ನ ಹೊಟ್ಟೆ ತುಂಬಿದರೂ ಹಸಿದ ಹೊಟ್ಟೆಯ ಹಲಬು ನನಗೆ ಅರ್ಥವಾಗುವುದು.

ಸ್ವಾತಂತ್ರ್ಯ ದೊರೆತು ದೇಶ ವಿಭಜನೆಯಾದಾಗಲೂ ಇದೇ ಹಸಿವು ದೇಶವನ್ನು ಕಾಡಿತ್ತು. ದೇಶ ವಿಭಜನೆ, ಕೋಮು ದಳ್ಳುರಿ, ಕೋಟಿ ಕೋಟಿ ಹಸಿದ ಹೊಟ್ಟೆಗಳ ಆಕ್ರಂದನದ ಮಧ್ಯೆಯೇ ಅಮೇರಿಕಾದಂತಹ ಮುಂದುವರಿದ ದೇಶದೆದುರು ಅನ್ನದ ಪಾತ್ರೆ ಹಿಡಿದು (PL 480) ನಿಲ್ಲಬೇಕಾದ ಅಸಹಾಯಕತೆ. ಅಂದಿನಿಂದ ದಶಕಗಳವರೆಗೆ ಅಮೇರಿಕಾದ ಹಡಗುಗಳು ಹೊತ್ತು ತರುವ ಗೋಧಿಗಾಗಿ ದೇಶದ ಬಡವ, ಕಾರ್ಮಿಕ ಹಾಗೂ ವಿದ್ಯಾರ್ಥಿಗಳ ಹಸಿದ ಹೊಟ್ಟೆಗಳು ಕಾಯಬೇಕಾಗಿತ್ತು, ಸರಕುಡಬ್ಬಗಳ ಮೇಲಿನ ಅಮೇರಿಕಾದ (USAID) ಹಸ್ತಲಾಘವದ ಗುರುತು ಇನ್ನೂ ಅವಮಾನ ಹಾಗೂ ಅಸಹಾಯಕತೆಗಳ ರೂಪದಲ್ಲಿ ಮನಸ್ಸಿನಲ್ಲಿ ಮಾಸಳಿಯದೆ ಉಳಿದಿದೆ. ಅಮೇರಿಕೆಯಿಂದ ಬಂದ ಗೋಧಿ ರವೆ ಹಾಗೂ ಎಣ್ಣೆಯಿಂದ ತಯಾರಾಗುತ್ತಿದ್ದ ಉಪ್ಪಿಟ್ಟಿನ ವಾಸನೆ ಹಾಗೂ ರುಚಿಗಾಗಿ ಹಸಿದ ಹೊಟ್ಟೆಗೆ ಸಾಂತ್ವನ ನೀಡಲು ಶಾಲಾ ಮಕ್ಕಳು ಸಾಲುಸಾಲಾಗಿ ತಟ್ಟೆಗಳನ್ನು ಹೊಟ್ಟೆಗಂಟಿಸಿಕೊಂಡು ನಿಂತಿದ್ದು ಮರೆಯುವಂತಿಲ್ಲ.

ಈ ಹಿಂದಿನ ಕಹಿ ಘಟನೆಗಳನ್ನು ಮೆಲುಕುಹಾಕಿದ್ದರ ಉದ್ದೇಶ ಯಾರಲ್ಲೂ ಕಹಿ ಭಾವನೆಗಳನ್ನು ಕೆರಳಿಸುವುದಲ್ಲ. ಬದಲಿಗೆ ಇಂದು ಹಾಗೂ ಮುಂದೆ ಯಾರೂ ಇಂತಹ ನೋವನ್ನು ಅನುಭವಿಸದಿರಲಿ ಎಂಬುದು ಸದಾಶಯ.

ಹಸಿವಿನ ಬವಣೆಯನ್ನು ನೀಗಿಸಲು ಅಂದಿನ ಪ್ರಧಾನಿ ಶ್ರೀಮತಿ. ಇಂದಿರಾ ಗಾಂಧಿಯವರ ನೇತೃತ್ವದಲ್ಲಿ ಡಾ॥ ಸಿ. ಸುಬ್ರಮಣ್ಯಮ್, ಡಾ॥ ಬಾಬು ಜಗಜೀವನ ರಾಂ, ಕೃಷಿ ತಜ್ಞ ಡಾ॥ ಸ್ವಾಮಿನಾಥನ್ ಹಸಿರು ಕ್ರಾಂತಿಗೆ ನಾಂದಿ ಹಾಡಿದ್ದರು. ಹಸಿದ ಹೊಟ್ಟೆಗಳಿಗೆ ಅನ್ನ ನೀಡಲು ದೇಶದ ಕೃಷಿಕರ ಹಾಗೂ ಕೃಷಿತಜ್ಞರ ಶ್ರಮ ಸಾರ್ಥಕವಾಗಿತ್ತು. ೧೯೫೦ರಲ್ಲಿ ಕೇವಲ ೫೦ ದಶಲಕ್ಷ ಟನ್‌ಗಳಷ್ಟು ಇದ್ದ ಆಹಾರ ಉತ್ಪಾದನೆ ಹಸಿರು ಕ್ರಾಂತಿಯ ಪರಿಣಾಮವಾಗಿ ೧೯೭೦ರ ಹೊತ್ತಿಗೆ ೧೦೮ ದಶಲಕ್ಷ ಟನ್‌ಗೆ ವೃದ್ಧಿಸಿತ್ತು. ಹಂತಹಂತವಾಗಿ ದೇಶದ ಆಹಾರ ಉತ್ಪಾದನೆ ನಿರಂತರವಾಗಿ ಹೆಚ್ಚಾಗುತ್ತಿದೆ. ಇಂದು (೨೦೧೬-೧೭) ದೇಶದ ಆಹಾರ ಉತ್ಪಾದನೆ ೨೭೨ ದಶಲಕ್ಷ ಟನ್‌ಗಳಷ್ಟಾಗಿರುವುದು ನಾಡಿನ ಅನ್ನದಾತನ ಶ್ರಮಕ್ಕೆ ಹಿಡಿದ ಕನ್ನಡಿಯಾಗಿದೆ. ಆದಾಗ್ಯೂ ಸರಕಾರಗಳ ದೃಷ್ಟಿಯಲ್ಲಿ ಆಹಾರ ಭದ್ರತೆಗೆ ಜನಸಂಖ್ಯೆಯ ಬೆಳವಣಿಗೆ ಅಡ್ಡಗಾಲಾಗಿದೆ. ೧೯೫೦ರಲ್ಲಿ ಕೇವಲ ೩೫ ಕೋಟಿಯಷ್ಟಿದ್ದ ಜನಸಂಖ್ಯೆ ಇಂದು ೧೨೮ ಕೋಟಿಯಾಗಿದೆ. ೧೯೫೦ರ ದಶಕದಲ್ಲಿ ತಲಾವಾರು ಆಹಾರ ಲಭ್ಯತೆ ವಾರ್ಷಿಕ ೧೪೪ ಕಿಲೋ ಗ್ರಾಂ ಆಗಿತ್ತು. ಆದರೆ ಅಗಾಧ ಗತಿಯಲ್ಲಿ ಬೆಳೆದ ಜನಸಂಖ್ಯೆ ಆಹಾರ ಬಳಸುವ ಅಷ್ಟೊಂದು ಅನ್ನದ ಚೀಲಗಳನ್ನೇ ಸೃಷ್ಟಿಸಿದೆ. ಸರಕಾರಿ ಅಂಕಿ ಅಂಶಗಳ ಪ್ರಕಾರ ಇಂದು ತಲಾವಾರು ವಾರ್ಷಿಕ ಆಹಾರಧಾನ್ಯಗಳ ಲಭ್ಯತೆ ಸುಮಾರು ೧೯೦ ಗ್ರಾಂ ತಲುಪಿದೆ. ಅದೇ ರೀತಿ ೧೯೫೧ರಲ್ಲಿ ದಿನಂಪ್ರತಿ ಒಬ್ಬರಿಗೆ ಸುಮಾರು ೩೯೫ ಗ್ರಾಂ ಆಹಾರಧಾನ್ಯ ದೊರೆಯುತ್ತಿದ್ದು ಇದೀಗ ಸುಮಾರು ೫೧೧ ಗ್ರಾಂ.ಗಳಿಗೆ ತಲುಪಿದೆ. ಅಂದರೆ ದೇಶದಲ್ಲಿ ಆಹಾರ ಉತ್ಪಾದನೆ ಹೆಚ್ಚಳವಾಗಿದ್ದು, ಜನಸಂಖ್ಯೆಯ ಹೆಚ್ಚಳದ ಹೊರತಾಗಿಯೂ ತಲಾವಾರು ಆಹಾರ ಲಭ್ಯತೆಯು ಹೆಚ್ಚಾದಂತೆ ಭಾವನೆಯಾಗುತ್ತದೆ. ಈ ಅಂಕಿ ಅಂಶಗಳನ್ನು ಗಮನಿಸಿ ಯಾರಾದರೂ ಹೆಮ್ಮೆಪಟ್ಟುಕೊಳ್ಳಬಹುದು. ಆದರೆ ಸತ್ಯ ಎಂದಿನಂತೆ ಇಂದಿಗೂ ಕಹಿಯಾಗಿದೆ. ಇತ್ತೀಚಿನ ವರದಿಗಳ ಪ್ರಕಾರ ಭಾರತದ ಹಸಿವಿನ ಸಮಸ್ಯೆ ಅತ್ಯಂತ ಗಂಭೀರವಾಗಿದೆ. ೨೦೧೬ರ ವಿಶ್ವ ಆಹಾರ ನೀತಿ ಸಂಶೋಧನಾ ಸಂಸ್ಥೆಯ ಜಾಗತಿಕ ಹಸಿವಿನ ಸೂಚ್ಯಂಕದ ಪ್ರಕಾರ ೧೧೯ ಅಭಿವೃದ್ಧಿಶೀಲ ರಾಷ್ಟ್ರಗಳ ಪೈಕಿ ಭಾರತ ೧೦೦ನೇ ಸ್ಥಾನದಲ್ಲಿದ್ದು ಬಂಗ್ಲಾದೇಶ (೮೮) ಹಾಗೂ ನೇಪಾಳ (೭೨) ದೇಶಗಳಿಗಿಂತಲೂ ಕಡೆಯಾಗಿರುವುದನ್ನು ಗಮನಿಸಿದರೆ ಭೌತಿಕ ಆಹಾರೋತ್ಪಾದನೆಯ ಹೆಮ್ಮೆ ತಲೆಕೆಳಗಾಗುತ್ತದೆ. ಕಳವಳಕಾರಿ ವಿಷಯವೆಂದರೆ ೨೦೧೬-೧೭ರಲ್ಲಿ ಭಾರತ ಅತ್ಯಧಿಕ ಆಹಾರೋತ್ಪಾದನೆಯನ್ನು ಸಾಧಿಸಿದಾಗ್ಯೂ ಜಾಗತಿಕ ಹಸಿವಿನ ಸೂಚ್ಯಂಕದ ಪ್ರಕಾರ ದೇಶದ ಸ್ಥಾನ ೨೦೧೬ರಲ್ಲಿದ್ದ ೯೭ನೇ ಸ್ಥಾನದಿಂದ ೨೦೧೭ರಲ್ಲಿ ೧೦೦ನೇ ಸ್ಥಾನಕ್ಕಿಳಿದಿದೆ. (ಹೆಚ್ಚಿನ ಸ್ಥಾನ ಹದಗೆಡುತ್ತಿರುವ ಪರಿಸ್ಥಿತಿಗೆ ಕನ್ನಡಿಯಾಗಿದೆ). ಇದು ವಿಪರ್ಯಾಸವಲ್ಲವೇ? ಅಭಿವೃದ್ಧಿ ಹಾಗೂ ದೇಶಾಭಿಮಾನದ ಮುಗಿಲೆತ್ತರದ ಘೋಷಣೆಗಳ ಮಧ್ಯೆ ಹಸಿವಿನಿಂದ ಹಗಲಿರುಳೂ ನರಳುವ ದರಿದ್ರ ನಾರಾಯಣನ ಆಕ್ರಂದನ ಕೇಳಿಸಿದರೆಷ್ಟು, ಬಿಟ್ಟರೆಷ್ಟು?

ದಾರಿದ್ರ್ಯ, ಹಸಿವೆ ಹಾಗೂ ಅರೆಪೋಷಣೆಗಳಿಗೆ ಅವರವರ ದೈವ, ದೇವರು ಅಥವಾ ಹಣೆಬರಹವೇ ಕಾರಣವೆನ್ನುವುದು ಅತೀ ಜಾಣತನದಿಂದ ಕೂಡಿದ ಅವೈಜ್ಞಾನಿಕ ಹಾಗೂ ಅನ್ನವಂಚಿತರನ್ನು ಅವಮಾನಿಸುವ ವಾದವೇ ಸರಿ. ಈ ಸಮಸ್ಯೆಗಳಿಗೆ ಅಧಿಕ ಜನಸಂಖ್ಯೆ, ಕೃಷಿ ಸಾಗುವಳಿ ಕ್ಷೇತ್ರದ ಕೊರತೆ, ಹವಾಮಾನ ಸಮಸ್ಯೆಗಳು ಅಥವಾ ಕಡಿಮೆ ಕೃಷಿ ಉತ್ಪಾದನೆ ಎಂಬಂತಹ ಕಾರಣಗಳು ಸಾಮಾನ್ಯವಾಗಿ ಕೇಳಿಬರುತ್ತವೆ. ಆಳಕ್ಕಿಳಿದು ನೋಡಿದರೆ ಹಸಿವೆಗೆ ಮೂಲ ಕಾರಣ ಬಡತನ ಹಾಗೂ ದಾರಿದ್ರ್ಯ. ಸಮಾಜದಲ್ಲಿ ಬಡತನದ ಮೂಲ ಕಾರಣ ಸಾಮಾಜಿಕ ಹಾಗೂ ಆರ್ಥಿಕ ಅಸಮಾನತೆ. ಎಲ್ಲ ಅಸಮಾನತೆಗಳ ತಾಯಿ ಬೇರು ಸಾಮಾಜಿಕ ಸಂಪತ್ತು ಹಾಗೂ ಅವಕಾಶಗಳ ಅಸಮಾನ ಹಂಚಿಕೆ; ಜೊತೆಗೆ ವ್ಯಕ್ತಿಯ ದಿನನಿತ್ಯದ ಬದುಕಿನ ಮೇಲೆ ಪ್ರತಿಕೂಲ ಪರಿಣಾಮ ಬೀರುವ ಪ್ರತಿಗಾಮಿ ನೀತಿ-ನಿರೂಪಣೆಗಳು. ಹಸಿವೆಯ ಸಮಸ್ಯೆಯನ್ನು ವಿಶದವಾಗಿ ಅರುಹುವ "How the other Half Dies" ಎಂಬ ಪುಸ್ತಕದಲ್ಲಿ ಆಹಾರ ತಜ್ಞೆ ಸುಜನ್ ಜಾರ್ಜ್ ಅವರು, ಪ್ರಸ್ತುತ ನವ-ಉದಾರೀಕರಣ ಪ್ರಣೀತ ಅರ್ಥವ್ಯವಸ್ಥೆಯಲ್ಲಿ, ಹಸಿವೆಗೆ ಕಡಿಮೆ ಆಹಾರೋತ್ಪಾದನೆ ಕಾರಣವಲ್ಲ; ಬದಲಾಗಿ, ಆಹಾರ ಹಂಚಿಕೆಗೆ ಸಂಬಂಧಿಸಿದ ನೀತಿ ಹಾಗೂ ಕಾಯ್ದೆಗಳೇ ಕಾರಣ ಎಂದು ವಾದಿಸುತ್ತಾರೆ. ವಿಶ್ವದಾದ್ಯಂತ ಸುಮಾರು ಅರ್ಧದಷ್ಟು ಜನ ಹಸಿವೆಯಿಂದ ಬಳಲುತ್ತಿದ್ದಾರೆ ಎಂಬುದು ವಿಶ್ವಸಂಸ್ಥೆಯ ಮಾಹಿತಿ. ಜಾಗತಿಕ ಹಸಿವಿನ ಮೂಲವನ್ನು ವಿಶ್ಲೇಷಿಸಿದ ಸುಜನ್ ಅವರ ಪ್ರಕಾರ ಕ್ಷಾಮ ಹಾಗೂ ಹಸಿವೆಂಬ ಪೀಡೆಗಳಿಗೆ ಜಾಗತಿಕ ಮಟ್ಟದಲ್ಲಿರುವ ಮುಂದುವರಿದ ಹಾಗೂ ಹಿಂದುಳಿದ ದೇಶಗಳ ನಡುವಿನ ಅಧಿಕಾರ ಹಾಗೂ ಸಂಪನ್ಮೂಲಗಳ ಅಸಮಾನ ಹಂಚಿಕೆಯೇ ಮೂಲ ಕಾರಣ. ಅದೇ ರೀತಿ ಹಿಂದುಳಿದ ದೇಶಗಳೊಳಗಡೆ ಕೂಡ



ಉಳ್ಳವರು ಹಾಗೂ ಪಾಮರರ ಮಧ್ಯದ ಸಂಪನ್ಮೂಲ ಅಸಮಾನ ಹಂಚಿಕೆಯೇ ದಾರಿದ್ರ್ಯ ಹಾಗೂ ಹಸಿವೆಗೆ ಕಾರಣ.




ದೇಶದ ಆಹಾರ ಭದ್ರತೆ, ಅರೆಪೋಷಣೆ ಹಾಗೂ ಹಸಿವಿನ ಸಮಸ್ಯೆ ಸ್ವತಂತ್ರ ಭಾರತದಲ್ಲಿ ಏಳು ದಶಕಗಳ ನಂತರವೂ ನಮ್ಮನ್ನು ಕಾಡುತ್ತಿವೆ ಎಂಬುದು ನೋವಿನ ಸಂಗತಿ. ಅರ್ಥಶಾಸ್ತ್ರಜ್ಞ ಹಾಗೂ ಹಿಂದಿನ ಪ್ರಧಾನಿ ಡಾ॥ ಮನಮೋಹನ ಸಿಂಗ್ ಅವರು ಅರೆಪೋಷಣೆಯ ಸಮಸ್ಯೆ "ರಾಷ್ಟ್ರೀಯ ಅವಮಾನ" ಎಂದು ಪರಿಗಣಿಸಿದ್ದನ್ನು ನೆನಪಿಸಿಕೊಳ್ಳಲೇಬೇಕು. ಇದು ನಿಜವಾದ ರಾಷ್ಟ್ರೀಯ ಸಮಸ್ಯೆಯೇ ಎನ್ನುವುದು ನೋಡುವವನ ದೃಷ್ಟಿಕೋನವನ್ನು ಅವಲಂಬಿಸಿದೆ. ಹಸಿದವನಿಗೆ ಮಾತ್ರ ಅನ್ನದ ಮಹತ್ವ ಅರಿವಾಗುತ್ತದೆ. ದೇಶದ ಭೌತಿಕ, ಬೌದ್ಧಿಕ ಹಾಗೂ ಕರ್ತೃತ್ವ ಶಕ್ತಿ ಹಾಗೂ ಉತ್ಪಾದಕತೆಯ ಮೂಲ ಚೇತನವಾದ ಅನ್ನವನ್ನು ಕಡೆಗಣಿಸಿ ಅಪ್ರಸ್ತುತ, ಅಸಂಬದ್ಧ ಇಲ್ಲವೇ ಭಾವನಾತ್ಮಕ ವಿಷಯಗಳಿಗೆ ಒತ್ತುಕೊಡುವುದು ದೀರ್ಘಕಾಲೀನ ರಾಷ್ಟ್ರ ನಿರ್ಮಾಣ ಪ್ರಯತ್ನಗಳಿಗೆ ಹಿನ್ನಡೆ ಕಟ್ಟಿಟ್ಟ ಬುತ್ತಿ. ಅಂದಮಾತ್ರಕ್ಕೆ ದೇಶದಲ್ಲಿ ಈವರೆಗೆ ಹಸಿವನ್ನು ನೀಗಿಸಲು ಪ್ರಯತ್ನಗಳೇ ನಡೆದಿಲ್ಲ ಎಂಬ ವಾದ ಇದಲ್ಲ. ಅನ್ನದ ಸಮಸ್ಯೆಗೆ ನಾವು ನೀಡಬೇಕಾದ ಆದ್ಯತೆ ದೊರೆತಿದೆಯೇ? ಬಡತನ ಹಾಗೂ ಹಸಿವುಗಳಿಗೆ ನಿತ್ಯ ನಿರಂತರ ಹಾಗೂ ನೇರಸಂಬಂಧ ಇರುವುದನ್ನು ಯಾರೂ ಕೂಡ ತಳ್ಳಿಹಾಕುವಂತಿಲ್ಲ. ಬಡತನ ನಿವಾರಣೆ, ಹಸಿವು ಹಾಗೂ ಅರೆಪೋಷಣೆಗಳನ್ನು ತೊಲಗಿಸಲು ಪ್ರಯತ್ನಗಳು ನಡೆದೇ ಇವೆ. ಇತ್ತೀಚೆಗೆ ಭಾರತ ಸರಕಾರ ಆಹಾರ ಭದ್ರತಾ ಕಾಯ್ದೆಯನ್ನು ರೂಪಿಸಿದೆ, ಕರ್ನಾಟಕ ಸರಕಾರ ಅನ್ನಭಾಗ್ಯ ಯೋಜನೆಯನ್ನು ಅನುಷ್ಠಾನಗೊಳಿಸಿದೆ. ಪ್ರಜಾಪ್ರಭುತ್ವ ವ್ಯವಸ್ಥೆಯಡಿ ಇದು ಸರಕಾರಗಳು ನಿರ್ವಹಿಸಲೇಬೇಕಾದ ಕನಿಷ್ಠ ಕರ್ತವ್ಯ. ಆದರೆ ಇಂತಹ ಮಾನವೀಯ ಪ್ರಯತ್ನಗಳಿಂದು ಸಾರ್ವಜನಿಕ ಲೇವಡಿ ಹಾಗೂ ಅವಹೇಳನಕ್ಕೆ ತುತ್ತಾಗಿರುವುದು ಖೇದಕರವಾಗಿದೆ. ಇದಕ್ಕೆ ನಿಖರ ಕಾರಣ "ಹೊಟ್ಟೆ ತುಂಬಿದವನಿಗೆ ಹಸಿವಿನಿಂದಾಗುವ ನೋವಿನ ಅರಿವು-ಅನುಭವ ಇಲ್ಲದಿರುವುದು." ಆಹಾರ ಭದ್ರತೆಯ ನೆಪದಲ್ಲಿ ಸರಕಾರಗಳು (ಯಾವುದೇ ಪಕ್ಷದ್ದಿರಲಿ) ಜನಪರ ಕಾರ್ಯಕ್ರಮಗಳ ಮೂಲಕ ಬೊಕ್ಕಸವನ್ನು ಬರಿದುಮಾಡುತ್ತವೆ, ಬಡವರನ್ನು ಆಲಸಿಗಳನ್ನಾಗಿ ಮಾಡುತ್ತವೆ ಎಂಬ ವಿತಂಡವಾದಗಳು ತಾಂಡವವಾಡುತ್ತಿರುವುದು ನಮ್ಮ ಬೌದ್ಧಿಕ ದಿವಾಳಿತನಕ್ಕೆ ಸಾಕ್ಷಿಯಾಗಿದೆ. ತೋರಿಕೆಗೆ ಕಾಣಸಿಗುವ ಮಾಹಿತಿ ಹಾಗೂ ಸುಳ್ಳು ಗ್ರಹಿಕೆಗಳಿಂದ ಕೂಡಿದ ವಿಚಾರಗಳ ಮೂಲಕ ಸರಕಾರದ ಪ್ರಯತ್ನಗಳನ್ನು ಹೀಗಳೆಯುವುದು ತಪ್ಪು. ಸಮಸ್ಯೆಯ ಆಳಕ್ಕಿಳಿದು ಮೂಲಭೂತ ಮಾಹಿತಿ ಹಾಗೂ ವಾಸ್ತವಿಕ ಸತ್ಯವನ್ನು ಮುಂದಿಟ್ಟುಕೊಂಡು ಸಾರ್ವಜನಿಕ ಪ್ರಯತ್ನಗಳ ಪರಾಮರ್ಶೆ ನಡೆದರೆ ಸ್ವಾಗತ. ಅದು ಬಿಟ್ಟು ಪೂರ್ವಗ್ರಹಗಳಿಂದ ಸಮಸ್ಯೆಯ ವಾಸ್ತವಿಕತೆಯನ್ನೇ ಅಲ್ಲಗಳೆಯುತ್ತಾ, ಪರಿಹಾರದ ಪ್ರಕ್ರಿಯೆಗಳನ್ನು ಪ್ರಶ್ನಿಸುವುದು ಸರಿಯಲ್ಲ. "ಸರಕಾರ ಅದರ ಬದಲಾಗಿ ಇದನ್ನು ಮಾಡಬೇಕಾಗಿತ್ತು, ಇದರ ಬದಲಾಗಿ ಅದನ್ನು ಮಾಡಬಹುದು" ಎನ್ನುವುದು ದಿಕ್ಕು ತಪ್ಪಿಸುವ ತಂತ್ರಗಾರಿಕೆ.

ಅದರ ಬದಲಿಗೆ ಬುದ್ಧಿಜೀವಿಗಳು, ತಜ್ಞರು, ಅಧಿಕಾರಿಗಳು ಹಾಗೂ ಜನಪ್ರತಿನಿಧಿಗಳು ಹಸಿವಿನ ವಾಸ್ತವಾಂಶಗಳನ್ನು ಗಂಭೀರವಾಗಿ ಪರಿಗಣಿಸಿ ವಿಶಾಲವಾದ ಹಾಗೂ ಆಳವಾದ ಸಾರ್ವಜನಿಕ ಚರ್ಚೆಗೆ ಒಡ್ಡಬೇಕಾಗಿದೆ. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಸಾರ್ವಜನಿಕ ಜನಾಭಿಪ್ರಾಯ ಅಧಿಕಾರದ ಚುಕ್ಕಾಣಿ ಹಿಡಿಯುವಲ್ಲಿ ನಿರ್ಣಾಯಕವಾಗಿರುತ್ತದೆ. ನೊಬೆಲ್ ಪ್ರಶಸ್ತಿ ವಿಜೇತ ಅರ್ಥಶಾಸ್ತ್ರಜ್ಞ ಅಮರ್ತ್ಯ ಸೇನ್ ಹೇಳಿರುವಂತೆ ಜನ ತಾಂತ್ರಿಕ ವ್ಯವಸ್ಥೆಯಲ್ಲಿ ಪ್ರಬಲ ಸಾರ್ವಜನಿಕ ಚರ್ಚೆ ಹಾಗೂ ಅಭಿಪ್ರಾಯ ಮಂಡನೆಗಳ ಮೂಲಕ ಕ್ಷಾಮ, ಬಡತನ ಹಾಗೂ ಹಸಿವಿನ ಸಮಸ್ಯೆಯ ಕ್ರೌರ್ಯವನ್ನು ಶಮನಗೊಳಿಸಬಹುದಾಗಿದೆ. ಆದರೆ ದುರ್ದೈವವಶಾತ್ "ಬೆಂಬಿಡದ ಹಸಿವೆಯ ಕುರಿತು ಸಾರ್ವಜನಿಕ ಚರ್ಚೆ ಅತ್ಯಂತ ಕಡಿಮೆ. ಇದಕ್ಕೆ ರಾಜಕೀಯ ಇಚ್ಛಾಶಕ್ತಿ ಕೊರತೆಯೇ ಕಾರಣ" ಎನ್ನುತ್ತಾರೆ ಅಭಿವೃದ್ಧಿ ಅರ್ಥಶಾಸ್ತ್ರಜ್ಞ ಜೀನ್ ಡ್ರೇಝ್. ಆರೋಗ್ಯಪೂರ್ಣ ಪ್ರಜಾಪ್ರಭುತ್ವ ವ್ಯವಸ್ಥೆಗೆ ನಾಗರಿಕರ ಬದುಕಿನ ಮೂಲಭೂತ ಸಮಸ್ಯೆಗಳ ಬಗ್ಗೆ ಸಾರ್ವಜನಿಕ ಚರ್ಚೆ ಅತ್ಯವಶ್ಯಕ.

ಬಡವರ ತುತ್ತಿನ ಚೀಲ ತುಂಬುವ ಸರಕಾರಗಳ ಕೆಲವು ಪ್ರಯತ್ನಗಳು ಸಾರ್ವಜನಿಕ ಅವಹೇಳನೆಗೆ ಗುರಿಯಾಗುವುದು ಕಳವಳಕಾರಿಯಾಗಿದೆ. ಕರ್ನಾಟಕದ ಅನ್ನಭಾಗ್ಯದ ಸಂದರ್ಭದಲ್ಲಿ ಅರೆಬೆಂದ ಬುದ್ಧಿಜೀವಿಗಳ ವಿಚಾರಧಾರೆಯೇ ಯುವಕರು ಹಾಗೂ ವಿದ್ಯಾರ್ಥಿಗಳ ಮಸ್ತಕಕ್ಕೆ ಇಳಿದಿದೆ. ಸ್ವತಃ ಗ್ರಾಮೀಣ ಪ್ರದೇಶಗಳ ಬಡತನ, ಹಸಿವೆ, ಶೋಷಣೆಗಳ ಕೂಪಗಳಿಂದ ಎದ್ದುಬಂದ ಯುವಜನತೆ ತಮ್ಮ ಹಿನ್ನೆಲೆಯನ್ನೇ ಮರೆತು ಜನಪರ ಯೋಜನೆಗಳ ಬಗ್ಗೆ ಕ್ಷುಲ್ಲಕವಾಗಿ ಮಾತನಾಡುವುದನ್ನು ಕಂಡಾಗ ಮರುಕ ಉಂಟಾಗುತ್ತದೆ. ಅದೇ ಸಂದರ್ಭದಲ್ಲಿ "ಶೋಷಕನೊಬ್ಬನ ಹೃದಯಾಂತರಾಳದಲ್ಲಿ ಒಬ್ಬ ಶೋಷಕ ಹುದುಗಿ ಕೂತಿರುತ್ತಾನೆ" ಎಂಬ ಶಿಕ್ಷಣ ತಜ್ಞ, ತತ್ವಜ್ಞಾನಿ ಪಾಲೊ ಫ್ರೇರ್ ಅವರ ಮಾತು ನೆನಪಾಗುತ್ತದೆ. ಇತ್ತೀಚೆಗೆ, ಇಂದಿರಾ ಕ್ಯಾಂಟೀನ್‌ನ ಕೆಲವು ಉತ್ತಮ ಅಂಶಗಳನ್ನೊಳಗೊಂಡ "whatsApp" ಮಾಹಿತಿಯನ್ನು ಅಧಿಕಾರಿಯೊಬ್ಬರ ಪತ್ನಿಗೆ ಕಳಿಸಿಕೊಟ್ಟಾಗ ಅವರಿಂದ ಬಂದ "ಛೀ, ಥೂ, ಚೇಲಾಗಳು" ಎಂಬ ಉತ್ತರವನ್ನು ಇನ್ನೂ ಅರಗಿಸಿಕೊಳ್ಳುತ್ತಿದ್ದೇನೆ! ಆ ಕಾರಣಕ್ಕಾಗಿಯೇ ಇಂದಿರಾ ಕ್ಯಾಂಟೀನ್‌ನಲ್ಲಿ ಕೇವಲ ೧೦ ರೂಪಾಯಿಗೆ ಸ್ವಚ್ಛ, ಸಿಹಿಯಾದ ಅನ್ನ, ಸಾಂಬಾರು, ಮೊಸರನ್ನು ಊಟ ಮಾಡಿಬಂದೆ. ಅಲ್ಲಿ ಸೇರಿದ, ಅವಸರದಲ್ಲಿ ಕಚೇರಿಗೆ ಹೊರಟ ಯುವಕ, ಆಟೋರಿಕ್ಷಾವನ್ನು ಕಾಂಪೌಂಡ್ ಹೊರಗಡೆ ನಿಲ್ಲಿಸಿ ಊಟಕ್ಕೆ ಬಂದ ಚಾಲಕ, ಕಟ್ಟಡ ನಿರ್ಮಾಣನಿರತ ಕಾರ್ಮಿಕರು ಮೈಮರೆತು ಊಟ ಮಾಡುತ್ತಿದ್ದುದನ್ನು ನೋಡಿ ಮನಸ್ಸಿಗೆ ನೆಮ್ಮದಿ ಎನಿಸಿತು.

ಸಾರ್ವಜನಿಕ ಬೊಕ್ಕಸವನ್ನು ಬರಿದುಮಾಡುವ, ಬಡವರನ್ನು ಆಲಸಿಗಳನ್ನಾಗಿ ಮಾಡುವ ಕುರಿತು ಹಾಗೂ ಸರಕಾರಗಳು ಯೋಜನೆಗಳನ್ನು ಅನುಷ್ಠಾನಗೊಳಿಸಿದ ಮಾದರಿಗಳನ್ನೇ ಪ್ರಶ್ನಿಸುವ ವಿತಂಡವಾದಿಗಳಿಗೆ ಒಂದು ವಿನಮ್ರ ಸೂಚನೆ. ಎಲ್ಲಿಯವರೆಗೆ ಸಮಾಜದಲ್ಲಿ ಆರ್ಥಿಕ ಅಸಮಾನತೆ, ಆಸ್ತಿ ಹಂಚಿಕೆಯ ತಾರತಮ್ಯ ಹಾಗೂ ಅವಕಾಶಗಳ ವಂಚನೆ ಪ್ರಚಲಿತವಾಗಿರುತ್ತವೆಯೋ ಅಲ್ಲಿಯವರೆಗೆ ಪ್ರಭುತ್ವದ ಹಸ್ತಕ್ಷೇಪ ಒಂದು ನೈತಿಕ ಜವಾಬ್ದಾರಿಯಾಗಿ ಮುಂದುವರಿಯುತ್ತದೆ. ಖಾಸಗಿ ಆಸ್ತಿಯ ಹೆಸರಿನಲ್ಲಿ ಅಗಾಧ ಪ್ರಮಾಣದ ಆಸ್ತಿ ಹಾಗೂ ಅವಕಾಶಗಳನ್ನು ತಮ್ಮ ಹಕ್ಕುಗಳನ್ನಾಗಿರಿಸಿಕೊಂಡ ಉಳ್ಳವರು ಹಾಗೂ ಹಸಿವೆಯ ಯಾತನೆಯನ್ನು ಅನುಭವಿಸದ ಅವರ ಅನುಯಾಯಿಗಳು ಈ ಸತ್ಯವನ್ನು ಅರಿಯಲೇಬೇಕು. ಜಾತಿ, ಮತ, ಪಂಥ, ಲಿಂಗ, ಕಾಲ, ದೇಶಗಳನ್ನು ಮೀರಿ ಅವಕಾಶ ವಂಚಿತರ ಆಜನ್ಮ ವೈರಿಯಾಗಿ ಹಸಿವು ಕಾಡುತ್ತಿರಬೇಕಾದರೆ ಪ್ರತಿಗಾಮಿ ವಾದಗಳಿಗೆ ಉತ್ತರ – "ಮೊದಲು ಆಸ್ತಿ ಒಡೆತನವನ್ನು ಸಾರ್ವಜನಿಕಗೊಳಿಸಿ, ಆಮೇಲೆ ರಾಷ್ಟ್ರೀಯ ಆಹಾರ ಭದ್ರತೆ ಕಾಯ್ದೆ, ಅನ್ನಭಾಗ್ಯ ಅಥವಾ ಇಂದಿರಾ ಕ್ಯಾಂಟೀನ್‌ಗಳಂತಹ ಜನಪರ ಯೋಜನೆಗಳ ಕುರಿತು ಚರ್ಚಿಸೋಣ."

ಭಾರತದ ಸಂವಿಧಾನ ಮಾರ್ಗದರ್ಶಿ ತತ್ವಗಳು ಸೂಚಿಸುವಂತೆ ರಾಜಕೀಯ ಸ್ವಾತಂತ್ರ್ಯದೊಡನೆ ನಾಗರಿಕರಿಗೆ ಆರ್ಥಿಕ ಸ್ವಾತಂತ್ರ್ಯವನ್ನು ದೊರಕಿಸಿಕೊಡುವುದು ಸಂವಿಧಾನದ ಶಿಲ್ಪಿ ಡಾ॥ ಅಂಬೇಡಕರ್ ಅವರ ಆಶಯವಾಗಿತ್ತು. ರಾಷ್ಟ್ರದ ಬಾಹ್ಯ ಸುರಕ್ಷತೆಯನ್ನು ಕಾಪಾಡುವುದು ಎಷ್ಟು ಮಹತ್ವದ್ದಾಗಿದೆ, ಅಷ್ಟೇ ಮಹತ್ವ ದೇಶದ ಪ್ರತಿಯೊಬ್ಬ ಪ್ರಜೆಗೂ ಆಹಾರ ಭದ್ರತೆಯನ್ನು ಒದಗಿಸಿಕೊಡುವುದಾಗಿದೆ. ಭಾರತದ ಬಡತನ ಹಾಗೂ ಹಸಿವೆಗಳ ಬಗ್ಗೆ ಮನನೊಂದು ಸುಮಾರು ೧೨೫ ವರ್ಷಗಳ ಹಿಂದೆಯೇ "ಹಸಿದ ಹೊಟ್ಟೆಗೆ ಧರ್ಮ ಬೋಧನೆ ಮಾಡುವುದು ಅಪರಾಧ" ಎಂಬ ವಿವೇಕಾನಂದರ ವಾಣಿ ಎಷ್ಟು ಅರ್ಥಪೂರ್ಣ ಹಾಗೂ ಪ್ರಸ್ತುತವಾಗಿದೆ! ಅನ್ನ ಮಾನವನ ಮೂಲಭೂತ ಅವಶ್ಯಕತೆ ಹಾಗೂ ಹಕ್ಕು. ಇಂತಹ ಗಂಭೀರ ವಿಷಯದ ಬಗ್ಗೆ ಪ್ರತಿಗಾಮಿ ವಿಚಾರಧಾರೆಗಳಿಂದ ಕುರುಡರಾಗದೆ ವೈಜ್ಞಾನಿಕ ಹಾಗೂ ಜನಪರ ಧೋರಣೆಗಳು ಹಾಗೂ ಆಚರಣೆಗಳು ನಮಗಿಂದು ಬೇಕಾಗಿವೆ.

**ಡಾ॥ ರಾಜೇಂದ್ರ ಪೋದ್ದಾರ**
ಪ್ರಾಧ್ಯಾಪಕರು (ಕೃಷಿ ಅರ್ಥಶಾಸ್ತ್ರ), ಕೃಷಿ ವಿಶ್ವವಿದ್ಯಾಲಯ, ಧಾರವಾಡ – ೫೮೦ ೦೦೫

**ಎ. ಕೆ. ಪ್ರ :** ರಷ್ಯದ ಓಲ್ಗಾ ನದಿಯನ್ನು ನಿಮ್ಮ ಕಾವ್ಯನಾಮವಾಗಿ ಮಾಡಿಕೊಂಡಿದ್ದೀರ. ಅದಕ್ಕೆ ಕಾರಣವೇನು?

**ಓಲ್ಗಾ :** ೧೯೪೦ರ ದಶಕ ಭಾರತ ದೇಶ ವಂದೇಮಾತರಂದಿಂದ ಹೇಗೆ ಪ್ರತಿಧ್ವನಿಸಿದೆಯೋ ಹಾಗೆಯೇ 'ಗರ್ಜಿಸು ರಷ್ಯಾ' ಎಂತಲೂ ಅದು ಪ್ರತಿಧ್ವನಿಸಿತ್ತು. ಎರಡನೆಯ ಜಾಗತಿಕ ಯುದ್ಧಕಾಲದಲ್ಲಿ ಸೋವಿಯತ್ ಯೂನಿಯನ್ ನಾಜೀಗಳ ವಿರುದ್ಧ ಬಲವಾದ ಪ್ರತಿಭಟನೆಯನ್ನು ಹೂಡಿತ್ತು. ಸ್ಟಾಲಿನ್ ನಾಯಕತ್ವದಲ್ಲಿ ರೆಡ್ ಆರ್ಮಿ ವಿಜಯಗಾಥೆಗಳು ಭಾರತದೇಶದ ಮೂಲೆ ಮೂಲೆಗೂ ಸಹ ಕೇಳಿಸಿದ್ದವು. ಆ ರೆಡ್ ಆರ್ಮೀ ಸದಸ್ಯೆ ಓಲ್ಗಾ ಎಂಬ ಮಹಿಳೆ ೧೯೪೬ ಏಪ್ರಿಲ್ ೭ರಂದು ತೀರಿಹೋದಳು. ಅದೇ ದಿನ ನಮ್ಮ ತಂದೆಯವರಿಗೆ ಮೊದಲ ಮಗುವಾಗಿ ನಮ್ಮ ಅಕ್ಕ ಜನಿಸಿದ್ದಳು. ಆ ಮಗುವಿಗೆ ಓಲ್ಗಾ ಎಂಬ ಹೆಸರು ಇಟ್ಟಿದ್ದರು. ತರುವಾಯದ ನಾಲ್ಕು ವರ್ಷಗಳಿಗೆ (೧೯೫೦ ನವೆಂಬರ್ ೨೭ರಂದು) ನಾನು ಜನಿಸಿದೆ. ನಮ್ಮ ಅಕ್ಕ ನಾನು ಒಳ್ಳೆ ಗೆಳತಿಯರಂತೆ ಬೆಳೆದೆವು. ನಮ್ಮ ಕುಟುಂಬದ ದುರದೃಷ್ಟವೆಂದರೆ ನಮ್ಮ ಅಕ್ಕ ಆಕೆಯ ೨೧ನೆಯ ವರ್ಷದಲ್ಲಿ, ನಾನು ೧೬ ವರ್ಷದವಳಾಗಿದ್ದಾಗ ತೀರಿಹೋದಳು. ಆಗ ತಾನೆ ಕವಿತೆಗಳನ್ನು ಬರೆಯುತ್ತಿದ್ದ ನಾನು ನನ್ನ ಕಾವ್ಯನಾಮವಾಗಿ ನಮ್ಮ ಅಕ್ಕನ ಹೆಸರು ಇಟ್ಟುಕೊಂಡೆ.




# ಪ್ರತಿ ಅಸ್ತಿತ್ವವನ್ನು ಗುರುತಿಸಿ ಗೌರವಿಸುವುದೇ ಸ್ತ್ರೀವಾದದ ವೈಶಿಷ್ಟ್ಯ

ಸಂದರ್ಶನದ ಅನುವಾದಕರು
**ಡಾ॥ ಜಿ. ವೀರಭದ್ರಗೌಡ**

**ತೆಲುಗಿನ ಪ್ರಸಿದ್ಧ ಸ್ತ್ರೀವಾದಿ ಲೇಖಕಿ ಓಲ್ಗಾ (ಶ್ರೀಮತಿ ಪಾಪೂರಿ ಲಲಿತ ಕುಮಾರಿ) ಅವರಿಗೆ ಅವರ 'ವಿಮುಕ್ತ' ಕಥಾ ಸಂಕಲನಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಗೌರವ ದೊರೆತಾಗ ತೆಲುಗು ಲೇಖಕ ಶ್ರೀ ಎ. ಕೆ. ಪ್ರಭಾಕರ್ ಅವರು ತೆಲುಗಿನ "ಪಾಲಪಿಟ್ಟ" ಪತ್ರಿಕೆಗೆ ಅವರನ್ನು ಸಂದರ್ಶಿಸಿದ್ದರು. ಈ ತೆಲುಗು ಸಂದರ್ಶನ ಲೇಖನವನ್ನು ಬೆಂಗಳೂರಿನ ಕೃಷಿ ವಿಶ್ವವಿದ್ಯಾಲಯದಲ್ಲಿ ಅಸಿಸ್ಟೆಂಟ್ ಪ್ರೊಫೆಸರ್ ಆಗಿರುವ ಡಾ॥ ಜಿ. ವೀರಭದ್ರಗೌಡ ಅವರು ಸಂಕ್ಷಿಪ್ತವಾಗಿ ಕನ್ನಡಕ್ಕೆ ಅನುವಾದಿಸಿಕೊಟ್ಟಿದ್ದಾರೆ.**

ತರುವಾಯ ಕ್ರಮೇಣ ನನ್ನ ರಚನಾ ವ್ಯಾಸಂಗ ವಿಕಾಸವಾಗುತ್ತಿದ್ದಂತೆ ನನ್ನ ಮೂಲ ಹೆಸರು ಲಲಿತ–ಲಲಿತ ಕುಮಾರಿ ಎಂದು ಯಾರಿಗೂ ಗೊತ್ತಾಗದ ರೀತಿಯಲ್ಲಿ ನಾನು ಓಲ್ಗಾ ಆಗಿದ್ದೇನೆ. ಈಗ ನಮ್ಮ ಮನೆಯಲ್ಲಿ ಬಿಟ್ಟರೆ, ನನ್ನನ್ನು ಯಾರೂ ಲಲಿತಾ ಎಂದು ಕರೆಯುವುದಿಲ್ಲ. ಆ ರೀತಿಯಲ್ಲಿ ನಮ್ಮ ಅಕ್ಕನನ್ನು ಸಜೀವವಾಗಿಸಿಕೊಂಡಿದ್ದೇನೆ. ಇದು ವ್ಯಕ್ತಿಗತ ವಿಷಯವೇ ಆದರೂ ಅದರಲ್ಲಿ ರಾಜಕೀಯವೂ ಅಡಗಿದೆ. 'ವೈಯಕ್ತಿಕವೂ ಸಹ ರಾಜಕೀಯವೇ' ಎಂಬ ನನ್ನ ಸ್ತ್ರೀವಾದ ಸಿದ್ಧಾಂತಕ್ಕೆ ಇದು ಸರಿಯಾಗಿ ಹೋಲುತ್ತದೆ.

**ಎ. ಕೆ. ಪ್ರ:** ಅಂದರೆ ನಿಮ್ಮ ಕುಟುಂಬವು ಕಮ್ಯುನಿಸ್ಟ್ ಹಿನ್ನೆಲೆಯದು ಎಂದು ಅನಿಸುತ್ತದೆ !

**ಓಲ್ಗಾ:** ಹೌದು. ನಮ್ಮ ತಂದೆಯವರು ಕಮ್ಯುನಿಸ್ಟ್ ಪಾರ್ಟಿಯಲ್ಲಿ ಸಾಮಾನ್ಯ ಸದಸ್ಯರು. ೧೯೬೪ರಲ್ಲಿ ಪಾರ್ಟಿ ಎರಡು ಭಾಗವಾಗಿ ವಿಭಜನೆಯಾದ ತರುವಾಯ, ಆ ರಾಜಕೀಯಗಳಿಗೆ ದೂರವಾದರು. ಆದರೆ ನಾವು ಚಿಕ್ಕವರಿರುವಾಗಿನಿಂದಲೂ ನಮ್ಮ ಮನೆಯಲ್ಲಿ ಲೆನಿನ್, ಸ್ಟಾಲಿನ್‌ರ ಚಿತ್ರಪಟಗಳು, ಗಾಂಧಿ ನೆಹರುಗಳಿಗಿಂತ ಹೆಚ್ಚಾಗಿ ನೋಡುತ್ತಿದ್ದೆ. ಸೋವಿಯತ್ ಸಾಹಿತ್ಯ ಮನೆ ತುಂಬ ತುಂಬಿರುತ್ತಿತ್ತು. ಅಭ್ಯುದಯ ಲೇಖಕರ ಬರಹಗಳು ಕೈಗೆ ಸರಳವಾಗಿ ದೊರಕುತ್ತಿದ್ದವು. ಹೀಗೆ ಎಡಪಂಥೀಯ ಆಲೋಚನಾ ಬೀಜಗಳು ಚಿಕ್ಕವಳಿರುವಾಗಲೇ ನನ್ನಲ್ಲಿ ಬಲವಾಗಿ ನಾಟಿಕೊಂಡವು.

**ಎ. ಕೆ. ಪ್ರ:** ವಿದ್ಯಾರ್ಥಿಯಾಗಿ ವಿದ್ಯಾರ್ಥಿ ಸಂಘಗಳಲ್ಲಿ– ಎಡಪಂಥೀಯ ರಾಜಕೀಯದಲ್ಲಿ ಭಾಗಿಯಾಗುತ್ತಿದ್ದೀರಾ?

**ಓಲ್ಗಾ:** ನನಗೆ ವಾಮಪಕ್ಷದ ವಿದ್ಯಾರ್ಥಿ ಚಳುವಳಿಗಳ ಮೊದಲ ಪರಿಚಯ ವಿಶಾಖ ಉಕ್ಕು ಚಳುವಳಿಯ ಸಮಯದಲ್ಲಿ (೧೯೬೭) ಆಯಿತು. ಆಗ ನಾನು ೧೧ನೆಯ ತರಗತಿ – ಗುಂಟೂರು ಸೆಯಿಂಟ್ ಜೋಸೆಫ್ ಸ್ಕೂಲಲ್ಲಿ – ಓದುತ್ತಿದ್ದೆ. ಆ ಚಳುವಳಿಯಲ್ಲಿ ವಿದ್ಯಾರ್ಥಿಗಳು ಮಾಡಿದ ಹೋರಾಟ, ಅವರ ತ್ಯಾಗಗಳು ನನ್ನನ್ನು ತೀವ್ರವಾಗಿ ಆಕರ್ಷಿಸಿದವು. ಅದೇ ವರ್ಷ ನಮ್ಮ ಊರು ಯಡ್ಲಪಾಡು ಹತ್ತಿರ ತುಮ್ಮಲಪಾಲೆ ಎಂಬಲ್ಲಿ ನಡೆದ ಅಮರವೀರರ ಸಂಸ್ಮರಣ ಸಮಾವೇಶಕ್ಕೆ ಹೋಗಿದ್ದೆ. ಆ ಸಮಾವೇಶದಲ್ಲಿ ತುಮ್ಮಲಪಾಲೆಂ ತಿರಣಾಲ ಎಂಬುವರು, ಅಲ್ಲಿಯ ಕೆಲವರು ಎಸ್.ಎಫ್.ಐ. ವಿದ್ಯಾರ್ಥಿ ನಾಯಕರೊಂದಿಗೆ ಪರಿಚಯವಾಯಿತು. ಮುಖ್ಯವಾಗಿ ನಮ್ಮ ತಂದೆಯವರ ಗೆಳೆಯ ದಂಡಾ ನಾರಾಯಣಸ್ವಾಮಿಯವರ ಮಗಳು ಅರುಣ ಪರಿಚಯವಾದಳು. ಆಕೆ ನನಗಿಂತ ಎರಡು ವರ್ಷ ದೊಡ್ಡವಳು. ಆಗಾಗಲೇ ಎಸ್.ಎಫ್.ಐ.ಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಳು. ಆಕೆಯ ಪ್ರಚೋದನೆಯಿಂದ ನಾನು ಎಸ್.ಎಫ್.ಐ.ಯಲ್ಲಿ ಸೇರಿದೆನು. ಆಗ ಗುಂಟೂರು ಎಸ್.ಎಫ್.ಐ. ಬಹಳಷ್ಟು ರಾಜಕೀಯ ಹೋರಾಟಗಳಿಂದ ಬಲವನ್ನು ಸಾಧಿಸಿಕೊಂಡಿತ್ತು. ಮೊಟೂರಿ ಹನುಮಂತರಾವರ ಮಗಳು ಉಷಾ ಗುಂಟೂರು ಮೆಡಿಕಲ್ ಕಾಲೇಜಿನಲ್ಲಿ ಓದುತ್ತಿದ್ದಳು. ಆಕೆ ಮಾವೋ 'ವೈರುಧ್ಯಗಳು' (On Contradiction) ಕುರಿತು ಬಹಳ ಚೆನ್ನಾಗಿ ಹೇಳುತ್ತಿದ್ದಳು. ಡಾ॥ ಭಾಗಂಟಿ ಭಾಸ್ಕರ್‌ರಾವು, ಡಾ॥ ಮಲ್ಲಿಕಾರ್ಜುನ ಇನ್ನೂ ಅನೇಕರು ನಿರಂತರ ಮಾರ್ಕ್ಸಿಸಂ ಅಧ್ಯಯನದಲ್ಲಿ, ಅದನ್ನು ಸಮಕಾಲೀನ ಸಮಾಜಕ್ಕೆ ಅನ್ವಯಿಸುವುದರಲ್ಲಿ ನಿರತರಾಗಿದ್ದರು. ಅವರೆಲ್ಲ ನನಗೆ ರಾಜಕೀಯ ಗುರುಗಳು. ೧೯೬೮ರಲ್ಲಿ ತರಿಮೆಲ ನಾಗಿರೆಡ್ಡಿಯವರ ಉಪನ್ಯಾಸವನ್ನು ಕೇಳಿದ್ದು, ನನ್ನ ಬದುಕಿನಲ್ಲಿ ಒಂದು ಅದ್ಭುತವಾದ ಅನುಭವ.

ಆ ತರುವಾಯ ಗುಂಟೂರು ಜಿಲ್ಲಾ ಎಸ್.ಎಫ್.ಐ. ಘಟಕಗಳು ಒಟ್ಟಾಗಿ ಶ್ರೀಕಾಕುಳಂ ಕಡೆ ದಾರಿಮಾಡಿಕೊಂಡವು. ನನ್ನ ರಾಜಕೀಯ ಗುರುಗಳು ಅಲ್ಲಿ ಪ್ರಾಣತ್ಯಾಗ ಮಾಡಿದರು. ಬಹಳಷ್ಟು ಕ್ರಿಯಾಶೀಲವಾಗಿ ಕಾರ್ಯನಿರ್ವಹಿಸಿದ ಐದು ಜನ ಹೆಣ್ಣುಮಕ್ಕಳು ಮಾತ್ರ ಗುಂಟೂರಿನಲ್ಲಿಯೇ ಉಳಿದೆವು. ಆ ತರುವಾಯ ವಿರಸಂ (ವಿಪ್ಲವ ರಚಯಿತರ ಸಂಘ) ತಲೆಯೆತ್ತುತ್ತಿರುವಾಗ ನನಗೆ ಪಾರ್ಟಿಗಳ ಜೊತೆ ಸಂಪರ್ಕ ಬಂತು. ನಾನು ಆಗ ಗುಂಟೂರು ಎ. ಸಿ. ಕಾಲೇಜಿನಲ್ಲಿ ಬಿ.ಎ. ಫೈನಲ್ ಇಯರ್. ವಿಶಾಖದಲ್ಲಿ ಶ್ರೀಶ್ರೀಯವರ ಷಷ್ಟಿ ಪೂರ್ತಿ ನಡೆಯಿತು. ಆ ಕಾರ್ಯಕ್ರಮಕ್ಕೆ ನಾನು ನನ್ನ ಗೆಳತಿ ಆದಿಲಕ್ಷ್ಮಿ ಕೂಡಿ ಹೋಗಿದ್ದು, 'ಲೇಖಕರೇ ನೀವು ಯಾವ ಕಡೆ?' ಎಂಬ ವಿಶಾಖ ವಿದ್ಯಾರ್ಥಿಗಳ ಕರೆ ಕೇಳಿಸಿಕೊಳ್ಳುವುದು, ತರುವಾಯ ವಿರಸಂ ತಲೆಯೆತ್ತಿದ ಮೇಲೆ ಮೊದಲ ಸಮಾವೇಶಕ್ಕೆ ಕಮ್ಮಂಗೆ ಹೋಗುವುದು, ವಿರಸಂದಲ್ಲಿ ಸದಸ್ಯತ್ವ ತೆಗೆದುಕೊಳ್ಳುವುದು ಇವೆಲ್ಲವು ನಂತರದ ದಿನಗಳಲ್ಲಿ ನಡೆದ ಘಟನೆಗಳು.



**ಎ. ಕೆ. ಪ್ರ:** ಆ ಕಾಲದಲ್ಲಿ ನಿಮ್ಮ ಸಾಹಿತ್ಯ ಕೃಷಿ ಹೇಗಿತ್ತು? ನಿಮ್ಮ ಸಾಹಿತ್ಯದ ಮೇಲಾದ ಪ್ರಭಾವಗಳು ಯಾವವು?

**ಓಲ್ಗಾ:** ನಾನು ಚಿಕ್ಕವಳಿದ್ದಾಗಿನಿಂದ ಸಾಹಿತ್ಯವನ್ನು ಚೆನ್ನಾಗಿ ಓದುತ್ತಿದ್ದೆ. ಯಾವ ಸಾಹಿತ್ಯವೇ ಇರಲಿ ಓದುತ್ತಿದ್ದೆ. ಎಲ್ಲಾ ರೀತಿಯ ಕವಿತೆಗಳನ್ನು ಇಷ್ಟಪಡುತ್ತಿದ್ದೆ. ನಿಜ ಹೇಳಬೇಕೆಂದರೆ ಎಸ್.ಎಫ್.ಐ.ಯಲ್ಲಿ ಕೆಲಸ ಮಾಡುತ್ತಾ, ನಾನು ಬರೆದದ್ದೆಲ್ಲಾ ಪ್ರೇಮ ಕವಿತೆ. ನಾನು ಎಸ್.ಎಫ್.ಐ.ಯಲ್ಲಿ ಮಾತನಾಡುವ ರಾಜಕೀಯಕ್ಕೂ ಪ್ರೇಮ ಕವಿತೆಗೂ ಹೇಗೆ ತಳುಕುಹಾಕಬೇಕೋ, ನನಗೆ ಅರ್ಥವಾಗಲಿಲ್ಲ. ಆದರೂ ಬರೆಯುತ್ತಿದ್ದೆ. ಅವುಗಳನ್ನು ಯಾರಿಗೂ ತೋರಿಸಿರಲಿಲ್ಲ. ತೋರಿಸಿದರೆ ನಗುತ್ತಾರೆಂಬ ಭಯ. ಶ್ರೀಕಾಕುಳಂ ಚಳುವಳಿ ಆರಂಭವಾಗುವುದರೊಳಗೆ ಎಲ್ಲವನ್ನು ಹರಿದುಹಾಕಿದೆ. ಆದರೆ ನಾನು, ನನ್ನ ಗೆಳತಿ ಆದಿಲಕ್ಷ್ಮಿ ಎ. ಸಿ. ಕಾಲೇಜಿನ ಲೈಬ್ರರಿಯಲ್ಲಿಯ ಸಾಹಿತ್ಯವೆಲ್ಲವನ್ನು ಓದಿದ್ದೆವು – ಇಂಗ್ಲಿಷ್, ತೆಲುಗು ಸಹ. ಡಿಗ್ರಿಯಲ್ಲಿ ನನ್ನ ಗ್ರೂಪ್ ತೆಲುಗು–ಇಂಗ್ಲಿಷ್–ಹಿಸ್ಟರಿ. ದೇವಿಪ್ರಿಯ ನನ್ನ ಸಹಪಾಠಿ. ಅವರು ಆಗಲೇ ಪದ್ಯ ಕವಿತೆ ಬರೆಯುತ್ತಿದ್ದರು. ಅವರ ಗೆಳೆಯರು ಸುಗಂಬಾಬು, ಕಿರಣ್‌ಬಾಬು, ಕಮಲಾಕಾಂತ್ ಇವರೆಲ್ಲಾ ನಮ್ಮ ಮನೆಗೆ ಬರುತ್ತಿದ್ದರು. ಸಾಹಿತ್ಯ ಚರ್ಚೆಗಳನ್ನು ಮಾಡುತ್ತಿದ್ದೆವು. ದಿಗಂಬರ ಕವಿತೆಯನ್ನು ಆಸಕ್ತಿಯಿಂದ ಓದುತ್ತಿದ್ದೆವು. ನಾವೆಲ್ಲ ಸೇರಿ ಬರೆದ ಕವಿತೆಗಳನ್ನು ಸೇರಿಸಿ 'ಯುಗ ಸಂಗೀತ' ಎಂಬ ಹೆಸರಲ್ಲಿ ಒಂದು ಸಂಕಲನವನ್ನು ಪ್ರಕಟಿಸಿದೆವು. ನಾವು ಐದು ಜನ ಸೇರಿ 'ಪೈಗಂಬರ ಕವಿಗಳು' ಎಂದು ಹೆಸರು ಇಟ್ಟುಕೊಂಡಿದ್ದೆವು. ಅದೇ ಬಿಸಿಯಲ್ಲಿಯೇ 'ಯುಗ ಸಂಕೇತಂ' ಎಂಬ ಸಂಕಲನವನ್ನು ಸಹ ಪ್ರಕಟಿಸಿದೆವು. ಅಷ್ಟರಲ್ಲಿ ವಿರಸಂ ತೆರೆಗೆ ಸರಿಯುವುದರೊಂದಿಗೆ ಪೈಗಂಬರ ಕಾವ್ಯ ತೆರೆಗೆ ಸರಿಯಿತು.

**ಎ. ಕೆ. ಪ್ರ:** ವಿರಸಂದಲ್ಲಿರುವಾಗ ನಿಮ್ಮ ಸಾಹಿತ್ಯ ಕೃಷಿ...

**ಓಲ್ಗಾ:** ವಿರಸಂದಲ್ಲಿ ಮೊದಲನೆಯ ಬೃಹತ್ ಸಮಾವೇಶದಿಂದ ನಾಲ್ಕನೆಯ ಸಮಾವೇಶದವರೆಗೆ ಇದ್ದೆ. ಈ ಕಾಲದಲ್ಲಿ ನಾನು ಸಾಹಿತ್ಯ ಕೃಷಿ ಮಾಡುವುದಕ್ಕಿಂತ ಕಾರ್ಯಕರ್ತೆಯಾಗಿ ಕಾರ್ಯ ನಿರ್ವಹಿಸುವುದರ ಮೇಲೆಯೇ ಅಧಿಕ ಗಮನವಿಟ್ಟಿದ್ದೆ. ನಮಗಿಂತ ಬಹಳ ಚೆನ್ನಾಗಿ ಬರೆಯುವವರಿದ್ದಾರೆ – ಅವರನ್ನು ಅವರ ಕವಿತೆಯನ್ನು ಪ್ರಜೆಗಳಿಗೆ ಹತ್ತಿರಕ್ಕೆ ಕೊಂಡೊಯ್ಯುವುದೇ ನನ್ನ ಕಾರ್ಯವೆಂದು ಭಾವಿಸುತ್ತಿದ್ದೆ. ನಾಗರಿಕ ಹಕ್ಕುಗಳ ಚಳುವಳಿಯಲ್ಲಿ ಸಹ ಕೆಲಸ ಮಾಡುತ್ತಿದ್ದೆ. ಅದರಿಂದ ಸಾಹಿತ್ಯ ಕೃಷಿಗೆ ಸಮಯವು ಅಷ್ಟಾಗಿ ಸಿಗುತ್ತಿರಲಿಲ್ಲ. ಆದರೂ ಆ ಸಮಯದಲ್ಲಿ ನಾನು ಬರೆದ 'ಜೈಲುಕೋಣೆಯ ಆತ್ಮಕಥೆ' ಒಳ್ಳೆಯ ಕಥೆಯೆಂದು ನಾನು ಭಾವಿಸುವೆ. ಹಾಗೆ ಗುಂಟೂರು ವಿರಸಂ ಸಮಾವೇಶ (೧೯೭೨) ನಡೆದಾಗ 'ಪಂಚಾದಿ ನಿರ್ಮಲ ವಾರಸುದಾರಳು' ಎಂಬ ನನ್ನ ಕವಿತೆಯನ್ನು ಶ್ರೀ ಶ್ರೀ, ಕೊಡವಗಂಟಿ ಕುಟುಂಬರಾವು, ರಾವಿಶಾಸ್ತ್ರಿ ಮುಂತಾದ ಪ್ರಮುಖರು ಮೆಚ್ಚಿಕೊಂಡಿದ್ದು ಬಹಳ ಹೆಮ್ಮೆಯೆನಿಸಿ ನನ್ನಲ್ಲಿ ಅಹಂಕಾರಕ್ಕೆ ಎಡೆಮಾಡಿಕೊಟ್ಟಿತ್ತು. ಆಗ ಅದು ಸಹಜವೆಂದು ಭಾವಿಸುವೆ. ತರುವಾಯ

'ಜೀವನಾಡಿ' ಪತ್ರಿಕೆಗೆ ಆಗಾಗ ಕವಿತೆಗಳನ್ನು ಬರೆದೆನು. ಮುಖ್ಯವಾಗಿ ಸಮಾವೇಶಗಳನ್ನು ಆಯೋಜಿಸುವುದು, ಉಪನ್ಯಾಸಗಳನ್ನು ಮಾಡುವುದರೊಂದಿಗೆ ಕಾಲ ಕಳೆದುಹೋಗುತ್ತಿತ್ತು.

**ಎ. ಕೆ. ಪ್ರ:** ವಿರಸಂದಿಂದ ಹೊರ ಬರಲು – ರಾಜಕೀಯ ಕಾರಣಗಳು ಅಲ್ಲದೆ ಇತರ ಮತ್ತೇನಾದರೂ ಪ್ರತ್ಯೇಕ ಕಾರಣಗಳು ಇದ್ದವೇನು?

**ಓಲ್ಗಾ:** ವಿರಸಂದಿಂದ ಹೊರಗೆ ಬರಲು ಪ್ರಧಾನವಾಗಿ ಕೆಲಸಮಾಡಿದ್ದು ರಾಜಕೀಯ ಕಾರಣಗಳೇ. ವಿರಸಂ ಎರಡನೆಯ ಬೃಹತ್ ಸಮಾವೇಶ ತರುವಾಯ ವಿರಸಂ ಒಳಗೆ ಎರಡು ಗುಂಪು– ಚಾರು ಮಜುಂದಾರ್, ನಾಗಿರೆಡ್ಡಿ – ರಾಜಕೀಯಗಳು ಲೇಖಕರಿಂದ ಸ್ಪಷ್ಟವಾಗಿ ಹೊರಬಿದ್ದದ್ದು, ಅವುಗಳ ಮೇಲೆ ಚರ್ಚೆಗಳು ನಡೆಯುವುದು ಆರಂಭವಾಯಿತು. ಮೂರನೆಯ ಬೃಹತ್ ಸಮಾವೇಶದ ಹೊತ್ತಿಗೆ ಟಿ. ಎಸ್. ಗುಂಪಿನಿಂದ, ವಿರಸಂದಲ್ಲಿ ಕೆಲವು ಧೋರಣೆಗಳನ್ನು ವಿಮರ್ಶಿಸುತ್ತಾ ಸರಿಪಡಿಸುತ್ತಾ 'ಓಲ್ಗಾ ಡಾಕ್ಯುಮೆಂಟ್' ಹೆಸರಿನಿಂದ ಒಂದು ಡಾಕ್ಯುಮೆಂಟನ್ನು ಪಾರ್ಟಿ ಕಡೆಯಿಂದ ಆರಂಭಿಸಿದರು. ಅದರಿಂದ ಆ ವಿಭೇದಗಳು ಮತ್ತಷ್ಟು ಬಹಿರಂಗವಾದವು. ನಾಲ್ಕನೆಯ ಸಮಾವೇಶದ ಹೊತ್ತಿಗೆ ಇನ್ನೂ ಎರಡು ಗುಂಪುಗಳ ಲೇಖಕರು ಕೂಡಿ ಕಾರ್ಯನಿರ್ವಹಿಸದ ಪರಿಸ್ಥಿತಿ ಏರ್ಪಟ್ಟಿತು. ಟಿ. ಎಸ್. ಗ್ರೂಪಿನ ಲೇಖಕರೆಲ್ಲರೂ ಹೊರಬಂದೆವು.

ಇದನ್ನು ಹೀಗೆ ಒಂದೆಡೆ ಎಂದುಕೊಂಡರೆ, ವಿರಸಂದಲ್ಲಿ ಕೆಲಸ ಮಾಡುವುದು ನನಗೆ ಎರಡು ರೀತಿಯ ಅನುಭವಗಳನ್ನು ನೀಡಿದೆ. ಮೊದಲಸಾರಿ ವಿರಸಂದ ಬೃಹತ್ ಸಮಾವೇಶಕ್ಕೆ ಹೋದಾಗ ಮಹಾನ್ ಮಹಾ ವಿದ್ವಾಂಸರು, ಪ್ರಸಿದ್ಧ ಲೇಖಕ ಸಮೂಹವನ್ನು ನೋಡಿ ಆನಂದ ಆಶ್ಚರ್ಯ ಏಕಕಾಲಕ್ಕೆ ಅನುಭವಿಸಿದ್ದೆ. ಆ ಸಮಾವೇಶದಲ್ಲಿ ನಾನೊಬ್ಬಳೆ ಸ್ತ್ರೀಯೆಂಬ ಪ್ರಜ್ಞೆ ಮೂಡಿತ್ತು. ಅವರ ಆಲಿಂಗನಗಳು, ಕೈಕುಲುಕುಗಳು, ಭುಜಗಳ ಮೇಲೆ ಕೈಗಳನ್ನು ಹಾಕಿಕೊಂಡು ಸ್ನೇಹವನ್ನು ಪ್ರಕಟಿಸುವುದು ಇವೆಲ್ಲವುಗಳಿಗೆ ಅಪಶ್ರುತಿಯಾಗಿ ನಿಲ್ಲುವುದು ನನಗೆ ಎಲ್ಲೋ ಒಂಟಿ ಎಂಬ ಭಾವನೆ ಮೂಡಿಸಿತ್ತು. ಆದರೆ ಆಗ – 'ಸ್ತ್ರೀಯಾಗಿದ್ದರಿಂದ ಇದೆಲ್ಲ ಅನಿಸಿದೆ; ಸ್ತ್ರೀಯರು ಹೆಚ್ಚಿನ ಸಂಖ್ಯೆಯಲ್ಲಿ ಇಲ್ಲದಿರುವುದರಿಂದ ಈ ರೀತಿ ಅನಿಸುತ್ತದೆ ಇರಲಿ ಬಿಡು' ಎಂದುಕೊಂಡಿದ್ದೆ. ಕ್ರಮೇಣ ನಾನು ಸ್ತ್ರೀಯೆಂಬುದನ್ನು ಮರೆತು ಕಾರ್ಯನಿರ್ವಹಿಸದಿದ್ದರೆ ಇವರ ಗುಂಪಿನಲ್ಲಿ ಒಬ್ಬಳು ಆಗಲಾರೆನು ಎಂದು ಭಾವಿಸಿದೆನು. ನಿಜ ಹೇಳಬೇಕೆಂದರೆ ಕೆಲವು ವರ್ಷಗಳವರೆಗೆ ನಾನು ಸ್ತ್ರೀಯೆಂಬುದನ್ನು ಮರೆತು ಕೆಲಸದಲ್ಲಿ ಮುಳುಗಿ ಹೋದೆನು. ಆದರೆ ಒಂದು ಎರಡು ಅನುಭವಗಳಲ್ಲಿ ಸ್ತ್ರೀಯೆಂದು ನಾನು ಮರೆತದ್ದು ಉಳಿದವರು ಮರೆಯಲಿಲ್ಲವೆಂಬುವುದು ಅರ್ಥವಾಯಿತು. ಆಗ ಲೋಪ ನನ್ನ ಸ್ತ್ರೀತ್ವದ್ದಲ್ಲ; ಅದನ್ನು ಅರ್ಥಮಾಡಿಕೊಳ್ಳಲಾರದ ಪುರುಷ ನೈಜತೆಯಿದು ಎಂದು ತಿಳಿದುಕೊಂಡೆನು. ಕ್ರಮೇಣ ಸ್ತ್ರೀಯಾಗಿ ನನ್ನನ್ನು ನಾನು, ನನ್ನ ಅಸ್ತಿತ್ವವನ್ನು ಹುಡುಕಿಕೊಳ್ಳುವುದನ್ನು ಆರಂಭಿಸಿದೆನು. ಇದೆಲ್ಲಾ ನನ್ನಲ್ಲಿ ನಡೆದ ಅಂತರ್ಮಥನ.

ಆದರೆ ವಿರಸಂದಲ್ಲಿ ಎಲ್ಲರೂ ನನ್ನನ್ನು ಬಹಳ ಗೌರವದಿಂದ ಅಭಿಮಾನದಿಂದ ನೋಡುತ್ತಿದ್ದರು. ಹಿರಿಯರು ಆಪ್ಯಾಯತೆಯಿಂದ ಇರುತ್ತಿದ್ದರು. ಒಂದು ರೀತಿಯಲ್ಲಿ ಪಿತೃವಾತ್ಸಲ್ಯದಂತಹ 'ಹಿರಿಯ ತಲೆಮಾರಿನವರ' ಧೋರಣೆ. ಆದರೆ ನನ್ನನ್ನು ಒಬ್ಬ ಇಂಟಲೆಕ್ಚುವಲ್ಲಾಗಿ ಗುರುತಿಸಲು ಅವರಿಗೆ ಗೊಂದಲ ಎಂಬ ವಿಷಯ ನನಗೆ ಅರಿವಾಗುತ್ತಾ ಬಂತು. ಕಾರ್ಯಕಾರಿ ಸಮಿತಿ ಸಭೆಯಲ್ಲಿ ನಾನು ಬಹಳ ಪುಸ್ತಕಗಳನ್ನು ಅಧ್ಯಯನ ಮಾಡಿ ತೀರ್ಮಾನಗಳ ಮೇಲೆ ಮಾತನಾಡಿದರೆ ಭಯಂಕರವಾದ ಮೌನ. ಆ ವಿಷಯವನ್ನು ಅಲ್ಲಿಗೆ ನಿಲ್ಲಿಸಿ ಮುಂದಿನ ತೀರ್ಮಾನಕ್ಕೆ ಮುಂದುವರಿಯುತ್ತಿದ್ದರು. ನನಗೆ ಬಹಳ ಅವಮಾನ ಅನಿಸುತ್ತಿತ್ತು. ಹಾಗೆ ಒಂದು ಸಾರಿ ಸರ್ವಸದಸ್ಯರ ಸಭೆಯಲ್ಲಿ ನಾನು ಪ್ರಸ್ತಾಪಿಸಿದ ತೀರ್ಮಾನವನ್ನು ತಿಳಿಸಿದಾಗ ನಾನು ಬಹಳ ಗೌರವಿಸುತ್ತಿದ್ದ ನಾಯಕರೊಬ್ಬರು 'ಓಲ್ಗಾ ಹೆಣ್ಣುಮಗಳು ಆದ್ದರಿಂದ ಓಟುಗಳು ಅತ್ತಕಡೆ ಬಿದ್ದವು' ಎಂದು ವ್ಯಾಖ್ಯಾನ ಮಾಡಿದಾಗ ನಿರಾಶೆಗೊಂಡೆ. ತುರ್ತು ಪರಿಸ್ಥಿತಿಯ ತರುವಾಯ ಜನಸಾಹಿತಿ ತಲೆಎತ್ತಿತು. ಅದರಲ್ಲಿ ಕ್ರಿಯಾಶೀಲಳಾಗಿ ಕೆಲಸ ಮಾಡುತ್ತಿದ್ದೆನು. ೧೯೭೭ರ ಮೇ ತಿಂಗಳಲ್ಲಿ ಚಲಂ ಅವರು ಕಾಲವಾದರು. ಆಮೇಲೆ ಅದರಿಂದಲೂ ಹೊರಬಂದೆ.

**ಎ. ಕೆ. ಪ್ರ:** ಮತ್ತೆ ಸ್ತ್ರೀವಾದದ ರಾಜಕೀಯಗಳತ್ತ ಪಯಣವು ಯಾವಾಗ ಆರಂಭವಾಗಿದೆ?

**ಓಲ್ಗಾ:** ೧೯೮೦ರಲ್ಲಿ ಜನಸಾಹಿತಿಯಿಂದ ಹೊರಗೆ ಬಂದಾಗ ನಾನು ಒಂಟಿಯಾಗಿ ಉಳಿದೆನು. ಅಲ್ಲಿಯವರೆಗೆ ನನ್ನ ಸುತ್ತ ಇರುವ ರಾಜಕೀಯಗಳಲ್ಲಿ ಮುಖ್ಯವಾಗಿ ಪುರುಷಾಧಿಪತ್ಯ ಧೋರಣೆಗಳ ಕುರಿತು ಆಲೋಚಿಸುವುದನ್ನು ಆರಂಭಿಸಿದೆನು. ಇಷ್ಟೆಲ್ಲ ಚಳುವಳಿಗಳಲ್ಲಿ ಸ್ತ್ರೀಯರಿಗಿರುವ ಸ್ಥಾನವೇನು? ಎಂಬ ಪ್ರಶ್ನೆಗಳು ನನ್ನನ್ನು ಕಾಡಿದವು. ಆಗ ನನ್ನ ಜೀವನದಲ್ಲಿ ಒಂದು ನಿರ್ಣಾಯಕ ಮಾರ್ಗ ಆಯ್ದುಕೊಳ್ಳಬೇಕಾದ ಪರಿಸ್ಥಿತಿ ಎದುರಾಯಿತು. ತೆನಾಲಿಯಲ್ಲಿ ಲೆಕ್ಚರರಾಗಿ (ವಿ. ಎಸ್. ಆರ್. – ವೈ. ಆರ್. ಎನ್. ಕಾಲೇಜಿನಲ್ಲಿ) ಕೆಲಸ ಮಾಡುತ್ತಿದ್ದೆ. ಇಬ್ಬರು ಮಕ್ಕಳು. ಅವರನ್ನು ಬೆಳೆಸುತ್ತಾ ಉದ್ಯೋಗ ನಿರ್ವಹಿಸುತ್ತಾ ಜೀವನವನ್ನು ಕಳೆಯಬೇಕಾ? ರಾಜಕೀಯ ಜೀವನದಿಂದ ದೂರ ಇರಬಲ್ಲೆನಾ? ಇದೊಂದು ಪ್ರಶ್ನೆ. ನನ್ನ ವೈವಾಹಿಕ ಜೀವನ ಸಹ ಅದೇ ಸಮಯದಲ್ಲಿ ಸಮಸ್ಯೆಯಲ್ಲಿತ್ತು. ಅಲ್ಲಿ ರಾಜಿಮಾಡಿಕೊಳ್ಳಬೇಕಾ, ಇಲ್ಲ ನನ್ನ ಮಾರ್ಗವನ್ನು ನಾನು ಆರಿಸಿಕೊಳ್ಳಬೇಕಾ – ಇದು ಮತ್ತೊಂದು ಪ್ರಶ್ನೆ. ಸಲಹೆ ನೀಡುವವರು ಯಾರೂ ಇಲ್ಲ. ಆ ಸಮಯದಲ್ಲಿ ನಾನು ರಾಜಕೀಯಗಳನ್ನು ಬಿಟ್ಟು ಜೀವಿಸಲಾರೆನೆಂಬ ನಿರ್ಣಯಕ್ಕೆ ಬಂದೆನು. ಫೆಮಿನಿಸ್ಟ್ ರಾಜಕೀಯಗಳು ಆಗಾಗಲೇ ನನ್ನನ್ನು ಕರೆಯುತ್ತಿದ್ದವು. ಫೆಮಿನಿಸ್ಟ್ ಸೈದ್ಧಾಂತಿಕ ಅಧ್ಯಯನ, ಅದನ್ನು ತೆಲುಗು ಪ್ರಜೆಗಳಿಗೆ ಅರ್ಥವಾಗುವಂತಹ ರೀತಿಯಲ್ಲಿ ಪರಿಚಯ ಮಾಡುವುದು – ಇವು ಮೊದಲ ಜವಾಬ್ದಾರಿಗಳು. ಈಗ ಸಾಹಿತ್ಯ ಜೀವನ ಮತ್ತು ಕಾರ್ಯಕರ್ತೆಯ ಬದುಕಿಗೆ ಭೇದವಿಲ್ಲದಂತಾಗಿದೆ. ನಾನು ನಂಬಿದ ಸ್ತ್ರೀವಾದ ಸಿದ್ಧಾಂತದ ಪ್ರಕಾರ ವೈವಾಹಿಕ ಜೀವನದಲ್ಲಿ ಸಹ ರಾಜಿಯಾಗದೆ ಹೊರಗೆ ಬಂದಿದ್ದೇನೆ. ಕ್ರಮೇಣ ಬರೆಯುವುದನ್ನು ಆರಂಭಿಸಿದೆನು. 'ಆತಡು – ಆಮೆ – ಮನಂ' ಆತ – ಆಕೆ – ನಾವು ಕೃತಿಯಲ್ಲಿ ಸ್ತ್ರೀವಾದ ಸಾಹಿತ್ಯ ವಿಮರ್ಶೆ ಆರಂಭವಾಯಿತು. ಆ ತರುವಾಯ ರಾಜಕೀಯ ಕಥೆಗಳು – ಸಹಜ – ಸ್ವೇಚ್ಛೆ – ಮಾನವಿ – ಕಣ್ಣೀರ ಅಲೆಗಳ ಬೆಳದಿಂಗಳು – ಆಕಾಶದಲ್ಲಿ ಅರ್ಧ (ಕನ್ನಡಕ್ಕೆ 'ಉಷೋದಯ'ವೆಂದು ಅನುವಾದಗೊಂಡಿದೆ) – ಗುಲಾಬಿಗಳು ಮುಂತಾದ ಕಾದಂಬರಿಗಳು ಒಂದುಕಡೆ, ಭೂಮಿಪುತ್ರಿಕ – ಸಾಮಾನ್ಯರ ಸಾಹಸಂ – ಮೂರು ತಲೆಮಾರುಗಳು – ಹುಟ್ಟಿದ ಮಗುವಿಗೆ



ತಾಯಿ ಪತ್ರಗಳಂತಹ ಫೆಮಿನಿಸ್ಟ್ ಅನುವಾದಗಳು ಮತ್ತೊಂದೆಡೆ, ನಮಗೆ ಗೋಡೆಗಳು ಇಲ್ಲ – ಕುಟುಂಬ ವ್ಯವಸ್ಥೆ: ಮಾರ್ಕ್ಸಿಸಂ ಎಂದೂ ಸ್ತ್ರೀವಾದ ಸೈದ್ಧಾಂತಿಕ ಪ್ರತಿಪಾದನೆಗಳು ಮತ್ತೊಂದು ಕಡೆ ಕ್ರಮವಾಗಿ ಸುಮಾರು ಒಂದೇ ಸಮಯದಲ್ಲಿ ಬೆಳಕು ಕಂಡವು. ಈ ದಿನಗಳಲ್ಲಿಯೇ ತೆಲಂಗಾಣದಲ್ಲಿ ಪ್ರತಿ ಜಿಲ್ಲಾ, ಮಂಡಲ ಕೇಂದ್ರಗಳಲ್ಲಿ ಸ್ತ್ರೀವಾದದ ಬಗ್ಗೆ ಉಪನ್ಯಾಸಗಳನ್ನು ನೀಡಿದೆನು. ಅಂತಹ ಆಸಕ್ತಿ ತೆಲಂಗಾಣದಲ್ಲಿ ಆ ದಿನಗಳಲ್ಲಿ ಇತ್ತು.

ಬಹು ನೆಲೆಯ ಅಸ್ತಿತ್ವಗಳನ್ನು ಕುರಿತು ಆ ಅಸ್ತಿತ್ವಗಳ ಅಧಿಕಾರದಿಂದ ಸಾಮಾಜಿಕ ಗೌರವವನ್ನು ನ್ಯಾಯವನ್ನು ಹೊಂದುವಂತೆ ಮಾಡುವ ಯಾವುದೇ ಹೋರಾಟವಾದರೂ ಪ್ರತಿರೋಧವಾದರೂ ಕಾರ್ಯ ಕಲಾಪಗಳಾದರೂ ಸ್ತ್ರೀವಾದಿಗಳು ಬಲಗೊಳ್ಳುತ್ತಾರೆ. ಪ್ರಸ್ತುತ ಟ್ರಾನ್ಸ್ ಜೆಂಡರ್ ಅಸ್ತಿತ್ವಕ್ಕೆ ಗೌರವ ಕಲ್ಪಿಸುವುದಕ್ಕೆ, ಸಮಾಜದಲ್ಲಿ ಅವರು ತಮ್ಮ ಹಕ್ಕುಗಳನ್ನು ಸಾಧಿಸಿಕೊಳ್ಳುವುದಕ್ಕೆ ಸ್ತ್ರೀವಾದಿಗಳು ಅವರ ನೆರವಾಗಿ ನಿಲ್ಲುತ್ತಾರೆ. ಹೀಗೆ ಪ್ರತಿ ಅಸ್ತಿತ್ವವನ್ನು ಕುರಿತು ಗೌರವಿಸುವುದೇ ಸ್ತ್ರೀವಾದದ ವೈಶಿಷ್ಟ್ಯತೆ. ಎಲ್ಲಾ ಅಸ್ತಿತ್ವಗಳು ಒಬ್ಬರೊಂದಿಗೆ ಒಬ್ಬರು ಕೂಡಿದಾಗ ಬಲ ಬರುತ್ತದೆ. ಯಾರ ಪ್ರತ್ಯೇಕತೆ ಅವರದೇ. ಎಲ್ಲರೂ ಕೂಡಿ ಸಾಧಿಸಬೇಕಾದದ್ದೆ – ಸಾಮಾಜಿಕ ನ್ಯಾಯ.

**ಎ. ಕೆ. ಪ್ರ:** ರಾಜಕೀಯ ಕಥೆಗಳು ಬರೆದ ಆರಂಭದ ದಿನಗಳಲ್ಲಿ ಕಠಿಣವಾಗಿ ಕೇಳಿಸಿದ ನಿಮ್ಮ ಧ್ವನಿ ವಿಮುಕ್ತದವರೆಗೆ ಬರುವುದರೊಳಗೆ ಸ್ಥಿರವಾಗಿ, ಶಾಂತವಾಗಿ, ಮಂದ್ರವಾಗಿ, ಗಂಭೀರವಾಗಿ ಬದಲಾಗಿದೆನಿಸುತ್ತದೆ. ಇದನ್ನು ನೀವು ಎಷ್ಟರ ಮಟ್ಟಿಗೆ ಅಂಗೀಕರಿಸುವಿರಿ?

**ಓಲ್ಗಾ:** ಆ ಬದಲಾವಣೆ ಬಾರದಿದ್ದರೆ ಒಬ್ಬ ಲೇಖಕಿಯಾಗಿ ನಾನು ವಿಫಲವಾದಂತೆ ಎಂದು ಭಾವಿಸುವೆ. ನನ್ನ ಜೀವನಾನುಭವಗಳು ಸಾಮಾಜಿಕ ಚಲನಗಳ ಪರಿಶೀಲನೆ, ತಾತ್ವಿಕ ಅನ್ವೇಷಣೆ ಇವೆಲ್ಲವು ನನ್ನನ್ನು ನನ್ನ ಉದ್ರಿಕ್ತತೆಯಿಂದ ವಿಮುಕ್ತ ಮಾಡುವ ಒಂದು ಸ್ಥಿರವಾದ ವಾದವನ್ನು ಬಲವಾಗಿ – ಅದೇ ಸಮಯದಲ್ಲಿ ಶಾಂತವಾಗಿ ಕೇಳಿಸುವ ಪರಿಣತಿಯನ್ನು ಕಲ್ಪಿಸಿವೆಯೆಂದು ನಾನು ಭಾವಿಸುವೆನು. ಯಾವುದೇ ಲೇಖಕನಿಗಾದರೂ ಇಂಥ ಬದಲಾವಣೆ ಸಹ ಸಹಜವೆಂದು ಅನಿಸುತ್ತದೆ. ಒಂದೊಂದು ಸಾರಿ ಈ ಬದಲಾವಣೆ ಅತ್ತಿಂದ ಇತ್ತ ಆಗಬಹುದು. ಉದಾಹರಣೆಗೆ ತನ್ನ ಮೊದಲ ಬರಹದಲ್ಲಿ ಬಹಳ ಸಂಯಮವನ್ನು, ಪ್ರೇಮವನ್ನು ತೋರಿಸಿದ ಶರಚ್ಚಂದ್ರರು ಶೇಷ ಪ್ರಶ್ನೆಯಲ್ಲಿ ಮಾತ್ರ ಕಮಲಳಿಂದ ಬಹಳ ಕಠಿಣವಾದ ಪ್ರಶ್ನೆಗಳು ಕಠಿಣವಾಗಿಯೇ ಕೇಳಿಸಿದ್ದಾನೆ. ಅಂದರೆ ಇದನ್ನು ಆಧರಿಸಿ ಎಲ್ಲಿ ತಮ್ಮ ರಚನಾ ಪದ್ಧತಿ ಬದಲಾಯಿಸಿಕೊಳ್ಳಬೇಕು ಎಂಬ ಪ್ರಣಾಳಿಕೆಯು ಲೇಖಕರಿಗೆ ತಪ್ಪದೆ ಇರುತ್ತದೆ. ಅದು ಬಹಳ ಸಾರಿ ವಾಚಕರು ಗಮನಿಸುತ್ತಾರೆ.

**ಎ. ಕೆ. ಪ್ರ:** ನಿಮ್ಮ ತಾತ್ವಿಕ ಅನ್ವೇಷಣೆಯಲ್ಲಿ – ಆಸ್ಮಿತ ಕಾರ್ಯಕಲಾಪಗಳ ಬಗ್ಗೆ ಪ್ರಸ್ತಾಪ




ಮಾಡಿದರಲ್ಲ! ಮುಖ್ಯವಾಗಿ 'ಆಸ್ಮಿತ'ದೊಂದಿಗೆ ನಿಮಗೆ ಹೇಗೆ ಅನುಬಂಧ ಏರ್ಪಟ್ಟಿತು?

**ಓಲ್ಗಾ:** ೮೦ರ ದಶಕದಲ್ಲಿ ಫೆಮಿನಿಸ್ಟ್‌ರಾಗಿ ನಾವು ಒಬ್ಬೊಬ್ಬರಾಗಿ, ಆಗಿಂದಾಗ್ಗೆ ಅಗತ್ಯ ರೀತಿಯಲ್ಲಿ ಹತ್ತುಜನ ಕೂಡಿ ಒಂದು ಟೀಂ ಆಗಿ, ರೂಪುಗೊಳ್ಳುವ ಸಮಸ್ಯೆಗಳ ಮೇಲೆ ಕೆಲಸ ಮಾಡುತ್ತಿದ್ದೆವು. ೧೯೮೨ರಲ್ಲಿ ಫೆಮಿನಿಸ್ಟ್ ಸ್ಟಡೀ ಸರ್ಕಲ್ ಹೆಸರಿನಿಂದ ಸ್ತ್ರೀವಾದ ಸಿದ್ಧಾಂತ ಚರ್ಚೆಗಳು ಮಾಡಿ ಪುಸ್ತಕಗಳನ್ನು ಪ್ರಕಟಿಸಿ ಸಾಂಸ್ಕೃತಿಕ ಪ್ರದರ್ಶನಗಳನ್ನು ನೀಡುತ್ತಿದ್ದೆವು. ಒಂದು ಸಂಸ್ಥೆ ಇದ್ದರೆ ಸ್ತ್ರೀಯರು ಬಂದು ತಮ್ಮ ನೋವನ್ನು ಹೇಳಿಕೊಂಡು ಸಾಂತ್ವನ ಹೊಂದಲು ಸಾಧ್ಯ ಎಂದೆನಿಸಿತು. ಸಂಸ್ಥೆ ಅಂದರೆ ಒಂದು ನೆಲೆ. 'ಆಸ್ಮಿತ'ಗೆ ನಾನು ವ್ಯವಸ್ಥಾಪಕ ಅಧ್ಯಕ್ಷಳು. ವಸಂತ ಕನ್ನಬಿರಾನ್, ಕಲ್ಪನ ಕನ್ನಬಿರಾನ್, ರುಕ್ಮಿಣಿ, ವಿಜಯ, ಜಮುನ, ವಕುಳಾಭರಣಂ ಲಲಿತಾ.. ಇನ್ನೂ ಕೆಲವರು ಕೂಡಿ ಒಂದು ಚಿಕ್ಕ ಕೋಣೆಯಲ್ಲಿ ಇಪ್ಪತ್ತೈದು ವರ್ಷಗಳ ಕೆಳಗೆ ಆಸ್ಮಿತವನ್ನು ಪ್ರಾರಂಭಿಸಿದೆವು.

ಪ್ರಾರಂಭಿಸಿದಾಗ ಸ್ತ್ರೀಯರು ತಮ್ಮ ನೋವನ್ನು ಹೇಳಿಕೊಳ್ಳಲು ಇದು ಒಂದು ನೆಲೆ ಎಂಬ ಭಾವನೆಯ ಹೊರತು ಮತ್ತೊಂದು ಆಲೋಚನೆ ಇರಲಿಲ್ಲ. ಆದರೆ ನಾವೆಲ್ಲರು ಕೆಲಸದ ರಾಕ್ಷಸಿಗಳು. ವರ್ಷ ಮುಗಿಯುವುದರೊಳಗೆ 'ಸ್ತ್ರೀಯರ ಮೇಲೆ ಹಿಂಸೆ ಮಾನವ ಹಕ್ಕುಗಳ ಉಲ್ಲಂಘನೆ' ಎಂಬ ಶೀರ್ಷಿಕೆಯೊಂದಿಗೆ ಎರಡು ಸಾವಿರ ಜನ ಗ್ರಾಮೀಣ ಮಹಿಳೆಯರನ್ನು ಹೈದರಾಬಾದಿಗೆ ಕರೆಯಿಸಿ; ಮೂರು ದಿನಗಳ ಮಹಾಸಭೆ ನೆರವೇರಿಸಿದೆವು. ಕನ್ನಬಿರಾನ್, ಕಾಳೋಜಿ ಮುಂತಾಗಿ ಅನೇಕ ಜನ ಆ ಸಮಾವೇಶದಲ್ಲಿ ಮಹಿಳೆಯರನ್ನು ಉದ್ದೇಶಿಸಿ ಮಾತನಾಡಿದರು. ಆ ಮೂರು ದಿನಗಳ ಸಮಾವೇಶದಲ್ಲಿ ಗ್ರಾಮೀಣ ಮಹಿಳೆಯರಿಗೆ ಎಂತಹ ವಿಷಯಗಳು ಯಾವ ಭಾಷೆಯಲ್ಲಿ ಹೇಗೆ ಹೇಳಬೇಕು, ಅವರ ಮಾನಸಿಕ – ರಾಜಕೀಯ ಅಗತ್ಯಗಳೇನು ಎಂಬುದು ನಮಗೆ ಅರ್ಥವಾಯಿತು. ವಿಷಯಕ್ಕಾಗಿ ಅರಿವಿಗಾಗಿ ಅವರಲ್ಲಿ ಎಷ್ಟೊಂದು ದಾಹವಿತ್ತೋ ಅದು ನಮಗೆ ಗೊತ್ತಾಯಿತು. ನಿಜವಾಗಿ ಯಾವುದೇ ಪ್ರಜಾಸಂಘದಲ್ಲಿ ಕೆಲಸ ಮಾಡಿದಾಗಲೂ ಸಹ ನನಗೆ ಪ್ರಜೆಗಳ ಜೊತೆ ಇಂಥ ಹತ್ತಿರ ಸಂಬಂಧವಿರಲಿಲ್ಲ. ಆಗಿನಿಂದ 'ಆಸ್ಮಿತ' ಗ್ರಾಮೀಣ ಸ್ಥಾಯಿ ಮಹಿಳೆಯರಿಗಾಗಿ ಅನೇಕ ಕಾರ್ಯಕ್ರಮಗಳ ರೂಪ ಪಡೆಯಿತು. ಜಾತ್ರೆಗಳು, ಶೈಕ್ಷಣಿಕ ಶಿಬಿರಗಳು, ರಾಜಕೀಯ ತರಗತಿಗಳಂತಹ ಕಾರ್ಯಾಗಾರಗಳನ್ನು ನೂರಾರು ಸಂಖ್ಯೆಯಲ್ಲಿ ನಿರ್ವಹಿಸಿರುತ್ತೇವೆ. ಪಿತೃಸ್ವಾಮ್ಯದಿಂದ ಜಾಗತೀಕರಣದವರೆಗೆ ಅವರೊಂದಿಗೆ ನಾವು ಮಾತನಾಡಿರದ ವಿಷಯಗಳಿಲ್ಲ. ಎಲ್ಲಾ ಅವರ ಭಾಷೆಗಳಲ್ಲಿಯೇ ಅವರ ಜೀವನ ಉದಾಹರಣೆಗಳೊಂದಿಗೆ ಅವರಿಗೆ ಅರ್ಥವಾಗುವಂತಹ ರೀತಿಯಲ್ಲಿ. ಇದೊಂದು ಸುಂದರ ಅನುಭವ.

ಇದರ ಜೊತೆ ಲೇಖಕಿಯರೊಂದಿಗೆ ಕೆಲಸ ಮಾಡುವುದು, 'ನೀಲಿ ಮೇಘಗಳು' ಅಂತಹ ಕವನ ಸಂಕಲನ ಪ್ರಕಟಿಸುವುದು, women writing and censorship ಎಂಬ ಅಂಶದ ಮೇಲೆ ಹನ್ನೊಂದು ಭಾರತೀಯ ಭಾಷೆಗಳ ಲೇಖಕಿಯರೊಂದಿಗೆ ಸಮಾವೇಶಗಳನ್ನು ನಿರ್ವಹಿಸುವುದು, 'ಮಹಿಳಾವರಣಂ'ದಂತಹ ಸ್ತ್ರೀಯರ ಚರಿತ್ರೆ ಪರಿಶೋಧನಾ ಗ್ರಂಥಗಳ ರಚನೆ – ಪ್ರಕಟಣೆ, ಸ್ತ್ರೀವಾದ ಸಿದ್ಧಾಂತ ನಿರ್ಮಾಣ... ಇವೆಲ್ಲವೂ ನಡೆಯುತ್ತಲೇ ಇದ್ದವು. ಈ ಸ್ತ್ರೀವಾದ ಸಿದ್ಧಾಂತ ನಾನು ಬರೆದ ಹಾಡುಗಳ ಮೂಲಕ, ಬೀದಿ ನಾಟಕಗಳ ಮೂಲಕ ನಾನಾ ರೀತಿಯ ಕಲಾ ಪ್ರಕಾರಗಳ ಮೂಲಕ ಗ್ರಾಮೀಣ ಸ್ತ್ರೀಯರಿಗೆ ತಲುಪಿಸುತ್ತಿದ್ದೆವು. ಇದೊಂದು ಅದ್ಭುತವಾದ ಪ್ರಕ್ರಿಯೆ, ಸಿದ್ಧಾಂತ ಜೀವನ ಮಧ್ಯೆ ಮೇರೆಗಲ್ಲುಗಳನ್ನು ಕಿತ್ತೆಸೆಯುವ ಪ್ರಕ್ರಿಯೆ. ಅದನ್ನು 'ಆಸ್ಮಿತ' ಜೊತೆ ಕಾರ್ಯನಿರ್ವಹಿಸಿದ ನಾವೆಲ್ಲರೂ ಆಸ್ವಾದಿಸಿದ್ದೇವೆ. ಹಾಗೆ ಬೀಜಿಂಗ್‌ನಲ್ಲಿ ಜಾಗತಿಕ ಮಹಿಳಾ ಅಧಿವೇಶನದಲ್ಲಿ ಪಾಲ್ಗೊಳ್ಳುವುದು, ಆ ಅಧಿವೇಶನದ ಆಶಯಗಳನ್ನು ನಾಲ್ಕು ದಕ್ಷಿಣಾದಿ ರಾಜ್ಯಗಳಲ್ಲಿ ಗ್ರಾಮೀಣ ಮಹಿಳೆಯರಿಗೆ ತಲುಪಿಸುವ ಸಲುವಾಗಿ ವಿಶ್ವಸಂಸ್ಥೆಯೊಂದಿಗೆ ಕೂಡಿ ಕೆಲಸಮಾಡುವುದು ಒಳ್ಳೆ exposureನ್ನು ಸಹ ನೀಡಿವೆ. ಇದರಿಂದ ನನ್ನ ಸಾಹಿತ್ಯದಲ್ಲಿ ಒಂದು ಗುಣಾತ್ಮಕವಾದ ಬದಲಾವಣೆ ಬಂದಿದೆಯೆಂದು ನಾನು ಭಾವಿಸುವೆ.

೨೦೦೦ದ ಇಸ್ವಿಯಲ್ಲಿ IAWS (Indian Association of Women Studies) ರಾಷ್ಟ್ರೀಯ ಅಧಿವೇಶನವು ಹೈದರಾಬಾದಿನಲ್ಲಿ ಆಸ್ಮಿತ ಆತಿಥ್ಯದೊಂದಿಗೆ ನಡೆಯಿತು. ದೇಶದ ನಾನಾ ಮೂಲೆಗಳಿಂದ ಪ್ರತಿನಿಧಿಗಳು ಬಂದಿದ್ದರು. ಆ ಸಂದರ್ಭದಲ್ಲಿ ಅವರಿಗಾಗಿ 'ಯುದ್ಧಮು–ಶಾಂತಿ' ನೃತ್ಯರೂಪಕವನ್ನು ನಾನು ಬರೆದಾಗ ಆಸ್ಮಿತ ವೃಂದ ನಿರ್ಮಾಣ ಸಾರಥ್ಯವನ್ನು ವಹಿಸಿಕೊಂಡಿತು.

ಸಂಪ್ರದಾಯ ಸಂಗೀತವನ್ನು, ನೃತ್ಯವನ್ನು ಆಧುನಿಕ ವಿಚಾರಗಳನ್ನು ಹೇಳಲು ಬಳಸಿಕೊಳ್ಳಬೇಕೆಂಬ ಆಲೋಚನೆಯೊಂದಿಗೆ ಇದನ್ನು ರೂಪಿಸಿದೆನು. ತರುವಾಯ 'ಲಕ್ಷ್ಮಣ ರೇಖೆ' ನೃತ್ಯರೂಪಕ – ಕುಟುಂಬ ಹಿಂಸೆ ಕುರಿತು ಬರೆದು ಪ್ರದರ್ಶಿಸಿದೆವು. ನನ್ನ ಈ ಬರೆಹ 'ಅಸ್ಮಿತ' ಜೊತೆ ನನ್ನ ಕೆಲಸಗಳಲ್ಲಿಯ ಭಾಗವಾಗಿಯೇ ಬಂದವು. ವಿದ್ಯಾರ್ಥಿಗಳ ಮಧ್ಯೆ, ಶಿಕ್ಷಿತ ಮಧ್ಯಮ ವರ್ಗದ ಸ್ತ್ರೀಯರ ಮಧ್ಯೆ ಇವುಗಳನ್ನು ಕೆಲವು ಸಾವಿರ ಪ್ರದರ್ಶನಗಳನ್ನು ನೀಡಿದ್ದೆವು. ಆ ತರುವಾಯ ವಸಂತ ಸಹ ಇಂಗ್ಲಿಷ್‌ನಲ್ಲಿ ಕೆಲವು ನೃತ್ಯರೂಪಕಗಳನ್ನು ಬರೆದರು. ನಾನು ಅನೇಕ ಕಾನೂನುಗಳನ್ನು ವಿಶ್ವಸಂಸ್ಥೆಯ ಒಪ್ಪಂದಗಳನ್ನು ತೆಲುಗಿಗೆ ಅನುವಾದ ಮಾಡಿದೆನು. ಕಾನೂನು ಪರಿಭಾಷೆ ಪದಗಳಿಂದ ತುಂಬಿದವುಗಳನ್ನು ಸರಳವಾದ ತೆಲುಗು ಭಾಷೆಗೆ ತರುವುದು ಒಂದು ಒಳ್ಳೆಯ ಕಲಿಕಾ ಪ್ರಕ್ರಿಯೆ. ಹೀಗೆ 'ಅಸ್ಮಿತ' ಜೊತೆ ನನಗಿರುವ ರಚನಾ ಶಕ್ತಿಯನ್ನು ಉಪಯೋಗಿಸಿಕೊಂಡು ಕೆಲವು ಕೆಲಸಗಳನ್ನು ಮಾಡಿದೆನು – ಆಸ್ಮಿತಕ್ಕಿರುವ ಸಂಪನ್ಮೂಲಗಳಿಂದ ನಾನು ಬಹಳಷ್ಟು ಕಲಿತಿರುವೆ.

**ಎ. ಕೆ. ಪ್ರ :** ಕಥೆ, ಕಾದಂಬರಿ, ವಿಮರ್ಶೆ, ಅನುವಾದ, ಸಂಪಾದನೆ, ಪ್ರಕಟಣೆ, ಆಸ್ಮಿತ ನಿರ್ವಹಣೆಯ ಜೊತೆಗೆ ನಿಮ್ಮ ದೃಷ್ಟಿ ಸಿನಿಮಾ, ಟಿ.ವಿ. – ದೃಶ್ಯ ಮಾಧ್ಯಮಗಳ ಕಡೆಗೂ ಹರಿದಿದ್ದನ್ನು ಸ್ವಲ್ಪ ವಿವರಿಸುತ್ತೀರಾ?

**ಓಲ್ಗಾ :** ಸಿನಿಮಾಗಳ ಮೇಲೆ ನನಗೆ ಬಾಲ್ಯದಿಂದಲೂ ಬಹಳ ಆಸಕ್ತಿ. ಸಾಹಿತ್ಯ ಸಿನಿಮಾಗಳ ಮಧ್ಯೆ ಬೆಳೆದಿರುವೆ. ಫಿಲಿಂ ಕ್ಲಬ್‌ಗಳಿಂದ ಒಳ್ಳೆ ಸಿನಿಮಾಗಳ ಮೇಲೆ ಅಭಿರುಚಿ ಬೆಳೆಯಿತು. ೧೯೮೬ನೆಯ ಇಸ್ವಿಯಲ್ಲಿ ಯಾವ ಉದ್ಯೋಗವೂ ಇಲ್ಲದೆ ಖಾಲಿಯಾಗಿರುವಾಗ ಪೂನಾ ಫಿಲಿಂ ಇನ್‌ಸ್ಟಿಟ್ಯೂಟ್‌ನಲ್ಲಿ ಫಿಲಿಂ ಅಪ್ರಿಷಿಯೇಷನ್ ಕೋರ್ಸು ಮಾಡಿದೆ. ಉಷಾಕಿರಣ್ ಮೂವೀಸ್ ಕಥಾ ವಿಭಾಗದಲ್ಲಿ ಸೀನಿಯರ್ ಎಗ್ಜಿಕ್ಯೂಟಿವ್ ಆಗಿ ಸುಮಾರು ಹತ್ತು ವರ್ಷ ಕೆಲಸ ಮಾಡಿ ಒಳ್ಳೆ ಅನುಭವ ಸಂಪಾದಿಸಿದೆನು.

ಇನ್ನು ಕುಟುಂಬರಾವ್‌ರಿಗೆ ಥಿಯೇಟರ್‌ನಲ್ಲಿ ಬಹಳ ಅನುಭವ ಇದೆ. ಸಿನಿಮಾಗಳ ಕುರಿತು ಆಸಕ್ತಿ ಇದೆ. ಇಬ್ಬರೂ ಕೂಡಿ ಅನೇಕ ಇಂಟರ್‌ನ್ಯಾಷನಲ್ ಫಿಲಿಂ ಫೆಸ್ಟಿವಲ್ಸ್‌ಗಳಿಗೆ ಹೋಗುತ್ತಿದ್ದೆವು– ನನ್ನ ವೃತ್ತಿಜೀವನ ಭಾಗವಾಗಿ, ಇವೆಲ್ಲವೂ ನಮ್ಮನ್ನು ಸಿನಿಮಾ ನಿರ್ಮಿಸೆಂದು ಪ್ರೇರಣೆ ಮಾಡಿದವು. ನಮ್ಮ ಮಿತ್ರ ವೃಂದ ಪ್ರೋತ್ಸಾಹಿಸಿತು. ಎಲ್ಲರೂ ಕೂಡಿ 'ಭದ್ರನ ಮಗ' ಸಿನಿಮಾ ತೆಗೆದೆವು. ಕುಟುಂಬರಾವು ನಿರ್ದೇಶಕರು. ಆ ತರುವಾಯ 'ಗಾಂಧಿ' ಸಿನಿಮಾವನ್ನು ತೆಲುಗು ಭಾಷೆಗೆ ಅನುವಾದಿಸಿದೆವು. ಅದರಿಂದ ಬಹಳ ನಷ್ಟವಾಯಿತು. ಆದರೂ ಆ ಸ್ಕ್ರಿಪ್ಟನ್ನು ಅನುವಾದಿಸಿದ್ದೇನೆಂದು ನನಗೆ ಹೆಮ್ಮೆ ಇದೆ! ಅನುವಾದಿಸುತ್ತಾ ಎಷ್ಟೊಂದು ಹೊಸ ವಿಷಯಗಳನ್ನು ಕಲಿತಿರುವೆ ಎಂಬುದನ್ನು ಹೇಳಲಾಗದು.

NFDC ಗಾಗಿ 'ಜೊತೆ' ಸಿನಿಮಾ, CFSI ಗಾಗಿ 'ಅಮೂಲ್ಯ', ಮತ್ತೊಂದು ಮಕ್ಕಳ ಚಲನಚಿತ್ರ 'ಗುಲಾಬಿಗಳು'... ಹೀಗೆ ನಮಗೆ ತೃಪ್ತಿಕೊಡುವ ಸಿನಿಮಾಗಳನ್ನು ನಿರ್ಮಿಸಿದ್ದೆವು. ಕುಟುಂಬರಾವು ಟಿ.ವಿ. ಸೀರಿಯಲ್‌ಗಳ ನಿರ್ದೇಶನ ವಹಿಸಿದರೆ ನಾನು ಭುಜಗಳು ಕಿತ್ತುಹೋಗುವಂತೆ ಸ್ಕ್ರಿಪ್ಟುಗಳನ್ನು ಬರೆದೆನು. ಆಸ್ಮಿತಕ್ಕಾಗಿ ಟೆಲಿಫಿಲಿಂಸ್ ತೆಗೆದೆವು. ಅನೇಕ ಸಮಸ್ಯೆಗಳನ್ನು ದೃಶ್ಯಮಾಧ್ಯಮದ ಮೂಲಕ ಗ್ರಾಮೀಣ, ಪಟ್ಟಣದ ಸ್ತ್ರೀಯರ ಸಂಘಗಳಿಗೆ ಅರ್ಥ ಮಾಡಿಸುವ ಸಿನಿಮಾಗಳವು. ಒಂದು ಹತ್ತು ಸಿನಿಮಾಗಳನ್ನು ನಿರ್ಮಿಸಿದ್ದೇವೆ. ಕಥೆ, ಸ್ಕ್ರಿಪ್ಟು ನನ್ನದು. ನಿರ್ದೇಶನ ಕುಟುಂಬರಾವರದು. ನಿರ್ಮಾಣ ನಿರ್ವಹಣೆ ಆಸ್ಮಿತ ಕಲೆಕ್ಟಿವ್. ಇವೆಲ್ಲವೂ ನನ್ನ ಕೆಲಸದಲ್ಲಿಯ ಭಾಗವಾಗಿ, ಸಾಹಿತ್ಯ ರಚನೆಯ ಭಾಗವಾಗಿ ಸಾಗಿವೆ. ಅಲ್ಲಿ ಸಹ ಸ್ತ್ರೀವಾದ ಸಾಹಿತ್ಯವನ್ನು ರಚಿಸುವುದೇ ನನ್ನ ಕೆಲಸವಾದ್ದರಿಂದ ನನ್ನ ಅದೃಷ್ಟ.

**ಎ. ಕೆ. ಪ್ರ :** ಥಾಂಕ್ಯೂ

**ಓಲ್ಗಾ :** ನಮಸ್ತೆ.

**ಡಾ|| ಜಿ. ವೀರಭದ್ರಗೌಡ**
ಅಸಿಸ್ಟೆಂಟ್ ಪ್ರೊಫೆಸರ್, ಬೆಂಗಳೂರು ಕೃಷಿ ವಿಶ್ವವಿದ್ಯಾಲಯ, ಬೆಂಗಳೂರು




**ತಿ**ಳಿಗಾಳಿ ಬೀಸುತ ಮನವ ತಟ್ಟುತ್ತಿರುವಾಗ
ಬೇಸಿಗೆಯ ತಾಣಕೆ ತಲುಪುವಾ ಚಪಲದ
ಪ್ರೀತಿಯದು ಚಿಗುರುವುದು ಹೃದಯಾಳದಲಿ
ಕೊನೆಪಯಣ ಬರುವುದು ವಲಸೆಹಕ್ಕಿಗಾಗ

ಹೊಸಹೊಸ ಚಿಗುರಿನ ಹೊಸತು ತಾ ಕರೆದಾಗ
ದೂರ ಪಯಣದ ಆಸೆ ಮನವ ತಟ್ಟುವುದು
ವಿರಹ ವೇದನೆಯು ಮನವನತಿ ಕೆಣಕುತ
ಸಖಿನ ನೆನಪಲಿ ಹೊರಡಲಣಿಯಾಗುವುದು

ಮರಳುಗಾಡಿನ ಉರಿಬಿಸಿಲು ಸುಡುತಲಿದ್ದರೂ
ಮರೀಚಿಕೆಯಂದದಿ ತಂಪೆನಿಸುವುದು ಮನಕೆ
ಗಿರಿಕಂದರಗಳ ನೆರಳಲ್ಲಿ ಮರಗಳ ತಂಪಿನಲಿ
ಸಖಿನ ಜೊತೆ ಕುಣಿವ ಕನಸ ಕಾಣುತಿಹುದು

ಮನೆಯೊಳಗೆ ಮರಿಗಳಿಗೆ ಉಣಿಸುತಲಿದ್ದರೂ
ಮನದಾಳದೊಳಗೆಲ್ಲ ಇನಿಯನೆ ತುಂಬಿರುವ
ಎರಡು ತಾಣಗಳಲ್ಲೂ ಮನೆಗಳಿರುವುದರಿಂದ
ಮನೆಯಾಚೆ ಹೊರಟರೂ ಮನೆಗೇ ಬಂದಂತೆ

ವರ್ಷವರ್ಷವೂ ಬರುವ ಈ ಗಳಿಗೆ ನೆನೆಯುತ
ಇಂದವನ ಜೊತೆ ಸೇರುವಾಕಾಂಕ್ಷೆಯಲಿಹುದು

ರೀತಿ ನೀತಿಗಳ ಜೊತೆ ಭಯಭೀತಿಯ ಬದಿಗೊತ್ತಿ
ಚಿಮ್ಮುವದು ಗಗನಕ್ಕೆ ತನ್ನಿನಿಯನ ಸೇರುವುದಕೆ

ಪ್ರಿಯಕರನ ಹುಡುಕುತ್ತ ಹಾರಾಡುತಿರಲಲ್ಲಿ
ಗುಂಪಿನ ಸಂಬಂಧ ಒಮ್ಮೊಮ್ಮೆ ಕಡಿಯುವುದು
ಇದ್ದಕಿದ್ದೊಲು ಭಯದ ಕಾರ್ಮೋಡ ಕವಿದು
ಮನದಾಕಾಂಕ್ಷೆಗಳೆಲ್ಲ ಕುಸಿದು ಸಾಯುವುದು

ದಾರಿತಪ್ಪಿದ ಪಥದಿ ಎಷ್ಟು ಹೊರಳಾಡಿದರೂ
ಆ ದಟ್ಟ ಕತ್ತಲಲಿ ಬೆಳಕು ಕಾಣಲೊಲ್ಲದು
ಎತ್ತ ನೋಡಿದರತ್ತ ಬೆಟ್ಟಗುಡ್ಡಗಳ ನೋಟ
ಅದರತ್ತ ನೋಡುತ ಅಪಹಾಸ್ಯಗಯ್ಯುವುವು

ಪೂರ್ವದ ದಿಗಂತದಿ ಕತ್ತಲು ಮೇಲೇರುತಿರೆ
ಗಾಳಿಯದು ನುಂಗಲು ಬೀಸುತ್ತ ಬರುವುದು
ಸಾವು ಬದುಕಿನ ನಡುವೆ ಭೇದಕಾಣದ ಇಳೆಯು
ಪುಟ್ಟ ಪಕ್ಷಿಯ ಸಾವ ತನ್ನೆಡೆಗೆ ಸೆಳೆಯುವುದು.

ಮೂಲ : **ಎ. ಡಿ. ಹೋಪ್**     ಕನ್ನಡಕ್ಕೆ : **ವಿ. ಗಣೇಶ**
ನಂ. ೫೬, ಚಾಮರಾಜಪೇಟೆ, ಸಾಗರ, ಶಿವಮೊಗ್ಗ ಜಿಲ್ಲೆ – ೫೭೭ ೪೦೧

# ಅಭಿಪ್ರಾಯ ಭೇದ ಎಂದಿಗೂ ಹಗೆತನವಾಗಬಾರದು

ಡಾ॥ ರಾಜೇಗೌಡ ಹೊಸಹಳ್ಳಿ



ಸ್ಟೀಫನ್ ಹಾಕಿಂಗ್ ಬಹುದೊಡ್ಡ ಭೌತವಿಜ್ಞಾನಿ, ವಿಜ್ಞಾನ ಭವಿಷ್ಯಕಾರ. ಕ್ರಿ. ಶ. ೨೬೦೦ಕ್ಕೆ ಬರುವಷ್ಟರಲ್ಲಿ ಭೂಗೋಳವೆಂಬುದು ಬೆಂಕಿ ಚೆಂಡಾಗಿ ಭಸ್ಮವಾಗುತ್ತದೆ ಎಂಬುದು ಲೆಕ್ಕಾಚಾರ ಆತನದು. ಅಷ್ಟರಲ್ಲಾದರೂ ಈ ದೇಶದಲ್ಲಿ ಜಾತೀಯತೆ ಇಲ್ಲವಾಗುತ್ತದೆಯೆ? ಅದಾಗದು ಎಂಬುದರ ಕಡೆ ವೇಗವಾಗಿ ಚಲಿಸುತ್ತಿದೆ ಭಾರತ. 'ಶಿವಭಕ್ತನೆಂದು ಹೇಳಿಕೊಂಡು ದೇವಾಲಯ ಸುತ್ತುವ ಹುಮ್ಮಸ್ಸಿನಲ್ಲಿರುವ ರಾಹುಲ್ ತಮ್ಮ ಮುತ್ತಜ್ಜ ಜವಾಹರಲಾಲ್ ನೆಹರೂ ಅವರ ಹುಸಿ ಜಾತ್ಯತೀತವಾದ ಮತ್ತು ಹಿಂದೂ ವಿರೋಧಿ ನೀತಿಯ ಪರಂಪರೆ ಹೊಂದಿರುವ ಪಕ್ಷದ ನೇತೃತ್ವ ವಹಿಸಿಕೊಳ್ಳಲಿರುವುದು ಅತ್ಯಂತ ದೊಡ್ಡ ವಿರೋಧಾಭಾಸ' ಎನ್ನುತ್ತಾರೆ ಕೇಂದ್ರ ಪ್ರಸಾರ ಭಾರತಿ ಪ್ರಮುಖರಾಗಿದ್ದವರು ಪುನಃ ಅದರಲ್ಲೆ ಪ್ರಮುಖರಾಗುತ್ತಿರುವವರಾದ ಎ. ಸೂರ್ಯಪ್ರಕಾಶ್ ಅವರು. (ಪ್ರ.ವಾ.ಡಿ. ೫/೧೭) ಘಸ್ನಿ ದಂಡಯಾತ್ರೆಯಲ್ಲಿ ಸೋಮನಾಥಪುರ ದೇವಾಲಯ ಮ್ಲೇಚ್ಛರ ಹೊಡೆತಕ್ಕೆ ಮುಕ್ಕಾಗಿದ್ದು ನಿಜ. ಇಂಥಾ ನಿಜಗಳ ಪರಂಪರೆಯೇ ಚರಿತ್ರೆ. ಒಮ್ಮೆ ಶಿವರಾಮ ಕಾರಂತರು ಹಂಪಿಯ ವೀಕ್ಷಣೆಯಲ್ಲಿ ಭಗ್ನಮೂರ್ತಿ ಉಗ್ರ ನರಸಿಂಹ ಇತ್ಯಾದಿಗಳನ್ನು ಪ್ರಾಚ್ಯ ಇಲಾಖೆ ಜೀರ್ಣೋದ್ಧಾರ ಮಾಡುತ್ತಿದ್ದಾಗ ಬೆಂಕಿಯಾದರು. ಅಲ್ಲೆ ಒಂದು ಚೀಟಿಯೊಂದನ್ನು ಹೆಕ್ಕಿ ಆಗಿನ ಪ್ರಧಾನಿ ಇಂದಿರಾ ಗಾಂಧಿಗೆ ಈ ಅವೈಜ್ಞಾನಿಕ ಜೀರ್ಣೋದ್ಧಾರವನ್ನು ಕುರಿತು ತಕ್ಷಣ ನಿಲ್ಲಿಸಲು ಪತ್ರ ಬರೆದರು. ಮಿಂಚಿನ ವೇಗದಲ್ಲಿ ಈ ಕಾರ್ಯ ಸ್ಥಗಿತಗೊಂಡದ್ದು ಸಹಾ ಚರಿತ್ರೆ. ಇದು ಲೇಖನಿ ಮೌಲ್ಯ.

ರಾಜೇಂದ್ರ ಪ್ರಸಾದ್ ಅವರು ಮೂಲತಃ 'ಸೇವಕರು ಮುಟ್ಟಿದ ನೀರಿನ ಕಣಗಳು ಹಾರಿದರೆ ತಮ್ಮ ಧರ್ಮ ಕೆಟ್ಟುಹೋಗುತ್ತೆ' ಅಂತ ನಂಬಿದ್ದವರು. ರಾಷ್ಟ್ರಪತಿ ಹುದ್ದೆಯಲ್ಲಿದ್ದಾಗಲೇ ಇನ್ನೂರು ಜನ ಪೂಜಾರಿಗಳ ಪಾದ ತೊಳೆದು ದೇಶವನ್ನು ಮೇಲುಜಾತಿಗೆ ಒಪ್ಪಿಸಿದವರು. ಇದರ ಮತ್ತೊಂದು ವಿರುದ್ಧ ದಿಕ್ಕಾದ ವೈಜ್ಞಾನಿಕ ದೃಷ್ಟಿ ಮತ್ತು ವಿಚಾರ ಬುದ್ಧಿ ನೆಹರೂದಾಗಿತ್ತು. ಭವಿಷ್ಯ ಭಾರತಕ್ಕೆ ಆಧುನಿಕತೆಯೆಂಬ ಅಭಿವೃದ್ಧಿ ಮಂತ್ರ ಹಿಡಿದು ಹೊರಟ ನೆಹರೂ ಕುರಿತು ಕುವೆಂಪು ಅಧ್ಯಾತ್ಮ ಮತ್ತು ವಿಜ್ಞಾನಗಳಿಗೆ ಸರ್ವೋಚ್ಚ ಪ್ರತಿನಿಧಿ' ಎಂದು ಸರಿಯಾಗಿಯೇ ಗುರುತಿಸಿದ್ದಾರೆ. ಈ ದೇಶವು ಹಲವು ಇಸಂಗಳ ನೆಲ. ಅದರಲ್ಲಿ ಸಾಂಖ್ಯರು, ಲೋಕಾಯತರು, ನಾಸ್ತಿಕರು, ಆಸ್ತಿಕರು, ದ್ವೈತರು, ಅದ್ವೈತರು, ವಿಶಿಷ್ಟಾದ್ವೈತರು, ಶೈವರು ಒಂದೇ-ಎರಡೇ ಅದರೊಂದಿಗೆ ಸೇರಿದ ಮುಸಲ್ಮಾನರು-ಆಂಗ್ಲರು ಇತ್ಯಾದಿ ಇತ್ಯಾದಿಗಳ ಒಕ್ಕೂಟವೇ ಭಾರತ.

ಸೋಮನಾಥ ದೇವಾಲಯದ ಮರುನಿರ್ಮಾಣ ತಮ್ಮ ಸರ್ಕಾರದ ಜಾತ್ಯತೀತ ಲಕ್ಷಣಕ್ಕೆ ಹಾನಿ ಉಂಟುಮಾಡಬಹುದು ಎಂಬ ಕಾರಣಕ್ಕೆ ಇದನ್ನು ನೆಹರೂ ಆಗ ವಿರೋಧಿಸಿದರು. ಪಟೇಲ್ ಮತ್ತು ಮುನ್ಷಿ ಹಾಗೂ ರಾಜೇಂದ್ರ ಪ್ರಸಾದ್ ಸೇರಿದಂತೆ ಈ ಸಂಪುಟ ಸಹೋದ್ಯೋಗಿಗಳ ಮಾತನ್ನು ಕೇಳಿದ್ದರೆ ನೆಹರು ಮೊಮ್ಮಗನಿಗೆ ಈ ಸ್ಥಿತಿ ಬರುತ್ತಿರಲಿಲ್ಲ ಎಂಬುದು ಲೇಖಕರ ವಾದ. ಗಾಂಧೀಜಿ ಸರ್ಕಾರೇತರ ಟ್ರಸ್ಟ್ ಮೂಲಕ ದೇವಾಲಯ ನಿರ್ಮಾಣಕ್ಕೆ ಅನುಮತಿಸಿದ್ದರೂ ನೆಹರು ನಿರ್ಲಕ್ಷಿಸಿದರು ಎಂಬುದು ಇದೇ ಲೇಖಕರ ಅಭಿಪ್ರಾಯ. ಹೌದು ಹರಿದು ಚಿಂದಿಯಾಗಿದ್ದ ಭಾರತಾಂಬೆಯ ಸೀರೆಯನ್ನು ತೇಪೆ ಹಾಕಲು ಸೂಜಿದಾರಗಳಿಗೇ ಬರವಿತ್ತು ಎಂಬುದನ್ನು ಬ್ರಿಟಿಷರು ದೇಶ ಬಿಟ್ಟುಹೋದ ಕಾಲದೊಂದಿಗೆ ಯಾರೂ ಚರ್ಚಿಸುತ್ತಿಲ್ಲ. ಎಲ್ಲರೂ 'ಏಳು ದಶಕಗಳು ಏನೂ ಮಾಡಿಲ್ಲದ ಹಳೆಯ ಸರ್ಕಾರ' ಎಂದು ದೂಷಿಸುವವರೇ ಆಗಿದ್ದಾರೆ. ಹಾಗಾದರೆ ಈಗ ಮಿನುಗುತ್ತಿರುವ ಭಾರತಕ್ಕೆ ಈಗಿನ ಶಕ್ತಿ ಎಲ್ಲಿಂದ ಬಂತು! ಧಿಗ್ಗನೆ ನಾಲ್ಕು ವರ್ಷಗಳಲ್ಲಿ ಬಂತೆ !

'ಹೀಗೆಂದಾಕ್ಷಣ ಹಳೆಯ ಸರ್ಕಾರದ ಅವಘಡಗಳನ್ನು ಗಮನಿಸಬೇಡವೆ' ಎಂಬ ಮಾತು ಬರಬಹುದು. ಯಾವುದೇ ಸರ್ಕಾರವನ್ನು ಟೀಕಿಸುವಾಗ ಪಕ್ಷ ರಾಜಕೀಯವು ಪರ-ವಿರೋಧ ವಹಿಸಬಹುದು. ಆದರೆ ಲೇಖಕರು, ಚಿಂತಕರು ಪಾರದರ್ಶಕವಾಗಿರಬೇಕು. ಅದೊಂದು ಲೇಖನಿಯ ಗೌರವ. ಘಸ್ನಿ, ಖಿಲ್ಜಿ ಈ ದೇಶದ ಸೋಮಾರಿತನದ ವಾಸನೆ ಹಿಡಿದು ಗಡಿ ದಾಟಿದವರು. ಒಳಜಗಳದ ಘಾಟು ಕುಡಿದು ಬಂದವರು. ಜಾತಿ-ಮತ-ಧರ್ಮಗಳ ಅಂತರದೊಳಗೆ ನುಸುಳಿದವರು. ಸೋಮನಾಥಪುರವನ್ನು ಮುಸ್ಲಿಮರು ಒಡೆದರು, ಸರಿ. ನಾಗಾರ್ಜುನ ಕೊಂಡವನ್ನು ಯಾರು ನೆಲಸಮ ಮಾಡಿದರು! ಅನೇಕ ಜೈನ ಬೌದ್ಧಮಂದಿರಗಳು ಹಿಂದೂ ದೇವಾಲಯಗಳಾದ ಬಗೆ ಏನು! ಧರ್ಮಸ್ಥಳದ ಮಂಜುನಾಥ ಯಾರು! ಶೃಂಗೇರಿ ಶಾರದಾಂಬೆ ಯಾರು! ಇವೆಲ್ಲಕ್ಕೂ ಉತ್ತರ ಕೊಡಲಾಗುವುದಿಲ್ಲ. ಅಧಿಕಾರದ ಅಮಲು ಧರ್ಮದ ಅಫೀಮು ಘಸ್ನಿ, ಖಿಲ್ಜಿಯರನ್ನೇನು ಶ್ರೀರಾಮನ ಕರಸೇವಕರನ್ನೇನು ಬೇರೆ ಬೇರೆಯಾಗಿ ವಿಭಜಿಸಿ ತೂಗುವುದಿಲ್ಲ. ವಿಶ್ವಮಾನವ ತತ್ವ ಎಂಬುದು ಮಾತ್ರ ಮನುಷ್ಯನನ್ನು ದೇವನೊಬ್ಬ ನಾಮ ಹಲವು ಎಂದು ಮಗುವನ್ನು ಕಾಗಡಿಯಲ್ಲಿ ತೂಗಿದಂತೆ ಜೋಗುಳ ಹೇಳುತ್ತಾ ತೂಗುತ್ತದೆ.

ರಾಜೇಂದ್ರ ಪ್ರಸಾದ್ ಅವರು ಮೂಲತಃ 'ಸೇವಕರು ಮುಟ್ಟಿದ ನೀರಿನ ಕಣಗಳು ಹಾರಿದರೆ ತಮ್ಮ ಧರ್ಮ ಕೆಟ್ಟುಹೋಗುತ್ತೆ' ಅಂತ ನಂಬಿದ್ದವರು. ರಾಷ್ಟ್ರಪತಿ ಹುದ್ದೆಯಲ್ಲಿದ್ದಾಗಲೇ ಇನ್ನೂರು ಜನ ಪೂಜಾರಿಗಳ ಪಾದ ತೊಳೆದು ದೇಶವನ್ನು ಮೇಲುಜಾತಿಗೆ ಒಪ್ಪಿಸಿದವರು. ಇದರ ಮತ್ತೊಂದು ವಿರುದ್ಧ ದಿಕ್ಕಾದ ವೈಜ್ಞಾನಿಕ ದೃಷ್ಟಿ ಮತ್ತು ವಿಚಾರ ಬುದ್ಧಿ ನೆಹರೂದಾಗಿತ್ತು. ಭವಿಷ್ಯ ಭಾರತಕ್ಕೆ ಆಧುನಿಕತೆಯೆಂಬ ಅಭಿವೃದ್ಧಿ ಮಂತ್ರ ಹಿಡಿದು ಹೊರಟ ನೆಹರೂ ಕುರಿತು ಕುವೆಂಪು ಅಧ್ಯಾತ್ಮ ಮತ್ತು ವಿಜ್ಞಾನಗಳಿಗೆ ಸರ್ವೋಚ್ಚ ಪ್ರತಿನಿಧಿ' ಎಂದು ಸರಿಯಾಗಿಯೇ ಗುರುತಿಸಿದ್ದಾರೆ. ಈ ದೇಶವು ಹಲವು ಇಸಂಗಳ ನೆಲ. ಅದರಲ್ಲಿ ಸಾಂಖ್ಯರು, ಲೋಕಾಯತರು, ನಾಸ್ತಿಕರು, ಆಸ್ತಿಕರು, ದ್ವೈತರು, ಅದ್ವೈತರು, ವಿಶಿಷ್ಟಾದ್ವೈತರು, ಶೈವರು ಒಂದೇ-ಎರಡೇ ಅದರೊಂದಿಗೆ ಸೇರಿದ ಮುಸಲ್ಮಾನರು-ಆಂಗ್ಲರು ಇತ್ಯಾದಿ ಇತ್ಯಾದಿಗಳ ಒಕ್ಕೂಟವೇ ಭಾರತ. ಭಾರತ ಇಂದು ಹಿಂದುತ್ವದ ದಾರಕ್ಕೆ ಬಹುಭಾರವಾಗಲು ಕಾರಣ ಅನ್ಯಮತಗಳೆಂದು ವಿಭಜಿಸುತ್ತಾ ಇಸ್ಲಾಂ ಹಾಗೂ ಕ್ರೈಸ್ತ ಇತ್ಯಾದಿಗಳು ಅನ್ಯ ಎಂದು ಹುಸಿಬೀಜ ಬಿತ್ತಲಾಗುತ್ತಿದೆ. ಹಾಗಾಗಿ ಹುಸಿ ಜಾತ್ಯತೀತನೆಂದು ನೆಹರೂ ಸಿದ್ಧಾಂತವನ್ನು ಟೀಕಿಸಲಾಗುತ್ತಿದೆ. ಅದು ಯಾವ ಮಟ್ಟಕ್ಕಿಳಿದಿದೆ ಎಂದರೆ ಜೀವಮಾನವಿಡೀ ಕೊಳಚೆಗೇರಿಯ ಪ್ರಜೆಗಳನ್ನು ಕಲ್ಕತ್ತದಲ್ಲಿ ಮಹಾತಾಯಿಯಾಗಿ ಸಾಕಿದ ಮದರ್ ತೆರೇಸಾ ಅಂಥವರನ್ನು ಸಹ ದೇಶದ 'ಮಾನ ಹರಾಜು ಹಾಕಿದ ಮದರ್ ತೆರೇಸಾ' ಎನ್ನಲಾಗುತ್ತಿದೆ. ಮುಂದೊಂದು ದಿನ ಗೌತಮ ಬುದ್ಧ ಈ ದೇಶದ ಶತ್ರು ಎಂದರೂ ಆಶ್ಚರ್ಯವಿಲ್ಲ. ಗಾಂಧೀಜಿಯನ್ನಂತೂ ಶ್ರೀರಾಮನ ಹುಸಿಭಕ್ತನಂತೆ ಈಗಾಗಲೇ ಬಿಂಬಿಸಲಾಗುತ್ತಿದೆ. ಈ ಸಂತನಿಗೆ ಪ್ರತಿಯಾಗಿ ಗುಂಡು ಹಾರಿಸಿದ ವ್ಯಕ್ತಿಯನ್ನೇ ಪೂಜಿಸಿ ಗೌರವಿಸಲಾಗುತ್ತಿದೆ. ಇದರೊಂದಿಗೆ ಪಕ್ಷ ಪ್ರತಿಪಕ್ಷಗಳಂತೂ 'ಕುಲವಂ ನಾಲಿಗೆ ಹೇಳಿತು' ಎಂಬಂತೆ ಎಲುಬಿಲ್ಲದ ನಾಲಿಗೆಯನ್ನು ಹೀನ ಸ್ಥಿತಿಗಿಳಿಸಿವೆ.

ದೇಶದ ವಿರೋಧ ಪಕ್ಷವೀಗ ಹುಲಿ ಮುಪ್ಪಾದಂತೆ ನರಳುತ್ತಿದೆ ನಿಜ. 'ತೋಳ ಹಳ್ಳಕ್ಕೆ ಬಿದ್ದರೆ ಆಳಿಗೊಂದು ಕಲ್ಲು' ಎಂಬ ಸ್ಥಿತಿ ಈಗಿನ ವಿರೋಧ ಪಕ್ಷದ್ದು. ಇದೊಂದು ಚಕ್ರ ಕೂಡ ಹೌದು. ರಾಹುಲ್ ಹಿಂದುತ್ವದ ಗುಡುಗು ಸಿಡಿಲಿಗೆ ಬೆದರುತ್ತಲೇ ಗಟ್ಟಿಯಾಗಿ ನಿಲ್ಲಲು ಹವಣಿಸುವ ವರ್ತಮಾನದ ಅನಿವಾರ್ಯ ಕಾಲಮಾನದ ಪ್ರತೀಕ. ಹಾಗೆಂದು ಕುಲ ಹಿಡಿದು ನಾಲಿಗೆ ಹರಿಬಿಡುವ ರಾಜಕೀಯ ಸ್ಥಿತಿ ಈ ದೇಶಕ್ಕೆ ಬರಬಾರದು. ಅಧಿಕಾರವೆಂಬುದು 'ಸಿಡಿಲ ಕುಡಿ'. ಆ ಸಿಡಿಲ ಶಕ್ತಿಯು ಕತ್ತಿಯಲ್ಲಿರುವವರೆಗೆ ಹರಿತವಾಗಿರುತ್ತದೆ. ಹಾರಾಡಿ ಕಡಿಯುತ್ತದೆ. ಪ್ರಜೆಗಳು ಶಕ್ತಿಯನ್ನು ಹಿಂಪಡೆದರೆ ಅದೊಂದು ಕಬ್ಬಿಣದ ತುಂಡು. ೩೬೦೦ ಕೋಟಿಯ ಶಿವಾಜಿ ಪ್ರತಿಮೆ, ೩೦೦೦ ಕೋಟಿಯ ಪಟೇಲ್ ಪ್ರತಿಮೆ, ಲಕ್ಷ ಲಕ್ಷ ಕೋಟಿಯ ಶ್ರೀರಾಮನ ದೇವಾಲಯ ಇವುಗಳ ನೆರಳು ಸಿಂಹಾಸನಕ್ಕೆ ಛತ್ರಿಯಾಗುತ್ತವೆಂಬುದನ್ನು ಈ ದೇಶದ ಪರಂಪರೆ ಗೌರವಿಸುವುದಿಲ್ಲ. ಪರಂಪರೆಯ ಭಾರತಕ್ಕೆ ದೇಶೀಯತೆಯ ಆಳದ ಬೇರುಗಳಿವೆ. ಅವು ಆರ್ಯ ಯಜ್ಞಕುಂಡದ ಬೂದಿ ಬಿಸಿಗೆ ಸುಡಲಾರದ ಆಳದಲ್ಲಡಗಿವೆ. ಅವು ಜಾತಿ, ಮತ ಧರ್ಮಗಳೆಂಬ ತಾತ್ಕಾಲಿಕ ಜಡತ್ವವನ್ನು ಸುಡುತ್ತಿರುತ್ತವೆ. ರಾಹುಲ್ ಈಗ ಯಾವ ಜಾತಿ ಯಾವ ಧರ್ಮ ಎಂಬುದಕ್ಕೆ ಉತ್ತರವೇ 'ಜಾತ್ಯತೀತ' ಎಂಬುದರ ತತ್ವ. ರಾಜಕೀಯದಲ್ಲಿ, "ಅಭಿಪ್ರಾಯ ಭೇದ ಎಂದಿಗೂ ಹಗೆತನವಾಗಬಾರದು. ಆದಲ್ಲಿ ನಾನೂ ನನ್ನ ಹೆಂಡತಿಯೂ ಪರಸ್ಪರ ಬದ್ಧವೈರಿಗಳಾಗಬೇಕು. ಅಭಿಪ್ರಾಯಭೇದ ವಿಲ್ಲದ ಯಾವ ಇಬ್ಬರನ್ನೂ ಲೋಕದಲ್ಲಿ ನಾನರಿಯೆ" ಎನ್ನುತ್ತಾರೆ ಗಾಂಧೀಜಿ. ಇದು ಮನುಷ್ಯತ್ವ. ಇದಲ್ಲದೆ ರೋಮ್, ಇಟಲಿ ಸೇರಿದಂತೆ ವಿಶ್ವದ ಯಾವುದೇ ದೇಶವೂ ಚರಿತ್ರೆಯ ಪಳೆಯುಳಿಕೆಗಳ ಪುನರ್ನಿರ್ಮಾಣಕ್ಕೆ ಇಳಿದಿಲ್ಲ. ಸಂರಕ್ಷಣೆ ಅದೊಂದು ಕರ್ತವ್ಯ. ಪುನರ್ನಿರ್ಮಾಣ ಅದೊಂದು ರಾಜಕೀಯ ಆಟ ಎಂಬುದು ಪ್ರಜೆಗಳಿಗೆ ಗೊತ್ತಿದೆ. ಈ ದೇಶ ಅನೇಕ ಇಸಂಗಳಲ್ಲಿ ಮಸೀದಿ ಮಂದಿರಗಳನ್ನು ಬೀಳಿಸಿದೆ, ಏಳಿಸಿದೆ. ಅವುಗಳು ಸಂಸ್ಕೃತಿಯ ಪಳೆಯುಳಿಕೆಗಳು. ಅವನ್ನು ಕಾಪಾಡಿಕೊಳ್ಳುವುದಷ್ಟೆ ಸರ್ಕಾರಗಳ ಕರ್ತವ್ಯ.




ಡಾ॥ ರಾಜೇಗೌಡ ಹೊಸಹಳ್ಳಿ
ನಂ. ೪೧೩, ಟೀಚರ್ಸ್ ಕಾಲನಿ, ನಾಗರಭಾವಿ, ಬೆಂಗಳೂರು – ೫೬೦ ೦೭೨



ಶೌಚಾಲಯ ನಿರ್ಮಾಣಕ್ಕೆ ಗುಂಡಿ ಅಗೆದು ರಿಂಗ್ ಕೂರಿಸಿರುವುದು

# ಸ್ವಚ್ಛ ಭಾರತದ ಬಿರುಗಾಳಿಗೆ ತತ್ತರಿಸುತ್ತಿರುವ ಬಡಜನತೆ

ಜ್ಯೋತಿ ಎ.

**ಭಾ**ರತ ಗ್ರಾಮಪ್ರಧಾನವಾದ ರಾಷ್ಟ್ರ. ರೈಲಿನಲ್ಲಿ ಪ್ರಯಾಣಿಸುವವರಿಗೆ ಗ್ರಾಮೀಣ ಭಾರತದ ಒಂದು ಇಣುಕುನೋಟ ಉಚಿತ ಮತ್ತು ನಿಶ್ಚಿತ. ಸೂರ್ಯ ಮೂಡುವ ಮುನ್ನ ಗ್ರಾಮಾಂತರ ಪ್ರದೇಶಗಳಲ್ಲಿ ರೈಲು ಚಲಿಸುವಾಗ ಹಿರಿಯರು, ಕಿರಿಯರೆನ್ನದೆ ಸಾಲಾಗಿ ಚೆಂಬುಗಳನ್ನು ಹೊತ್ತು ಬಯಲಿಗೆ ಸಾಗುತ್ತಿರುವುದು ಮತ್ತು ಅಲ್ಲಲ್ಲಿ ಶೌಚಕ್ಕಾಗಿ ಕುಳಿತಿರುವ ದೃಶ್ಯ ರೈಲು ಪಯಣಿಗರಿಗೆ ಸಾಮಾನ್ಯವಾಗಿ ಗೋಚರಿಸುತ್ತದೆ. ಆರೋಗ್ಯ ಮತ್ತು ನೈರ್ಮಲ್ಯ ಗ್ರಾಮೀಣ ಭಾರತವನ್ನು ಕಾಡುವ ಸಮಸ್ಯೆಗಳಲ್ಲಿ ಮುಖ್ಯವಾದುವು. ಶೌಚಾಲಯಗಳಿಲ್ಲದ ಮನೆಗಳು (ಇದಕ್ಕೆ ಕಾರಣಗಳು ಅನೇಕ) ಮತ್ತು ಗ್ರಾಮದ ಬಯಲುಗಳೇ ಶೌಚಾಲಯಗಳಾಗಿ ಪರಿವರ್ತನೆಯಾಗಿರುವುದು ಭಾರತದ ಸಾಮಾಜಿಕ ನೈಜಸ್ಥಿತಿ ಎಂದು ಹೇಳಬಹುದು. ಪ್ರಧಾನ ಮಂತ್ರಿಯಾಗಿ ಅಧಿಕಾರವಹಿಸಿಕೊಂಡ ಕೆಲವೇ ತಿಂಗಳುಗಳಲ್ಲಿ ೨೦೧೪ರ ಅಕ್ಟೋಬರ್ ೨ರಂದು ನರೇಂದ್ರ ಮೋದಿಯವರು ಸ್ವಚ್ಛ ಭಾರತ ಅಭಿಯಾನಕ್ಕೆ ಚಾಲನೆ ನೀಡಿದರು. ಈ ಕಾರ್ಯಕ್ರಮವು ಚಾಲ್ತಿಯಲ್ಲಿದ್ದ ನಿರ್ಮಲ ಭಾರತ ಅಭಿಯಾನ ಮತ್ತು ಸಂಪೂರ್ಣ ನೈರ್ಮಲ್ಯ ಆಂದೋಲನಗಳನ್ನು ಒಳಗೊಂಡು ಹೊಸ ಹೆಸರನ್ನು ಪಡೆದಿತ್ತು. ಗಾಂಧೀಜಿಯವರ ೧೫೦ನೇ ಜನ್ಮದಿನಾಚರಣೆಯ ವರ್ಷವಾದ ೨೦೧೯ರ ಹೊತ್ತಿಗೆ ದೇಶದಲ್ಲಿ ಸಂಪೂರ್ಣವಾಗಿ ಬಯಲು ಶೌಚಮುಕ್ತ ಗ್ರಾಮಗಳನ್ನು ನಿರ್ಮಾಣ ಮಾಡಬೇಕೆಂಬ ಗುರಿಯೊಂದಿಗೆ ಸ್ವಚ್ಛ ಭಾರತ ಅಭಿಯಾನವನ್ನು ಕೈಗೆತ್ತಿಕೊಳ್ಳಲಾಯಿತು.

ಈ ಕಾರ್ಯಕ್ರಮದ ಅನುಷ್ಠಾನಕ್ಕಾಗಿ ವಿಶ್ವ ಬ್ಯಾಂಕ್‌ನಿಂದ ೧೦ ಸಾವಿರ ಕೋಟಿ ರೂಪಾಯಿಗಳ ಸಾಲ ಪಡೆಯಲಾಗಿದೆ. ಬಯಲು ಶೌಚಮುಕ್ತ ಗ್ರಾಮಗಳ ನಿರ್ಮಾಣಕ್ಕಾಗಿ ಮನೆಗಳಲ್ಲಿ ಪ್ರತ್ಯೇಕ ಶೌಚಾಲಯ ನಿರ್ಮಾಣ ಮಾಡುವ ಕಾರ್ಯವು ಸ್ವಚ್ಛ ಭಾರತ ಅಭಿಯಾನದ ಪ್ರಮುಖ ಭಾಗವಾಗಿದೆ. ಈ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸುವ ಭರಾಟೆಯಲ್ಲಿ ದೇಶದ ಅಧಿಕಾರಶಾಹಿ ಮತ್ತು ಸರ್ಕಾರಗಳು ಗ್ರಾಮೀಣ ಜನರ ಸಾಮಾಜಿಕ-ಆರ್ಥಿಕ ಸ್ಥಿತಿಗತಿಗಳನ್ನು ಬದಿಗೊತ್ತಿ ಅಮಾನವೀಯವಾಗಿ ಮುನ್ನುಗ್ಗುತ್ತಿವೆ. ಇಂತಹ ವಿಪರ್ಯಾಸದ ದುರಂತಕ್ಕೆ ಹಲವು ಅಮಾಯಕರು ಬಲಿಯಾಗಿರುವುದು ವ್ಯವಸ್ಥೆಯನ್ನು ಅಣಕ ಮಾಡಿದಂತಿದೆ. ಇತ್ತೀಚೆಗೆ ದಾವಣಗೆರೆಯಲ್ಲಿ ಸ್ವಚ್ಛ ಭಾರತ ಅಭಿಯಾನಕ್ಕೆ ಸಂಬಂಧಿಸಿದ ಒಂದು ದುರ್ಘಟನೆ ಸಂಭವಿಸಿ ಯುವತಿಯೊಬ್ಬಳ ಪ್ರಾಣಹರಣವಾಗಿದ್ದು ದಾಖಲಾಗಿತ್ತು. 'ದಿ ಸ್ಟೇಟ್' ಆನ್‌ಲೈನ್ ಪತ್ರಿಕೆಯಲ್ಲಿ ವರದಿ ಪ್ರಕಟವಾದ ಬೆನ್ನಲ್ಲೇ ಭಾರತ ಕಮ್ಯುನಿಸ್ಟ್ ಪಕ್ಷದ ಸತ್ಯಶೋಧನಾ ಸಮಿತಿ ಗ್ರಾಮಕ್ಕೆ ಭೇಟಿಯಿತ್ತು ಮೃತ ಯುವತಿಯ ಕುಟುಂಬದ ಜೊತೆ ಮಾತನಾಡಿತ್ತು. ಅದನ್ನಾಧರಿಸಿದ ಲೇಖನವಿದು.

**ಮತ್ತಿಹಳ್ಳಿಯಲ್ಲಿ ನಡೆದಿದ್ದೇನು**

ದಾವಣಗೆರೆಯ ಹರಪನಹಳ್ಳಿ ತಾಲ್ಲೂಕಿನ ಒಂದು ಗ್ರಾಮ ಮತ್ತಿಹಳ್ಳಿ. ಜಿಲ್ಲಾ ಕೇಂದ್ರದಿಂದ ಸುಮಾರು ೫೦ ಕಿ.ಮೀ. ದೂರದಲ್ಲಿರುವ ಈ ಹಳ್ಳಿ ಹೆಚ್ಚೂಕಡಿಮೆ ಒಟ್ಟು ನಾಲ್ಕು ಸಾವಿರ ಜನಸಂಖ್ಯೆ ಹೊಂದಿದೆ. ನಾವು ಈ ಗ್ರಾಮಕ್ಕೆ ಹೋದಾಗ ದುರಂತ ಸಂಭವಿಸಿ ಕೇವಲ ಒಂದು ವಾರವಾಗಿತ್ತು. ಗ್ರಾಮದ ಹಳೆಯ ಪಂಚಾಯಿತಿ ಕಚೇರಿಯ ಕಟ್ಟಡ ಈಗ ಅಂಗನವಾಡಿ ಕೇಂದ್ರವಾಗಿದೆ. ಅದರ ಎದುರಿಗಿನ ಗ್ರಾಮದ ಮಧ್ಯಭಾಗದ ಅದೊಂದು ಪುಟ್ಟ ಮನೆ. ಆ ಪುಟ್ಟ ಮನೆಯಲ್ಲೊಂದು ದೊಡ್ಡ ಕುಟುಂಬ ನೆಲೆ ನಿಂತಿದೆ. ನಾವು ಭೇಟಿಯಿತ್ತ ಸಂದರ್ಭದಲ್ಲಿ, ಡಿಸೆಂಬರ್ ಮೊದಲನೆಯ ವಾರದಲ್ಲಿರಬಹುದು, ಆ ಬಡ ಕುಟುಂಬ ಇನ್ನೂ ಸಾವಿನ ಸೂತಕದ ಕರಾಳ ನೋವಿನಿಂದ ಹೊರಬರಲು ಹೆಣಗುತ್ತಿತ್ತು. ಬದುಕಿನಲ್ಲಿ ಸುಂದರ ಕನಸುಗಳನ್ನು ಕಂಡಿದ್ದ ೨೧ ವರ್ಷ ವಯಸ್ಸಿನ ಅನ್ನಪೂರ್ಣ ಎಂಬ ಯುವತಿ ಪ್ರಭುತ್ವದ ಅಟ್ಟಹಾಸಕ್ಕೆ ಬಲಿಯಾಗಿ ಜೀವ ಕಳೆದುಕೊಂಡಿದ್ದಳು. ಇದು ನಮ್ಮ ಕ್ರೂರ ವ್ಯವಸ್ಥೆಗೆ ಹಿಡಿದ ಕನ್ನಡಿಯಾಗಿತ್ತು.

ನಾಲ್ಕು ಮಕ್ಕಳು, ಮೊಮ್ಮಕ್ಕಳು ಮತ್ತು ವಯೋವೃದ್ಧ ದಂಪತಿಗಳನ್ನು ಹೊಂದಿರುವ ದೊಡ್ಡ

ಶೌಚಾಲಯವಿಲ್ಲದ ಕಾರಣಕ್ಕಾಗಿ ಸುರೇಶಪ್ಪನವರ ಕುಟುಂಬಕ್ಕೆ ಪಡಿತರ ತಡೆಹಿಡಿದಾಗ ಸಂಬಂಧಪಟ್ಟ ಎಲ್ಲರೊಡನೆ ಸಾಕಷ್ಟು ಚರ್ಚೆಗಳನ್ನೂ ವಾದ ವಿವಾದಗಳನ್ನೂ ಮಾಡಿರುತ್ತಾರೆ. ಚಳವಳಿಯ ಗಂಧಗಾಳಿಯಿದ್ದ ಸುರೇಶಪ್ಪನವರು ಪಂಚಾಯಿತಿ ಕಚೇರಿಯಲ್ಲಿ ಧ್ವನಿಯೆತ್ತಿ ಆಹಾರ ಪರಿವೀಕ್ಷಣಾಧಿಕಾರಿಗಳನ್ನು ಪಡಿತರ ನೀಡುವಂತೆ ಒಪ್ಪಿಸುತ್ತಾರೆ. ತರುವಾಯ ಪಡಿತರ ಚೀಟಿಯ ಮೇಲೆ ಪಡಿತರ ನೀಡಲು 'ಸ್ವಚ್ಛ ಭಾರತ ಮಿಷನ್' ಮೊಹರು ಒತ್ತಿಕೊಡಲಾಗುತ್ತದೆ.



**ಸುರೇಶಪ್ಪ ಕುಟುಂಬ ವಾಸವಾಗಿರುವ ಪುಟ್ಟ ಮನೆ**

ಕುಟುಂಬ ಆ ಪುಟ್ಟ ಮನೆಯಲ್ಲೇ ಜೀವನ ಸಾಗಿಸಿದೆ. ಇರುವ ೧೬X೯ ಅಡಿ ಜಾಗದಲ್ಲಿ ೧೩X೯ ಅಡಿ ಪ್ರದೇಶವನ್ನು ಬಳಸಿಕೊಂಡು ಮನೆಯನ್ನು ಕಟ್ಟಿಕೊಳ್ಳಲಾಗಿದೆ. ಅದೂ ಕೂಡ ದಶಕಗಳ ಹಿಂದಿನ ಮನೆ, ಪಾಲು ಮಾಡಿದಾಗ ಈ ಕುಟುಂಬಕ್ಕೆ ದಕ್ಕಿರುವಂತಹದ್ದು. ಒಂದು ಕಗ್ಗತ್ತಲ ಅಡುಗೆ ಕೋಣೆ, ಅದರೊಳಗೆ ಬಚ್ಚಲು, ಡೈನಿಂಗ್ ಹಾಲ್ ಕಮ್ ಲಿವಿಂಗ್ ರೂಮ್ ಕಮ್ ವೆರಾಂಡಾ ಕಮ್ ಎಲ್ಲವೂ ಆದ ಒಂದು ಸಣ್ಣ ಜಾಗ ಮತ್ತು ಅಲ್ಲೇ ಮೇಲೆ ಮಾಳಿಗೆ ಹತ್ತಲು ಎತ್ತರದ ಮೆಟ್ಟಿಲುಗಳು. ನನ್ನಂತಹ ಕುಳ್ಳನೆಯ ಮನುಷ್ಯರೂ ಸಹ ತಗ್ಗಿಬಗ್ಗಿ ಮೇಲೆ ಹತ್ತಬೇಕೆನ್ನುವಂತಹ ಸನ್ನಿವೇಶ. ಮನೆಯೊಳಗೆ ಇಬ್ಬರು ಅಥವಾ ಮೂವರು ಕೂರಬಹುದಾದ ವಾಸಸ್ಥಳ. ಇಷ್ಟರಲ್ಲಿ ಈ ಸಂಸಾರದ ಬದುಕು ಸಾಗಿತ್ತು. ಬಹುಶಃ ಅವರ ಬಡತನವನ್ನು ವಿವರಿಸಲು ಈ ಮನೆಗಿಂತ ಬೇರೇನೂ ಬೇಕಿಲ್ಲವೇನೋ. ಇಬ್ಬರು ಹೆಣ್ಣುಮಕ್ಕಳಿಗೆ ಮದುವೆಯಾದರೂ ನಮ್ಮ ದೇಶದ ಬಹುತೇಕ ವಿವಾಹಿತ ಮಹಿಳೆಯರ ಕೌಟುಂಬಿಕ ಜೀವನವೇ ಅವರಲ್ಲೂ ಪ್ರತಿಧ್ವನಿಸುತ್ತಿದ್ದುದನ್ನು ತಂದೆ ಸುರೇಶಪ್ಪನವರ ಮಾತುಗಳು ಹೇಳುತ್ತಿದ್ದವು. ಆ ಹೆಣ್ಣು ಮಕ್ಕಳಲ್ಲಿ ನೋವು ಸಂಕಟಗಳು ಮನೆ ಮಾಡಿದ್ದವು. ಇನ್ನು, ಮಗನೆಂದು ಸಹಜವಾಗಿಯೇ ಚೆನ್ನಾಗಿ ಓದಿಸಿದರೂ ಆತನ ಅನಾರೋಗ್ಯವೇ ಕೊಂಚ ಸಮಸ್ಯಾತ್ಮಕವಾಗಿ ಪರಿಣಮಿಸಿತ್ತು. ಕೊನೆಯ ಮಗಳು ಅನ್ನಪೂರ್ಣ ಪದವಿ ಶಿಕ್ಷಣ ಮುಗಿಸಿಕೊಂಡು ಕಂಪ್ಯೂಟರ್ ತರಬೇತಿ ಪಡೆದು ಕುಟುಂಬದ ಆಧಾರಸ್ತಂಭವಾಗಿ ನಿಲ್ಲುವತ್ತ ಹೆಜ್ಜೆ ಹಾಕುತ್ತಿದ್ದಳು.

**ಸ್ವಚ್ಛತಾ ಅಭಿಯಾನದ ಬಿರುಗಾಳಿ**

ಆ ಹೊತ್ತಿಗೆ ದೇಶದಲ್ಲಿ ಭರದಿಂದ ಬೀಸಿರುವ ಸ್ವಚ್ಛತಾ ಅಭಿಯಾನದ ಬಿರುಗಾಳಿ ಮತ್ತಿಹಳ್ಳಿಯನ್ನು ಹೊಕ್ಕಿತ್ತು. ಅಷ್ಟೇ ಅಲ್ಲ, ಯುವತಿ ಅನ್ನಪೂರ್ಣಳ ಜೀವಕ್ಕೂ ಕುತ್ತು ತಂದಿತ್ತು. ಗ್ರಾಮಸ್ಥರ ಪ್ರಕಾರ ಸುಮಾರು ೨೦೧೭ರ ಅಕ್ಟೋಬರ್‌ನಲ್ಲಿ ದಾವಣಗೆರೆ ಜಿಲ್ಲೆಯ ಮುಖ್ಯ ಕಾರ್ಯನಿರ್ವಹಣಾಧಿಕಾರಿ (ಸಿಇಓ) ಸ್ವಚ್ಛತಾ ಅಭಿಯಾನವನ್ನು ಅನುಷ್ಠಾನಗೊಳಿಸುವ ಸಲುವಾಗಿ ಪ್ರತಿ ಮನೆಯಲ್ಲೂ ಶೌಚಾಲಯ ಕಟ್ಟಿಸುವುದನ್ನು ಕಡ್ಡಾಯಗೊಳಿಸಲು ಗ್ರಾಮ ಪಂಚಾಯಿತಿಗಳಿಗೆ "ಮೌಖಿಕ" ಆದೇಶ ನೀಡಿರುತ್ತಾರೆಂದು ತಿಳಿದುಬಂದಿದೆ. ಅದರನ್ವಯ ಶೌಚಾಲಯವಿಲ್ಲದ ಕುಟುಂಬಗಳಿಗೆ ಪಡಿತರ ವಿತರಣೆ ನಿಲ್ಲಿಸುವುದು ಮತ್ತು ಪಡಿತರ ಚೀಟಿಯನ್ನೂ ತಡೆಹಿಡಿಯುವುದು ಎಂಬುದಾಗಿತ್ತು. ಈ ವಿಚಾರವನ್ನು 'ಹಲಗೆ ಹೊಡೆಯಲಾಗಿತ್ತು' ಎಂದು ಸ್ಥಳೀಯರು ತಿಳಿಸುತ್ತಾರೆ. ಅಲ್ಲದೆ, ಪಡಿತರ ಡಿಪೋಗಳಿಗೆ ಜಿಲ್ಲಾ ಪಂಚಾಯಿತಿಯಿಂದ ಇದೇ ನಮೂನೆಯ ಆದೇಶವೂ ರವಾನೆಯಾಗಿರುತ್ತದೆ.

ಶೌಚಾಲಯವಿಲ್ಲದ ಕಾರಣಕ್ಕಾಗಿ ಸುರೇಶಪ್ಪನವರ ಕುಟುಂಬಕ್ಕೆ ಪಡಿತರ ತಡೆಹಿಡಿದಾಗ ಸಂಬಂಧಪಟ್ಟ ಎಲ್ಲರೊಡನೆ ಸಾಕಷ್ಟು ಚರ್ಚೆಗಳನ್ನೂ ವಾದ ವಿವಾದಗಳನ್ನೂ ಮಾಡಿರುತ್ತಾರೆ. ಚಳವಳಿಯ ಗಂಧಗಾಳಿಯಿದ್ದ ಸುರೇಶಪ್ಪನವರು ಪಂಚಾಯಿತಿ ಕಚೇರಿಯಲ್ಲಿ ಧ್ವನಿಯೆತ್ತಿ ಆಹಾರ ಪರಿವೀಕ್ಷಣಾಧಿಕಾರಿಗಳನ್ನು ಪಡಿತರ ನೀಡುವಂತೆ ಒಪ್ಪಿಸುತ್ತಾರೆ. ತರುವಾಯ ಪಡಿತರ ಚೀಟಿಯ ಮೇಲೆ ಪಡಿತರ ನೀಡಲು 'ಸ್ವಚ್ಛ ಭಾರತ ಮಿಷನ್' ಮೊಹರು ಒತ್ತಿಕೊಡಲಾಗುತ್ತದೆ. ಶೌಚಾಲಯಕ್ಕೂ ಬಡವರಿಗೆ ಪೂರೈಸುವ ಅಲ್ಪಸ್ವಲ್ಪ ಆಹಾರಕ್ಕೂ ಸಂಬಂಧ ಕಲ್ಪಿಸಿ ತನ್ನ ಮೂರ್ಖ, ಅಮಾನವೀಯ, ಕಾನೂನುಬಾಹಿರ ಕ್ರಮದ ಮೂಲಕ ಅನ್ನಪೂರ್ಣ ಕುಟುಂಬಕ್ಕೆ ಮೊದಲ ಹಂತದ ಕಿರುಕುಳಕ್ಕೆ ಬುನಾದಿ ಹಾಕಿದ್ದು ದಾವಣಗೆರೆಯ ಜಿಲ್ಲಾಡಳಿತ. ಒಂದು ಕಡೆ ಜನ ಅಪೌಷ್ಟಿಕತೆಯಿಂದ ಬಳಲುತ್ತಿದ್ದರೆ, ನಿರುದ್ಯೋಗ, ಹಸಿವೆಗಳಿಂದ ಕಂಗಾಲಾಗುತ್ತಿದ್ದರೆ, ತಾಯಂದಿರು – ಮಕ್ಕಳು ರಕ್ತಹೀನತೆಯಿಂದ ನರಳುತ್ತಿದ್ದರೆ ಜಿಲ್ಲಾ ಪಂಚಾಯಿತಿಯು ಕೇವಲ ಶೌಚಾಲಯ ಇಲ್ಲವೆಂಬ ನೆಪವೊಡ್ಡಿ ಆಹಾರ ನಿಲ್ಲಿಸುವುದು ಎಷ್ಟು ಸೂಕ್ತ?

**ವಾಸಿಸಲೂ ಜಾಗವಿಲ್ಲ, ಇನ್ನು ಶೌಚಾಲಯವೆಲ್ಲಿ?**

ಸುರೇಶಪ್ಪನವರ ಮಗಳು ಅನ್ನಪೂರ್ಣ ವಿದ್ಯಾವಂತೆಯಾಗಿದ್ದು, ಆಕೆಗೂ ಶೌಚಾಲಯ ಅಗತ್ಯ ಮತ್ತು ಅನಿವಾರ್ಯ ಎನಿಸಿದರೂ ಅವರು ವಾಸಿಸಿದ್ದ ಮನೆ ಅದಕ್ಕಾಸ್ಪದ ನೀಡಿರಲಿಲ್ಲ. ಮನೆ ತೀರಾ ಸಣ್ಣದು; ಸುತ್ತಮುತ್ತಲೂ ತಮ್ಮದೆಂದು ಹೇಳಿಕೊಳ್ಳಲು ಯಾವುದೇ ಖಾಲಿ ಸ್ಥಳವಿಲ್ಲ. ಮನೆಯ ಪಕ್ಕದ ಮೂಲೆಯಲ್ಲಿ ತುಸು ಜಾಗ ಲಭ್ಯವಿದ್ದು ಅದು ಪಂಚಾಯಿತಿಗೆ ಸೇರಿದ್ದೆಂದು ಹೇಳಲಾಗಿದೆ. ಅಂತಿಮವಾಗಿ ಪಂಚಾಯಿತಿ ಅಧಿಕಾರಿಗಳು ಸುರೇಶಪ್ಪನವರ ಮನೆಯ ಹೊರಗಿನ ಮೂಲೆಯೊಂದರಲ್ಲಿ ಶೌಚಾಲಯ ಕಟ್ಟಿಕೊಳ್ಳುವಂತೆ ಇವರಿಗೆ ತಾಕೀತು ಮಾಡಿ ರಸ್ತೆಯ ಒಂದು ಬದಿಯಲ್ಲಿ ಶೌಚಗುಂಡಿ ತೋಡಲು ಒಪ್ಪುತ್ತಾರೆ. ಇದಕ್ಕಾಗಿ ಸ್ಥಳೀಯ ಪಂಚಾಯಿತಿಯಿಂದ ಕಾಮಗಾರಿ ಆದೇಶವನ್ನೂ ನೀಡಲಾಗುತ್ತದೆ. ಸಂಬಂಧಪಟ್ಟ ಪಂಚಾಯಿತಿ ಅಭಿವೃದ್ಧಿ ಅಧಿಕಾರಿ ಎರಡೆರಡು ಬಾರಿ ಸ್ಥಳ ಪರಿಶೀಲನೆ ನಡೆಸಿ ಅನುಮತಿ ನೀಡಲಾಗುತ್ತದೆ. ಇದು ಕೆಲವು ಸ್ಥಳೀಯ ಮುಖಂಡರ ಕೆಂಗಣ್ಣಿಗೆ ಗುರಿಯಾಗಿದೆ. ಅನ್ನಪೂರ್ಣ ದಾವಣಗೆರೆಯ ಸಿಇಓಗೆ ಕರೆಮಾಡಿ ತಮ್ಮ ಕುಟುಂಬದ ಸಮಸ್ಯೆಯನ್ನು ಹೇಳಿಕೊಂಡಿದ್ದಳೆಂದೂ ಪೋಷಕರು ಹೇಳುತ್ತಾರೆ.

ನಂತರ ಗುಂಡಿ ಅಗೆದು ರಿಂಗ್ ಕೂರಿಸುವ ಸಂದರ್ಭದಲ್ಲೂ ಸುರೇಶಪ್ಪನವರ ಕುಟುಂಬಕ್ಕೆ ಸಾಕಷ್ಟು ಕಿರುಕುಳ ಕೊಡಲಾಗಿದೆ. ಕೂಲಿ ಕೆಲಸಕ್ಕೆಂದು ಬಂದ ಕಾರ್ಮಿಕರನ್ನೂ ಬೆದರಿಸಿ ಓಡಿಸುವ ಪ್ರಯತ್ನ ನಡೆಸಲಾಗಿತ್ತೆಂದು ಕುಟುಂಬದ ಸದಸ್ಯರು ನಮ್ಮಲ್ಲಿ ಅಲವತ್ತುಕೊಂಡರು. ಅದು ಒಂದು ನಿರ್ದಿಷ್ಟ ಸಮುದಾಯಕ್ಕೆ ಸೇರಿದ ಜಾಗವೆಂದು ಹೇಳಿ ನೀರಗಂಟಿಯರಿಂದ ಹಿಡಿದು ಗ್ರಾಮ ಪಂಚಾಯಿತಿ ಅಧ್ಯಕ್ಷ, ಉಪಾಧ್ಯಕ್ಷ, ಪಿಡಿಓ ಆದಿಯಾಗಿ ಪೊಲೀಸರವರೆಗೂ ದಬ್ಬಾಳಿಕೆ ನಡೆಸಿರುತ್ತಾರೆ. ಚಿಟಗೇರಿ ಪೊಲೀಸ್ ಠಾಣೆಯ ಓರ್ವ ಎಎಸ್ಐ ಇವರ ಮನೆಗೆ ಬಂದು, "ನಿಮ್ಮ ವಿರುದ್ಧ ಊರಿನವರು ದೂರು ನೀಡಿದ್ದಾರೆ. ಗುಂಡಿ ತೋಡುವುದನ್ನು ನಿಲ್ಲಿಸಿ," ಎಂದು ದೂರಿನ ಪ್ರತಿಯೂ ಇಲ್ಲದೆ ಸುರೇಶಪ್ಪನವರಿಗೆ ಜಬರ್ದಸ್ತಿನಿಂದ ಹೇಳುವಾಗ ಅನ್ನಪೂರ್ಣ ಮತ್ತವಳ ತಾಯಿ ತಮ್ಮ ಕುಟುಂಬದ ಕ್ರಮವನ್ನು ಸಮರ್ಥಿಸಿಕೊಂಡಿದ್ದಾರೆ. ಆ ಸಂದರ್ಭದಲ್ಲಿ ಎಎಸ್ಐ ತನ್ನ ಅಧಿಕಾರ ದುರ್ಬಳಕೆ ಮಾಡಿಕೊಂಡು ಮಹಿಳೆಯರನ್ನು, "ಹೆಣ್ಣು ಮಕ್ಕಳಾಗಿ ನಿಮ್ಮದೇನು ಮಾತು? ಒದ್ದು ನಿಮ್ಮನ್ನ ಎಳ್ಕೊಂಡು ಹೋಗ್ತೇನೆ," ಎಂದು ಹೆದರಿಸಿದ್ದಾರೆಂದು ತಿಳಿದುಬಂದಿತು. ಹೀಗೆ ಪೊಲೀಸರ ಭಾಷೆ, ದರ್ಪ ಪ್ರಯೋಗವಾದುದರ ಬಗ್ಗೆ ಕುಟುಂಬ ಆಕ್ರೋಶ ವ್ಯಕ್ತಪಡಿಸುತ್ತಾ ಕಣ್ಣೀರು ಹಾಕಿತು. ಇದು ಒಂದು ದಿನಕ್ಕೆ ಮುಗಿಯದೆ, ಆತನ ಜೊತೆ ದಿನಕ್ಕೊಬ್ಬರು ಪೊಲೀಸರು ಪದೇಪದೇ ಬಂದು ಮನೆಯಲ್ಲಿದ್ದ ವೃದ್ಧರಿಗೆ, ಮಹಿಳೆಯರಿಗೆ ಕಿರುಕುಳ ನೀಡಿದ್ದನ್ನು ಸ್ಥಳೀಯರು ಗುರುತಿಸುತ್ತಾರೆ.

**ಆತಂಕ ಭಯಗಳಲ್ಲಿ ಕಮರಿದ ಅನ್ನಪೂರ್ಣ**

೨೦೧೭ರ ನವೆಂಬರ್ ೨೭ ಮತ್ತಿಹಳ್ಳಿ ಕಂಡ ಅತ್ಯಂತ ಕರಾಳ ದಿನವಾಗಿತ್ತು. ಅಂದು ಬೆಳಿಗ್ಗೆ ಊರಿನ ಮುಖಂಡರು ಪೊಲೀಸರ ಜೊತೆಗೂಡಿ ಸುರೇಶಪ್ಪನವರ ಪುಟ್ಟ ಮನೆಯ ಬಾಗಿಲಿನಲ್ಲಿ ನಿಂತರು. ಶೌಚಾಲಯದ ಕೆಲಸ ನಿಲ್ಲಿಸುವ ಬೆದರಿಕೆಯೊಡ್ಡಿದಾಗ ಸುರೇಶಪ್ಪನವರ ಮತ್ತು ಅವರೆಲ್ಲರ ನಡುವೆ ಮಾತಿನ ಚಕಮಕಿ ನಡೆದಿದೆ. ತನ್ನ ಮನೆಯ ಮುಂದೆ ಊರ ಜನ ಗುಂಪುಗಟ್ಟಿ ಕೆಲವರು ತಂದೆಯ ಮೇಲೆ ವಿನಾಕಾರಣ ಹರಿಹಾಯುತ್ತಿದ್ದದ್ದನ್ನು ಕಂಡಿದ್ದಾಳೆ ಅನ್ನಪೂರ್ಣ. ಪೊಲೀಸರ, ಅಧಿಕಾರಿಗಳ ನಿರಂತರ ಬೆದರಿಕೆಗಳನ್ನು ಸಹಿಸಲಾರದೆ ಮನನೊಂದ ಅವಳು

ವಾದವಿವಾದಗಳು ನಡೆಯುತ್ತಿರುವಾಗಲೇ ಯಾರಿಗೂ ಕಾಣದಂತೆ ಮನೆಯೊಳಗೆ ಹೋಗಿ ಮಾಳಿಗೆ ಏರಿ ಸೀಮೆ ಎಣ್ಣೆ ಸುರಿದುಕೊಂಡು ಬೆಂಕಿ ಹಚ್ಚಿಕೊಂಡ ಪ್ರಸಂಗ ವಿವರಿಸುವಾಗ ತಾಯಿಯ ಕಣ್ಣುಗಳಿಂದ ಧಾರಾಕಾರವಾಗಿ ನೀರು ಹರಿದಿತ್ತು, ಸಹಜವಾಗಿಯೇ ಮಗಳನ್ನು ಸ್ಮರಿಸಿಕೊಂಡ ಧ್ವನಿ ಭಾರವಾಗಿತ್ತು. ಧಗೆ ತಡೆಯಲಾರದೆ ಅನ್ನಪೂರ್ಣ ಮಾಳಿಗೆಯ ಮೇಲೆ ರಸ್ತೆಗಭಿಮುಖವಾದ ಬಾಗಿಲಿನಿಂದ ಹೊರಗೆ ಧುಮುಕಿದ್ದಾಳೆ. ಸುಟ್ಟ ದೇಹ ನೆಲದ ಮೇಲೆ ಬಿದ್ದು ಕಪ್ಪುಗಟ್ಟಿದ್ದ ಮಸಿ ಒಂದು ವಾರವಾದರೂ ಇನ್ನೂ ಮಾಸಿರಲಿಲ್ಲ. ಈ ಅನಾಹುತ ನಡೆಯುವಾಗಲೂ ಪೊಲೀಸರು, ಗ್ರಾಮದ ಮುಖಂಡರು ತಮ್ಮ ದರ್ಪ ದಬ್ಬಾಳಿಕೆಗಳನ್ನು ಮೆರೆದೇ ಇದ್ದರೆಂದು ಕುಟುಂಬಸ್ಥರು ಪೇಚಾಡುತ್ತಾರೆ. ಕೂಡಲೇ ಅನ್ನಪೂರ್ಣಳನ್ನು ಆಸ್ಪತ್ರೆಗೆ ದಾಖಲಿಸಿದರೂ ಶರೀರ ತೀವ್ರವಾಗಿ ಸುಟ್ಟಿದ್ದರಿಂದ ಆಕೆ ಹೆಣವಾಗಿ ಹೊರಬಂದಳೆಂದು ಹೇಳುವಾಗ ಹೆತ್ತವರ ಆಕ್ರಂದನ ಮುಗಿಲು ಮುಟ್ಟಿತ್ತು. ಪೊಲೀಸರ ದೌರ್ಜನ್ಯಕ್ಕೊಳಗಾದ ತನ್ನ ಕುಟುಂಬದ ಪರವಾಗಿ ಅನ್ನಪೂರ್ಣ ಅನೇಕ ಬಾರಿ ದಾವಣಗೆರೆ ಸಿಇಒ ಅವರಿಗೆ ನೇರವಾಗಿ ಕರೆ ಮಾಡಿ ಮಾತನಾಡಿದ್ದರೂ ಸಿಇಒ ಅವರಿಂದ ಸೂಕ್ಷ್ಮ ಸ್ಪಂದನೆ ದೊರೆತಿರಲಿಲ್ಲ ಎಂಬುದು ಕುಟುಂಬದವರ ಅಳಲು. ತನ್ನ ಕುಟುಂಬದ ಮೇಲಿನ ದಬ್ಬಾಳಿಕೆಗಳನ್ನು ಹೇಳಿಕೊಂಡು ನ್ಯಾಯ ಕೊಡಿಸಲು ಪ್ರಾರ್ಥಿಸಿ ಅನ್ನಪೂರ್ಣ ಸಿಇಒಗೆ ಬರೆದಿಟ್ಟಿದ್ದ ಪತ್ರ ಈಗ ಸಿಕ್ಕಿದೆ. ಅದನ್ನು ಅಂಚೆಗೆ ಹಾಕುವ ಮುನ್ನವೇ ಆಕೆಯ ಬಲಿಯಾಗಿದೆ ಎಂಬುದು ನೋವಿನ ಸಂಗತಿಯಾದರೂ ಈ ಅನಾಹುತಕ್ಕೆ ಮೂಲ ಕಾರಣವಾದ ಸಿಇಒ, ಅನ್ನಪೂರ್ಣಳ ಸಾವನ್ನು ತಡೆಗಟ್ಟುತ್ತಿದ್ದರೋ ಎಂಬ ಸಂಶಯ ದಟ್ಟವಾಗಿ ಉಳಿದಿದೆ.

ಯಥಾಪ್ರಕಾರ ಪೊಲೀಸರು ದಿಕ್ಕು ತಪ್ಪಿಸಿ ನಿಜವಾದ ಆರೋಪಿಗಳನ್ನು ರಕ್ಷಿಸಿದ್ದಾರೆ. ಕೆಲವರ ವಿರುದ್ಧ ನಾಮಕಾವಾಸ್ತೆ ಮೊಕದ್ದಮೆ ದಾಖಲಿಸಿ ಸುಮ್ಮನಾಗಿದ್ದಾರೆ. ಅರಳಬೇಕಿದ್ದ ಕುಸುಮವು ಸ್ವಚ್ಛತೆಯ ಹೆಸರಿನಲ್ಲಿ ಕಮರಿತು, ಮನುಷ್ಯ ಜೀವವೊಂದು ಬಲಿಯಾಯಿತು, ಇಡೀ ಕುಟುಂಬ ನೋವಿನ ಕಡಲಲ್ಲಿ ಮುಳುಗಿತು.

**ಸಾವಲ್ಲ, ಪ್ರಭುತ್ವ ನಡೆಸಿದ ಕಗ್ಗೊಲೆ**

ಈ ಪ್ರಕರಣದಲ್ಲಿ ಬಹಳ ಮುಖ್ಯವಾಗಿ ಗಮನಿಸಬೇಕಿರುವ ಅಂಶವೆಂದರೆ ಅನ್ನಪೂರ್ಣಳ ಸಾವಿಗೆ ಕಾರಣವಾಗಿದ್ದು ವ್ಯಕ್ತಿಗಳು ಮಾತ್ರವಲ್ಲ, ಪ್ರಭುತ್ವದ ಅಮಾನವೀಯ ನಿರ್ಧಾರಗಳು ಮತ್ತು ಅಧಿಕಾರಶಾಹಿಯ ದರ್ಪ. ಕೇವಲ ಸುಮಾರು ೧೪೦ ಚದರ ಅಡಿಗಳ ಜಾಗದಲ್ಲಿ ಮನೆಯ ವಿಸ್ತೀರ್ಣ ಕೇವಲ ೧೨೦ ಚದರ ಅಡಿಗಳಿದ್ದಾಗ ಶೌಚಾಲಯ ಕಟ್ಟುವುದಾದರೂ ಎಲ್ಲಿ ಮತ್ತು ಹೇಗೆ? ಆ ಮನೆಯ ಒಳಹೊಕ್ಕು ನೋಡಿದರೆ ಯಾವುದೇ ಮನುಷ್ಯನಿಗೆ ನಿಜಕ್ಕೂ ಇಲ್ಲಿ ಒಂದು ಘನತೆಯ ಬದುಕು ನಡೆಸಲು ಸಾಧ್ಯವಾದೀತೇ ಎಂದು ಪ್ರಜ್ಞಾವಂತರಿಗೆ ಅನಿಸದಿರದು. ಬಡತನ, ಹಸಿವೆ, ಜನರನ್ನು ಕಿತ್ತು ತಿನ್ನುತ್ತಿರುವಾಗ ಶೌಚಾಲಯವಿಲ್ಲದ ಕುಟುಂಬಗಳಿಗೆ ಪಡಿತರ ನೀಡುವುದಿಲ್ಲ ಎಂಬ ಸಿಇಒ ಆದೇಶ ಅದೆಷ್ಟು ಕ್ರೂರವಲ್ಲವೇ? ಇದೀಗ ದಾವಣಗೆರೆಯನ್ನು ಸಂಪೂರ್ಣ ಬಯಲು ಶೌಚ ಮುಕ್ತ ಜಿಲ್ಲೆ ಎಂದು ಘೋಷಿಸಲಾಗಿದೆ ಎನ್ನುವುದು ವ್ಯವಸ್ಥೆಯ ವಿಡಂಬನೆಯಲ್ಲದೆ ಮತ್ತೇನು? ತಂಪಾದ ಬಯಲಂತಹ ಕೊಠಡಿಗಳೊಳಗೆ ಕುಳಿತು ಆದೇಶಗಳನ್ನು, ನೀತಿಗಳನ್ನು ರೂಪಿಸುವ ಅಧಿಕಾರಶಾಹಿಗೆ ಗ್ರಾಮೀಣ ಜನರ, ದುಡಿಯುವ ಜನತೆಯ ಸಂಕಷ್ಟಗಳು ಅರ್ಥವಾಗದು. ಅಂಕಿಅಂಶಗಳ ಆಧಾರದಲ್ಲಿ ಗ್ರಾಮೀಣಾಭಿವೃದ್ಧಿಯ ಪರಿಕಲ್ಪನೆ ಹೊಂದಿರುವ ಅಧಿಕಾರಶಾಹಿಗೂ ಜನರ ಹಸಿವು ನೋವುಗಳನ್ನೂ ದುಷ್ಟ ರಾಜಕಾರಣದ ಬಂಡವಾಳವನ್ನಾಗಿ ಬಳಸಿಕೊಳ್ಳುವ ಬಂಡವಾಳಶಾಹಿ ರಾಜಕಾರಣಿಗಳಿಗೂ ಸ್ವಚ್ಛ ಭಾರತದ ನಿಜವಾದ ಪರಿಕಲ್ಪನೆ ತಿಳಿಯಲು ಸಾಧ್ಯವಿಲ್ಲ. ಒಂದು ಕಡೆ ಹಸಿವು ಮುಕ್ತ ಭಾರತದ ಘೋಷಣೆ, ಬೇಟಿ ಪಢಾವೊ ಬೇಟಿ ಬಚಾವೊ ಪ್ರಚಾರ, ಅನ್ನಭಾಗ್ಯ ಯೋಜನೆ, ಇತ್ಯಾದಿಗಳು, ಇನ್ನೊಂದೆಡೆ ಕೇಂದ್ರ ಸರ್ಕಾರದ ಸ್ವಚ್ಛ ಭಾರತ ಅಭಿಯಾನದ ಗುರಿ ಸಾಧನೆಗಾಗಿಯೇ ಅಂಕಿಅಂಶ ಏರಿಸಲು, ತುಂಬಿಸಲು ಬಡಜನರ ಮೇಲೆ ದೌರ್ಜನ್ಯ, ದಬ್ಬಾಳಿಕೆಗಳು. ಖಂಡಿತ ಇದು ಸ್ವತಂತ್ರ ಭಾರತ ಕಂಡ ನಿಜವಾದ ಗ್ರಾಮೀಣಾಭಿವೃದ್ಧಿಯ ಕನಸಲ್ಲ.

**ಶೌಚಾಲಯವಿಲ್ಲದಿದ್ದರೆ ಕತ್ತಲು ಎಂದ ಜಿಲ್ಲಾಡಳಿತ**

ಇದೇ ತೆರನಾದ ಇನ್ನೊಂದು ಆದೇಶ ಕೊಪ್ಪಳ ಜಿಲ್ಲೆಯಲ್ಲಿ ಕೇಳಿಬಂದಿದೆ. ಸ್ವಚ್ಛ ಭಾರತ ಅಭಿಯಾನದ ಅಡಿ ಬಯಲು ಶೌಚ ಮುಕ್ತ ಜಿಲ್ಲೆ ಎಂಬ ಹೆಗ್ಗಳಿಕೆಗೆ ಪಾತ್ರವಾಗಬೇಕೆಂಬ ಮಹತ್ವಾಕಾಂಕ್ಷೆಯಿಂದ ಶೌಚಾಲಯವಿಲ್ಲದ ಮನೆಗಳಿಗೆ ವಿದ್ಯುತ್ ಸಂಪರ್ಕ ಕಡಿತಗೊಳಿಸುವ ಬೆದರಿಕೆಯೊಡ್ಡಿ ಜಿಲ್ಲಾಡಳಿತ ಆದೇಶಿಸಿದೆ. ಶತಶತಮಾನಗಳಿಂದ ಕತ್ತಲಲ್ಲಿ ಬದುಕು ಕಂಡವರ ಬಾಳು ಬೆಳಗಿಸುವ ಬದಲು ಕೊಟ್ಟ ಬೆಳಕನ್ನೂ ಕಸಿಯುವ ಆಡಳಿತ ಯಂತ್ರಗಳು ಸಂವಿಧಾನದ ಆಶಯಕ್ಕೆ ತದ್ವಿರುದ್ಧವಾಗಿ ನಡೆದುಕೊಳ್ಳುತ್ತಿವೆ. ವಂಚಿತ ಜನಸಮುದಾಯಗಳಿಗೆ ಒಂದು ಸೌಲಭ್ಯ ಒದಗಿಸುವ ಸಲುವಾಗಿ ಇನ್ನೊಂದು ಸವಲತ್ತನ್ನು ಕಡಿತಗೊಳಿಸುವುದು ಖಂಡಿತವಾಗಿ ಸಲ್ಲದು. ಶೌಚಾಲಯ ಬಳಸುವುದು ಒಂದು ಆರ್ಥಿಕ – ಸಾಂಸ್ಕೃತಿಕ ಪರಿಕಲ್ಪನೆ. ಇಂತಹ ಕಾರ್ಯಗಳಿಂದ ಸಮಾಜ ಪ್ರಗತಿಯ ಕಡೆ ಸಾಗಬಹುದಾದರೂ ಅದನ್ನು ಒತ್ತಾಯಪೂರ್ವಕವಾಗಿ ಹೇರುವುದು ಅಸಾಧ್ಯ. ಅದರಿಂದಾಗುವ ಅನುಕೂಲಗಳ ಬಗ್ಗೆ ಜನರ ಮನವೊಲಿಸಿ ಯೋಜನೆಯನ್ನು ಜಾರಿಗೊಳಿಸಬೇಕೇ ವಿನಾ ಮಿಲಿಟರಿ ಆಪರೇಷನ್ ರೀತಿಯಲ್ಲಿ ಯೋಜನೆಗಳನ್ನು ಜಾರಿಗೊಳಿಸಲಾಗದೆಂಬುದನ್ನು ಅಧಿಕಾರಶಾಹಿ ಅರಿಯಬೇಕು. ಆಳುವ ಸರ್ಕಾರಗಳು ಮೌನ ಮುರಿದು ಅವುಗಳಿಗೆ ತಿಳಿಹೇಳಬೇಕು.

ಕರ್ನಾಟಕದ ಬಹುತೇಕ ಭಾಗಗಳಲ್ಲಿ ಜನರು ಕುಡಿಯುವ ನೀರಿಗೇ ಹಾಹಾಕಾರಪಡುತ್ತಿರುವುದು ಸುಳ್ಳಲ್ಲ. ನೀರಿಗಾಗಿ ಎಲ್ಲೆಡೆ ಸಾಕಷ್ಟು ಹೋರಾಟ ನಡೆದಿದೆ. ಇನ್ನು ಶೌಚಾಲಯ ಕಟ್ಟಿಕೊಳ್ಳಿ ಎಂದರೆ ಅದನ್ನು ಬಳಸಲು ನೀವು ನೀರು ಪೂರೈಸುವಿರೇ ಎಂಬ ಅವರ ಪ್ರಶ್ನೆಗೆ ಇನ್ನೂ ನಮ್ಮ ಸರ್ಕಾರಗಳ ಬಳಿ ಉತ್ತರ ಸಿಕ್ಕಿಲ್ಲ. ಇಂತಹ ಸನ್ನಿವೇಶದಲ್ಲಿ ಸಬ್ಸಿಡಿಗಾಗಿ, ಒತ್ತಾಯಕ್ಕಾಗಿ ನಿರ್ಮಿಸಲಾಗಿರುವ ಸ್ವಚ್ಛ ಭಾರತ ಶೌಚಾಲಯಗಳು ಸರ್ಕಾರದಿಂದ ಪೂರ್ಣ ಹಣ ದೊರೆತ ನಂತರ ಕೊಂಚ ಮಾರ್ಪಾಟಿನೊಂದಿಗೆ ಮನೆಯ ಗೋದಾಮುಗಳಾಗಿ ಪರಿವರ್ತನೆಯಾಗಿರುವುದನ್ನು ಗ್ರಾಮಗಳಲ್ಲಿ ನೋಡಬಹುದು. ಅದರ ಜೊತೆಗೆ ಹಾಲಿ ಇರುವ ಅಲ್ಪಸ್ವಲ್ಪ ತೆರೆದ ಜಾಗಗಳು ಮನುಷ್ಯರ ಮಲಮೂತ್ರ ವಿಸರ್ಜನೆಗೆಂದು ಬಳಕೆಯಾಗುವುದೇನೂ ನಿಂತಿಲ್ಲ.

ಸ್ವಚ್ಛ ಭಾರತವೆಂದರೆ ಕೇವಲ ಶೌಚಾಲಯಗಳ ನಿರ್ಮಾಣವಲ್ಲ. ಜನತೆ ಶೌಚಾಲಯವನ್ನು ಬಳಸುವಂತೆಯೂ ಆಗಬೇಕು. ಅಷ್ಟೇ ಅಲ್ಲ, ಮಾನವರನ್ನು ಕೊಳಚೆಯಲ್ಲಿ ಇಳಿಸಿ ಸ್ವಚ್ಛಗೊಳಿಸುವ ಅಮಾನವೀಯ ಪದ್ಧತಿ ಕೊನೆಯಾಗಬೇಕು. ೨೦೧೬ರ ಸಾಲಿನಲ್ಲಿ ೧೩೦೦ ಕಾರ್ಮಿಕರು ಚರಂಡಿಯೊಳಗೆ ಉಸಿರುಗಟ್ಟಿ ಸತ್ತಿದ್ದಾರೆಂದು ವರದಿಗಳು ಹೇಳುತ್ತವೆ. ಇತ್ತೀಚೆಗಷ್ಟೇ ಬೆಂಗಳೂರಿನಲ್ಲಿ ಮೂವರು ಕಾರ್ಮಿಕರು ದುರ್ಮರಣ ಹೊಂದಿದ್ದನ್ನು ಕಂಡಿದ್ದೇವೆ. ಅಲ್ಲದೆ, ಸುಮಾರು ೮ ಲಕ್ಷ ಕಾರ್ಮಿಕರು ಚರಂಡಿಗಳನ್ನು ಕೈಗಳಿಂದ ಸ್ವಚ್ಛಗೊಳಿಸಿ ಬದುಕು ಸಾಗಿಸುತ್ತಿರುವ ಘೋರ ಸಂಗತಿಯನ್ನು ೨೦೧೧ರ ಜನಗಣತಿಯ ಅಂಕಿಅಂಶಗಳು ಬಹಿರಂಗಪಡಿಸುತ್ತವೆ. ಸ್ವಚ್ಛ ಭಾರತ ಅಭಿಯಾನದ ಪ್ರಚಾರ ಕಾರ್ಯಕ್ಕೆಂದು ಕಳೆದ ಮೂರು ವರ್ಷಗಳಲ್ಲಿ ಸುಮಾರು ೫೩೦ ಕೋಟಿ ರೂಪಾಯಿಗಳನ್ನು ವೆಚ್ಚ ಮಾಡಲಾಗಿದೆ. ಇದು ಬೇಟಿ ಪಢಾವೊ ಬೇಟಿ ಬಚಾವೊ ಆಂದೋಲನಕ್ಕಿಂತ ಸುಮಾರು ೧೫ ಪಟ್ಟು ಅಧಿಕ. ಆದರೆ ಈ ಹಣವನ್ನು ಕೇವಲ ಮಾಧ್ಯಮ ಪ್ರಚಾರಗಳಿಗೆ ಬಳಸಲಾಗಿದೆಯೇ



**ಭಾರತ ಕಮ್ಯುನಿಸ್ಟ್ ಪಕ್ಷದ ಸತ್ಯಶೋಧನಾ ಸಮಿತಿ ಗ್ರಾಮಕ್ಕೆ ಭೇಟಿಯಿತ್ತು ಮೃತ ಯುವತಿಯ ಕುಟುಂಬದ ಜೊತೆ ಮಾತನಾಡುತ್ತಿರುವುದು.**

ಹೊರತು ಜನರಿಗೆ ತಿಳುವಳಿಕೆ ಮೂಡಿಸಿ ಅವರ ಮನಸ್ಸುಗಳನ್ನು ಪರಿವರ್ತಿಸುವ ಕಾರ್ಯಕ್ರಮಗಳಿಗೆ ವಿನಿಯೋಗಿಸಲಾಗಿಲ್ಲ. ಅಷ್ಟೇ ಅಲ್ಲದೆ, ನಗರ ಪ್ರದೇಶಗಳಲ್ಲಿ ನಿರ್ಮಿಸ ಲಾಗಿರುವ ಶೌಚಾಲಯಗಳ ನಿರ್ವಹಣೆಯ ಪಾಡು ಹೇಳತೀರದು.

**ಭೂಮಿ ನೀಡಿ, ಘನತೆಯ ಬದುಕು ಕೊಡಿ**

ರಾಷ್ಟ್ರೀಯ ಆಹಾರ ಸುರಕ್ಷತಾ ಕಾಯಿದೆ ಜಾರಿಯಲ್ಲಿದ್ದರೂ ದಾವಣಗೆರೆಯಂತಹ ಜಿಲ್ಲೆಗಳಲ್ಲಿ ಶೌಚಾಲಯದ ನೆಪವೊಡ್ಡಿ ಬಡಕುಟುಂಬಗಳಿಗೆ ಆಹಾರಧಾನ್ಯಗಳನ್ನು ನಿರಾಕರಿಸುವ ಜಿಲ್ಲಾಡಳಿತದ ನಡೆ ಶಿಕ್ಷಾರ್ಹವಲ್ಲವೇ? ಖಾಲಿ ಸ್ಥಳದ ಲಭ್ಯತೆಯೇ ಇಲ್ಲದ ಮನೆಗಳಲ್ಲಿ ಶೌಚಾಲಯವಿಲ್ಲದ ಕಾರಣಕ್ಕೆ ವಿದ್ಯುತ್ ಸೌಕರ್ಯ ಕಡಿತಗೊಳಿಸುವ ತೀರ್ಮಾನ ಅಕ್ಷಮ್ಯವಲ್ಲವೆ? ಇದು ಮನೆ ಇರುವವರ ಕಥೆಯಾದರೆ ದೇಶದ ೧.೭೭ ದಶಲಕ್ಷ ವಸತಿಹೀನರು ಶೌಚಾಲಯಗಳನ್ನು ನಿರ್ಮಿಸುವುದೆಲ್ಲಿ, ಪಡಿತರ ಪಡೆಯುವುದೆಲ್ಲಿ? ಅವರನ್ನು ಆಹಾರದಿಂದ ವಂಚಿತರನ್ನಾಗಿಸುವುದು ಸಂವಿಧಾನಬಾಹಿರ ಕ್ರಮವಲ್ಲವೇ? ಬಂಧೀಖಾನೆಯ ಕೋಣೆಗಳಿಗೆ ನಿಗದಿಪಡಿಸಿರುವ ಮಾದರಿ ವಿಸ್ತೀರ್ಣಕ್ಕಿಂತಲೂ ಕಡಿಮೆ ವಿಸ್ತೀರ್ಣದ ಮನೆಗಳಲ್ಲಿ ಗ್ರಾಮೀಣ ಭಾರತದ ಶೇ. ೮೦ರಷ್ಟು ಬಡಕುಟುಂಬಗಳು ವಾಸಿಸುತ್ತಿರುವುದಾಗಿ ಎನ್ಎಸ್ಎಸ್ಓ ನಡೆಸಿರುವ ಸಮೀಕ್ಷಾ ವರದಿ ಹೇಳಿದೆ. ಇನ್ನು ಅವುಗಳಿಗೆ ಶೌಚಾಲಯಗಳು ಕನಸಿನ ಮಾತೇ.

ಇಂತಹ ಅಮಾನವೀಯ ಆದೇಶಗಳನ್ನು ಹೊರಡಿಸುವ ಕಾರ್ಯಾಂಗ ಮತ್ತು ಈ ಆದೇಶಗಳಿಗೆ ಕುಮ್ಮಕ್ಕು ನೀಡುವ ಸಂವೇದನಾರಹಿತ ಶಾಸಕಾಂಗಗಳು ನಿಜವಾಗಿಯೂ ಜನರ ಆರೋಗ್ಯ, ನೈರ್ಮಲ್ಯಗಳ ಬಗ್ಗೆ ಚಿಂತಿಸುವುದೇ ಆದಲ್ಲಿ ಶೌಚಾಲಯ ಕಟ್ಟಲೂ ಜಾಗವಿಲ್ಲದ, ನೆಮ್ಮದಿಯ ಸೂರಿಗಾಗಿ ಪರಿತಪಿಸುತ್ತಿರುವ ಕುಟುಂಬಗಳಿಗೆ ವಾಸಯೋಗ್ಯ ಭೂಮಿ ಮಂಜೂರು ಮಾಡಿ ಮನೆ ಕಟ್ಟಿಕೊಳ್ಳಲು ಅವಕಾಶ ಮಾಡಿಕೊಡಬೇಕು. ಅಧಿಕಾರಿಗಳು ತಮ್ಮ ಭವ್ಯ ಬಂಗಲೆಗಳಿಂದ ಆಗೊಮ್ಮೆ ಈಗೊಮ್ಮೆಯಾದರೂ 'ಸ್ವಚ್ಛವಿಲ್ಲದ' ಗ್ರಾಮಗಳ ಒಳಗೆ ಸಂಚರಿಸಿ ಬದುಕಿರುವ ಜನಸಮುದಾಯದ ಬವಣೆಗಳನ್ನು ಅರ್ಥೈಸಿಕೊಂಡರೆ ಇಂತಹ ಕ್ರೂರ ಆದೇಶಗಳು ಹೊರಬರುವುದಿಲ್ಲ. ಪೊಲೀಸರು ಜನಸಾಮಾನ್ಯರ ರಕ್ಷಕರಾಗಬೇಕೇ ವಿನಾ ಅಮಾಯಕರಿಗೆ ಬೆದರಿಕೆಯೊಡ್ಡುವ ಭಕ್ಷಕರಾಗಬಾರದು. ಅನ್ನಪೂರ್ಣ ಎಂಬ ಮುಗ್ಧ ಯುವತಿ ತನ್ನದಲ್ಲದ ತಪ್ಪಿಗೆ ಆಹುತಿಯಾಗಿದ್ದಾಳೆ. ಇದು ಅವಳ ಆತ್ಮಹತ್ಯೆಯಲ್ಲ, ಒಟ್ಟಾರೆ ಪ್ರಭುತ್ವ ನಡೆಸಿರುವ ಕಗ್ಗೊಲೆ ಎಂದು ಹೇಳಬೇಕಾಗುತ್ತದೆ. ಪಂಚಾಯತಿ ಅಧಿಕಾರಿಗಳು ಕಾಮಗಾರಿ ಆದೇಶ ನೀಡದ ನಂತರವೂ ಕಲಹಕ್ಕೆ ಅವಕಾಶ ನೀಡಿ ಅನ್ನಪೂರ್ಣ ಕುಟುಂಬಕ್ಕೆ ಅನಗತ್ಯ ಕಿರುಕುಳ ನೀಡಿದ್ದು ಯಾಕೆ ಎಂಬ ಪ್ರಶ್ನೆಗೆ ಜಿಲ್ಲಾಡಳಿತ ಉತ್ತರಿಸಬೇಕು. ಆದರೆ ಇವರ ಯಾವುದೇ ವಿವರಣೆಗಳಿಂದಲೂ ಕಳೆದುಹೋದ ಜೀವ ಮರಳಿಬರಲಾರದು, ಕುಟುಂಬದ ನೋವನ್ನು ಪರಿಹರಿಸಲಾರದು. ಇದು ನಮ್ಮ ಪ್ರಜಾತಂತ್ರದ ದುರಂತಮಯ ಕಾರ್ಯವೈಖರಿಯ ಪ್ರತಿಬಿಂಬವಾಗಿದೆ. ಆಳುವ ಸರ್ಕಾರಗಳನ್ನು ಎಚ್ಚರಿಸುತ್ತಲೇ ಸತ್ತಂತಿರುವ ವ್ಯವಸ್ಥೆಯನ್ನು ಪ್ರಜ್ಞಾವಸ್ಥೆಗೆ ತರುವುದು ನಮ್ಮೆಲ್ಲರ ಮೇಲಿರುವ ಬಹುದೊಡ್ಡ ಜವಾಬ್ದಾರಿಯಾಗಿದೆ. ಇಲ್ಲವಾದರೆ ನಾವೂ ಅದೇ ವ್ಯವಸ್ಥೆಯ ಭಾಗವಾಗಿ ಕಳೆದುಹೋಗುತ್ತೇವೆ.

**ಜ್ಯೋತಿ ಎ.**
ಫ್ಲ್ಯಾಟ್ ನಂ. ಎಸ್–೩, ನಂ. ೩೭, 'ಅನಂತರತ್ನ ರೆಸಿಡೆನ್ಸಿ'
೧೬ನೇ ಮುಖ್ಯರಸ್ತೆ, ವಿಜಯನಗರ, ಬೆಂಗಳೂರು – ೫೬೦ ೦೪೦

## ಸಾವು....




ನೀವು ನಿಂತಿರುವ
ಕೋಟೆಯ ತುತ್ತತುದಿಯ
ಇಟ್ಟಿಗೆಯಲ್ಲಿ ಹಗುರಾಗಿ ನಿಂತಿರಬಹುದು,
ಅಬ್ಬರಿಸಿ ಬರುವ ಸಾಗರದ
ತೆರೆಗಳ ಹಿಂದೆ ಬರಸೆಳೆದು ಅಪ್ಪಲು ಬರಬಹುದು,
ಸರಸವಾಡುವ ಹಗ್ಗದ ಒಂದು ಎಳೆಯಲ್ಲಿ ಇರಬಹುದು
ಕೈ ಬಿಟ್ಟು ಓಡಿಸುವ
ಹೊಂಡಾದ ಕಪ್ಪುಗಾಲಿಯ ಅಂಚಿನಲ್ಲಿ
ಕರಾಳವಾಗಿ ನಿಂತಿರಬಹುದು,
ನೀವು ಮೈ ಮರೆತು
ಕುಡಿಯುವ ಪೆಗ್ಗಿನ ಕೊನೆಯ ಹನಿಯಲ್ಲಿರಬಹುದು,
ಕಣ್ಮುಚ್ಚಿ ಎಳೆಯುವ ಹೊಗೆಯ ಸಣ್ಣ
ಜುರುಕಿಯಲ್ಲಿರಬಹುದು,
ನೀವು
ಬಳಸುವ ಬಂದೂಕಿನ ಒಂದು ಗುಂಡಿನ
ಮೊನೆಯಲ್ಲಿರಬಹುದು,
ಕೆಣಕಬೇಡಿ ಬೆಟ್ಟದ ತುತ್ತತುದಿಯಲ್ಲಿ ನಿಂತು
ನಾನೇ ದೊಡ್ಡವನೆಂದು,
ಕಾಲಕೆಳಗಿನ ಹರಳಿನಲ್ಲಿ ಇರಬಹುದು ನಿಮ್ಮ ಹೆಸರು,
ಸಾಹಸ ಬೇಡವೆಂದಲ್ಲ
ದುಸ್ಸಾಹಸವೇಕೆ!
ದುಸ್ಸಾಹಸದಿಂದ ಅದನ್ನು
ಗೆದ್ದವರು ಇಲ್ಲ ಯಾರೂ!

ಬಿಸಿ ರಕ್ತದ ಬಂಟರೆ
ತುಂಟತನದಿಂದ ಕೆಣಕಬೇಡಿ
ಅದು ಸೆಲ್ಫಿಯ ಹಿಂದೆ ನಿಂತು
ನಿಮ್ಮನ್ನೇ ಅಣಕಿಸುತ್ತಿರಬಹುದು !

**ಡಾ|| ಬಿ. ಬಿ. ಪೂಜಾರಿ**
ಸೊಲ್ಲಾಪುರ, ಕನ್ನಡ ಸಂಶೋಧನ ಕೇಂದ್ರ
ಸಂಗಮೇಶ್ವರ ಕಾಲೇಜು, ಸೊಲ್ಲಾಪುರ – ೪೧೩ ೦೦೧



# ಮೌಖಿಕ ಕಾವ್ಯಗಳು ಓದು ಮತ್ತು ಪ್ರೇರಣೆ



**ಮೌ**ಖಿಕ ಕಾವ್ಯಗಳು ಧಾರ್ಮಿಕ, ಆಚರಣಾತ್ಮಕ, ಭಾಷಿಕ ಹಾಗೂ ಸಾಹಿತ್ಯಕ – ಹೀಗೆ ಬಹುತ್ವದ ಆಯಾಮಗಳನ್ನು ಒಳಗೊಂಡಿರುತ್ತವೆ. ಮೌಖಿಕ ಕಾವ್ಯಗಳು ಸ್ಥಳೀಯ ಸಾಂಸ್ಕೃತಿಕ ಸನ್ನಿವೇಶಗಳ ಉತ್ಪನ್ನ. ಪ್ರತಿಯೊಂದು ಮೌಖಿಕ ಕಾವ್ಯವೂ ವಿಭಿನ್ನವಾದ ಪಠ್ಯ, ಪ್ರದರ್ಶನ, ನಿಯೋಗ ಮತ್ತು ಆಕೃತಿಗಳನ್ನು ಹೊಂದಿರುತ್ತದೆ. ಪ್ರತಿ ಪ್ರದರ್ಶನದಲ್ಲೂ ಭಿನ್ನರೂಪಗಳನ್ನೂ, ಭಿನ್ನಪಠ್ಯ – ಉಪಪಠ್ಯಗಳನ್ನೂ ನಿರ್ಮಿಸುತ್ತದೆ. ಕನ್ನಡದ 'ಮಲೆಮಾದೇಶ್ವರ', 'ಮಂಟೇಸ್ವಾಮಿ', 'ಜುಂಜಪ್ಪ', 'ಕುಮಾರರಾಮ' ಮತ್ತು 'ಹಾಲುಮತ' – ಈ ಮೌಖಿಕ ಕಾವ್ಯಗಳಲ್ಲಿ ಸಂಸ್ಕೃತಿ, ಇತಿಹಾಸ, ಸಾಹಿತ್ಯ ಮತ್ತು ಜನಾಂಗಗಳ ಸಂಬಂಧಗಳು ಗಾಢವಾಗಿ ಹಾಸುಹೊಕ್ಕಾಗಿರುತ್ತವೆ.

ಭಾರತ, ಆಫ್ರಿಕಾ ರಾಷ್ಟ್ರಗಳ ಮೌಖಿಕ ಕಾವ್ಯಗಳು ದಾಖಲಾತಿಯಾಗುವುದಕ್ಕೆ ಶುರುವಾಗಿ ಇನ್ನೂ ಅರ್ಧ ಶತಮಾನ ಕೂಡ ತುಂಬಿಲ್ಲ. ಅದರಲ್ಲೂ ಕನ್ನಡದ ಮೌಖಿಕ ಕಾವ್ಯಗಳ ದಾಖಲಾತಿಯ ಆಯಸ್ಸು ಇನ್ನೂ ಕಡಿಮೆ. ಸಂಪಾದನೆ, ಸಂಗ್ರಹ, ದಾಖಲಾತಿ ಕಾರ್ಯವೇ ಇನ್ನೂ ಸರಿಯಾಗಿ ಆಗಿಲ್ಲ. ಅವುಗಳ ಪಠ್ಯ, ಸಹಪಠ್ಯ, ಪ್ರದರ್ಶನ, ದಾಖಲಾತಿಗಳು ಸಾಲದು. ಸ್ಥಿತಿ ಹೀಗಿರುವಾಗ ಅವುಗಳ ಅಧ್ಯಯನ, ತೌಲನಿಕ ಅಧ್ಯಯನ, ಚರ್ಚೆ, ಸಂವಾದ, ಮರುಓದು, ಮರುಮೌಲ್ಯಮಾಪನ ಈಗೀಗ ಪ್ರಾರಂಭವಾಗಿವೆ. 'ಮರುಓದು' ಇರಲಿ, 'ಮರುಸಂಗ್ರಹ' ಕಾರ್ಯವೂ ಆಗಬೇಕಾಗಿದೆ. ಇದರ ಬಗ್ಗೆ ಅನೇಕ ತೊಡಕುಗಳೂ ಇವೆ. ಆದರೆ ಈ ನಿಟ್ಟಿನಲ್ಲಿ ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಕಳೆದ ಐವತ್ತು ವರ್ಷಗಳಲ್ಲಿ ಮೌಖಿಕ ಕಾವ್ಯಗಳ ಅಧ್ಯಯನ ಕ್ಷೇತ್ರದಲ್ಲಿ ತೀವ್ರತರವಾದ ಅಧ್ಯಯನಗಳು ನಡೆದಿವೆ.

ಕನ್ನಡದ ಮೌಖಿಕ ಕಾವ್ಯಗಳು ಪ್ರಧಾನವಾಗಿ ಕಥನ ಕಾವ್ಯಗಳು; ಭಾರತೀಯ ಪರಂಪರೆಯಲ್ಲಿ ಕಥೆಗೆ ವಿಶಿಷ್ಟ ಸ್ಥಾನವಿದೆ. ಕಥೆ ಎಂದರೆ ಅದೊಂದು ವಿಧ್ಯುಕ್ತವಾದ ಆಚರಣೆ. ಮೌಖಿಕ ಕಾವ್ಯಗಳ ತಿರುಳು ಅಡಗಿರುವುದೇ ಆಚರಣೆ ಮತ್ತು ಪ್ರದರ್ಶನಗಳ ಮೇಲೆ. ಈ ಕಥೆಗಳಲ್ಲಿ ಹೇಳುವ ಮತ್ತು ಕೇಳುವ ಎರಡೂ ಪ್ರಕ್ರಿಯೆಗಳು ನಿರಂತರವಾಗಿರುತ್ತವೆ. ಶಿಷ್ಟಕಾವ್ಯಗಳಲ್ಲಿ 'ಆಶ್ವಾಸ', 'ಅಧ್ಯಾಯ', 'ಖಂಡ', 'ಪರ್ವ' ಇತ್ಯಾದಿ ಇದ್ದಂತೆ, ಮೌಖಿಕ ಕಾವ್ಯಗಳಲ್ಲಿಯೂ 'ಸಾಲು', 'ಕವಟ್ಲು', 'ಸಂಧಿ', 'ಸೊಲ್ಲು', 'ವಚನ', 'ಹಾಡು' ಇತ್ಯಾದಿಗಳಿರುತ್ತವೆ. ಇವುಗಳಿಗೆ ಸಾವಯವ ಸಂಬಂಧವಿದ್ದು ಶಿಷ್ಟ ಕಾವ್ಯಗಳಿಗಿಂತ ಭಿನ್ನವಾದ ಸಂಕೀರ್ಣತೆಯನ್ನು ಇವು ಕಾಣಿಸುತ್ತವೆ. ಶಿಷ್ಟಕಾವ್ಯಗಳ ನಾಯಕರೆಲ್ಲಾ ಪುರಾಣದ ವ್ಯಕ್ತಿಗಳಾಗಿದ್ದರೆ, ಮೌಖಿಕ ಕಾವ್ಯಗಳ ಕಥಾನಾಯಕರೆಲ್ಲಾ ಚಾರಿತ್ರಿಕ ವ್ಯಕ್ತಿಗಳು.

ಇದರ ಜೊತೆಗೆ ಶಿಷ್ಟ ಮತ್ತು ಮೌಖಿಕ ಈ ಎರಡೂ ಪರಂಪರೆಗಳು ಪರಸ್ಪರ ಒಂದನ್ನೊಂದನ್ನು ಪ್ರಭಾವಿಸುತ್ತಾ ಬಂದಿವೆ. ಎ. ಕೆ. ರಾಮಾನುಜನ್ ಅವರು ಹೇಳುವಂತೆ, " 'ಅಭಿಜಾತ', 'ಜಾನಪದ' ಮತ್ತು 'ಜನಪ್ರಿಯ' ಎಂಬ ಭಾರತೀಯ ಸಂಸ್ಕೃತಿಯಲ್ಲಿ ಯಾವುದು ಈಗಾಗಲೇ ವರ್ಗೀಕೃತವಾಗಿದೆಯೋ ಅದೆಲ್ಲವನ್ನೂ ನಿರಂತರವಾಗಿ ಪರಸ್ಪರ ಪ್ರತಿಸ್ಪಂದಿಸುವ ಕ್ರಿಯೆಯ ಭಾಗವಾಗಿಯೇ ಪರಿಗಣಿಸಬೇಕು. ಪಠ್ಯಗಳು ಇತರ ಪಠ್ಯಗಳಿಗೆ ಸಂದರ್ಭಗಳಾಗಿ, ಆ ಪಠ್ಯಗಳ ಸೃಷ್ಟಿಗೆ ನೆಪಗಳಾಗಿ ಪರಿಣಮಿಸುತ್ತವೆ. ಈಚಿನ ನಮ್ಮ ಅಧ್ಯಯನಗಳಲ್ಲಿ ಜನಪದ ಪಠ್ಯಗಳನ್ನು ಅಂತರ್‌ಪಠ್ಯದ ಸಂದರ್ಭದಲ್ಲಿಟ್ಟು ನೋಡುವ ಕೆಲಸವನ್ನು ಆರಂಭಿಸಿದ್ದೇವೆ. ಏಕೆಂದರೆ ಜನಪದ ಪಠ್ಯಗಳು ಕೇವಲ ಹಳ್ಳಿಗಳಲ್ಲಿ ಅನಕ್ಷರಸ್ಥರ ನಡುವೆ ಮಾತ್ರ ರೂಪುಗೊಳ್ಳುವುದಿಲ್ಲ. ಒಂದು ಸಮಾಜ ರೂಪಿಸುವ ಎಲ್ಲಾ ಪಠ್ಯಗಳಲ್ಲಿ ಸಮಾಜದ ಎಲ್ಲಾ ಸ್ತರಗಳಲ್ಲಿ ಅವು ಸರ್ವವ್ಯಾಪಿಯಾಗಿರುತ್ತವೆ." (ಅನುವಾದ : ಭಾರತೀಯ ಜನಪದ ಕತೆಗಳು, ಮಹಾಬಲೇಶ್ವರ ರಾವ್, ಪ್ರಸ್ತಾವನೆ, ಪು. xxi, ಮೂಲ : Folktales from India : ಎ. ಕೆ. ರಾಮಾನುಜನ್)

ಭಾರತೀಯ ಸಂಸ್ಕೃತಿ ಎನ್ನುವುದು ಹೀಗೆ ಶಿಷ್ಟ (ಅಭಿಜಾತ) ಮತ್ತು ಮೌಖಿಕ (ಜಾನಪದ) ಎರಡೂ ಪರಸ್ಪರ ಸಂಬಂಧ ಹೊಂದಿರುತ್ತವೆ. ಜೊತೆಗೆ ಈ ಮೌಖಿಕ ಕಾವ್ಯಗಳ ಪ್ರಭಾವ ಬರೀ ಶಿಷ್ಟಸಾಹಿತ್ಯದ ಮೇಲೆ ಮಾತ್ರವಾಗದೆ, ಆಧುನಿಕ ಕನ್ನಡ ಸಾಹಿತ್ಯದ ಮೇಲೆ, ಅದರಲ್ಲೂ ವಿಶೇಷವಾಗಿ ನವೋದಯ ಮತ್ತು ದಲಿತ – ಬಂಡಾಯ ಸಾಹಿತ್ಯದ ಮೇಲೂ ಗಾಢವಾಗಿಯೇ ಆಗಿದೆ. ನಾನು ಕೂಡ 'ಗುಣಸಾಗರಿ' ಕಾವ್ಯದಿಂದ ಪ್ರಭಾವಿತನಾಗಿ 'ಗುಬ್ಬಚ್ಚಿಗಳು' ಎಂಬ ಕಥೆಯನ್ನು ಬರೆದೆ; ಜನಪದ ಮಾದಿಗರ ಕಾವ್ಯವೊಂದರ ಆಚರಣೆಯಿಂದ ಪ್ರಭಾವಿತನಾಗಿ 'ಉಗುಳು' ಎಂಬ ಕಥೆಯನ್ನು ಬರೆದೆ; ಜನಪದರ ನಂಬಿಕೆಯನ್ನು ಆಧರಿಸಿ 'ಅವಶೇಷ' ಎಂಬ ಮತ್ತೊಂದು ಕಥೆಯನ್ನು ಬರೆದೆ. ಜನಪದ ಸಾಹಿತ್ಯದ ರೂಪಕಗಳು, ಪ್ರತಿಮೆಗಳು, ಪುರಾಣಗಳು, ನಂಬಿಕೆಗಳು, ಆಚರಣೆಗಳನ್ನು ಬಳಸಿಕೊಂಡರೆ ಉತ್ತಮವಾದ ಕಥೆಗಳನ್ನು ಬರೆಯಬಹುದು ಎಂಬುದನ್ನು ಈ ಕಥೆಗಳು ಸಾಬೀತುಮಾಡಿವೆ. ಮೌಖಿಕ ಕಾವ್ಯಗಳು ಪ್ರೇಮ, ಯುದ್ಧಕ್ಕಿಂತ ಭಿನ್ನವಾದ ಮಾನವೀಯ ಮೌಲ್ಯಗಳನ್ನು, ಸಾಮಾಜಿಕ ತಿಳುವಳಿಕೆಯನ್ನು ಪ್ರಕಟಿಸುತ್ತವೆಂಬುದನ್ನು ಮನಗಂಡರೆ ಅವುಗಳಿಂದ ಹೆಚ್ಚಿನ ಪ್ರೇರಣೆ ಪಡೆಯಬಹುದು. ಜನಪದ ಪುರಾಣದ ಸ್ಪರ್ಶವಿಲ್ಲದಿದ್ದರೆ ಅದು ಒಂದು ಉತ್ತಮ ಕೃತಿಯಾಗಲಾರದು ಎಂಬುದೂ ಇದರಿಂದ ನನಗೆ ಮನದಟ್ಟಾಯಿತು. ಇವುಗಳು ಪ್ರತಿಪಾದಿಸುವ ಕೋಮು ಸೌಹಾರ್ದತೆ, ಸಮಾನತೆ, ವಿಶ್ವಾತ್ಮಕ ಮೌಲ್ಯ, ಪ್ರಭುತ್ವದ ವಿರೋಧಿ ನೆಲೆಗಳನ್ನು ನೋಡಿದರೆ ಇವು ನಿಜವಾಗಿಯೂ 'ಸಮುದಾಯಗಳ ಮಹಾಕಥನಗಳು' ಎನ್ನಬಹುದಾಗಿದೆ.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಕಥೆ, ಕಾದಂಬರಿ, ಕವಿತೆಗಳು ಜಾನಪದೀಯ ಕಥನಕಾವ್ಯಗಳಿಂದ ಪ್ರಭಾವಿತವಾಗಿರುವುದು ನಿಜ. ಜೋಕುಮಾರಸ್ವಾಮಿ, ಕೊಟ್ಟ, ತೆಂಬರೆ, ಬಾರೋ ಗೀಜಗನೆ, ಹವನ, ಮಾಪುರ ತಾಯಿಯ ಮಕ್ಕಳು, ಹಸಿಮಾಂಸ ಮತ್ತು ಹದ್ದುಗಳು, ಗೆಂಡಗಯ್ಯ, ಧುಮ್ಮಸು, ತೇರು, ಅಲ್ಲೆ ಕುಂತವರೆ, ಬಕಾಲ, ದಕ್ಲ ಕಥಾದೇವಿ, ಅರಮನೆ

**ಪ್ರೊ॥ ಕರೀಗೌಡ ಬೀಚನಹಳ್ಳಿ**

– ಹೀಗೆ ಅನೇಕ ಆಧುನಿಕ ಕೃತಿಗಳು ಜನಪದ ಕಾವ್ಯಗಳ ಭಾಷೆ, ನಿರೂಪಣೆ, ತಂತ್ರ, ರೂಪಕಗಳು, ಮಾನವೀಯತೆ, ಹೆಣ್ಣುಗಂಡಿನ ಸಂಬಂಧ ಮುಂತಾದ – ಜಾನಪದೀಯ ಪರಿಕರಗಳನ್ನು ಬಳಸಿಕೊಂಡಿವೆ. ದೇವನೂರ ಮಹಾದೇವ ಅವರ 'ಕುಸುಮಬಾಲೆ' ಕಾದಂಬರಿಯ ಲಯ, ನಿರೂಪಣಾ ವಿನ್ಯಾಸ, ಇವೆಲ್ಲಾ 'ಮಲೆಮಾದೇಶ್ವರ' ಕಾವ್ಯದಿಂದ ಪಡೆದ 'ಕಡ'ಗಳಾಗಿವೆ; ಮಹಾದೇವರು ತಮ್ಮ ಈ ಕಾದಂಬರಿಯನ್ನು 'ಮಾದಾರ ಮಲೆಮಾದೇಶ್ವರ'ನಿಗೇ ಅರ್ಪಿಸಿದ್ದಾರೆ. ಸಿದ್ಧಲಿಂಗಯ್ಯನವರ 'ಅಲ್ಲೆ ಕುಂತವರೆ' ಕಥನ ಕಾವ್ಯದಲ್ಲಿನ ಭಾಷಾಸ್ತರ, ಪ್ರತೀಕಗಳು – ಇವೆಲ್ಲಾ 'ಮಲೆಮಾದೇಶ್ವರ', 'ಮಂಟೇಸ್ವಾಮಿ' ಕಾವ್ಯಗಳಿಂದ ಪಡೆದ 'ಕಡ'ಗಳಾಗಿವೆ.

ಪ್ರತಿಯೊಂದು ಜನಾಂಗಕ್ಕೂ, ಸಮುದಾಯಕ್ಕೂ ತನ್ನದೇ ಆದ ಸಾಂಸ್ಕೃತಿಕ ಅಸ್ಮಿತೆ ಇರುತ್ತದೆ; ಸ್ಥಳೀಯ ಸಂಸ್ಕೃತಿಯಲ್ಲಿರುವ ಅದಮ್ಯವಾದ ವಿಶ್ವಾತ್ಮಕ ಮೌಲ್ಯಗಳಿರುತ್ತವೆ. ಇವುಗಳನ್ನು ಜನಪದ / ಬುಡಕಟ್ಟು ಮೌಖಿಕ ಕಾವ್ಯಗಳಲ್ಲಿ ವಿಶೇಷವಾಗಿ ಕಾಣಬಹುದಾಗಿದೆ. ಈ ಕಥನಗಳು ಸಮುದಾಯಗಳ ಬದುಕಿನ ಸುಖದುಃಖಗಳ ರಾಗವಿರಾಗಗಳ, ಸಾಂಸ್ಕೃತಿಕ ಕಥನಗಳ ನಿರೂಪಣೆಗಳಾಗಿವೆ. ಜನಪದ ಮಹಾಕಾವ್ಯ, ಬುಡಕಟ್ಟು ಕಾವ್ಯ ಎಂಬ ವಿಂಗಡಣೆಯ ಬಗ್ಗೆ ವಿದ್ವಾಂಸರಲ್ಲಿ ಚರ್ಚೆಯೂ ಇದೆ. ಒಟ್ಟಾರೆ ಅವೆರಡರಲ್ಲೂ ಸಾಮಾನ್ಯವಾದ ಅಂಶವೆಂದರೆ ಅವುಗಳಲ್ಲಿರುವ ಮೌಖಿಕತೆ ಮತ್ತು ಬಹುತ್ವ.

ಸಿದ್ಧಲಿಂಗಯ್ಯನವರ 'ಅಲ್ಲೆ ಕುಂತವರೆ' ಕಥನ ಕಾವ್ಯದ ಈ ಸಾಲುಗಳನ್ನು ನೋಡಿ :

*ಅಲ್ಲೆ ಕುಂತವರೆ ಅವರು*
*ಅಲ್ಲೆ ಕುಂತವರೆ*
*ಬೇವಿನ ಸೊಪ್ಪು ಹಾಸವರೆ*
*ಹಳೆಕ್ಯರವ ಕಾಯಸವರೆ*
*ಮೈಯ್ಯಿಗೆ ಬರೆಯ ಎಳೆಯೋರು*
*ಸೈಜುಕಲ್ಲು ಹೊರಸೋರು*
*ಹುಣಸೆ ಮರಕೆ ಕಟ್ಟೋರು*
*ನಿಂಬೆಹಣ್ಣ ಮಡಗವರೆ*
*ಬಸುರಿ ಕಯ್ಯ ಮಡಗವರೆ*
*ಮೂಳೇ ಜೋಳಿಗೆ ಹಾಕವರೆ*
*ದೊಡ್ಡ ಮನುಷ್ಯರ ಹಿಂದವರೆ*
*ಅಲ್ಲೆ ಕುಂತವರೆ ಅವರು*
*ಅಲ್ಲೆ ಕುಂತವರೆ*

✶ ✶ ✶

*ಅವ್ರು ಕತ್ತೀ ತ್ವಾಟಕೆ ಹೋದಾರು*
*ಅಲ್ಲಿ ಚಿನ್ನದ ಕತ್ತಿ ತಂದಾರು*
*ಬಾಕಿನ ತ್ವಾಟಕೆ ಹೋದಾರು*
*ಬೆಳ್ಳಿ ಬಾಕ ತಂದಾರು*
*ಸೀಮೆಎಣ್ಣೆ ಬಾವಿಗಾಳು ಅಲ್ಲಿ*
*ಬಂದೂಕ ಬೆಳೆದವರೆ*
*ದತ್ತೂರಿ ಗಿಡಗಳು ಅಲ್ಲಿ*
*ಮದ್ದುಗುಂಡು ಉದುರುತಾವ*

✶ ✶ ✶




ಹಾಗೇನಿಲ್ಲ, ನಾವು ರಾಜಕಾರಣಿಗಳು ನಿತ್ಯ ಕೊಡುವ ಅಸಂಬದ್ಧ ಹೇಳಿಕೆಗಳನ್ನೇ ನಮ್ಮ ಓದುಗರಿಗೆ 'ಹಾಸ್ಯ'ವಾಗಿ ಕೊಡುತ್ತಿದ್ದೇವಲ್ಲ !

'ಮಲೆಮಾದೇಶ್ವರ ಕಾವ್ಯ'ದಲ್ಲಿ ಒಂದು ಸಂದರ್ಭ ಹೀಗಿದೆ :

*ಅವರು ತಂದೆ ತಾಯಿ ಕರೆದವರೆ*
*ಬಂಧುಬಳಗ ಕರೆದವರೆ*
*ಅಣ್ಣಾ ತಮ್ಮಾರ ಕರೆದವರೆ*
*ಅಕ್ಕಾತಂಗೇರ ಕರೆದವರೆ*
*ಕುಲದವರ್ನೆಲ್ಲಾ ಕೂಡ್ಯವರೆ*
*ಜಾತಿಯವರ್ನೆಲ್ಲಾ ಸೇರ್ಸವರೆ*
*ನ್ಯಾಯ ಪಂಚಾಯ್ತಿ ಮಾಡ್ಯವರೆ*
*ನೀಲಯ್ಯನಾದರೆ ಕರೆದವರೆ*
*ಕರೆದು ಬುದ್ಧಿ ಹೇಳವರೆ*
*ಅಯ್ಯಾ ಬರತಕ್ಕ ಭಾಗ ಕೇಳವ್ನೆ*
*ಬೇರೆ ಮನೆಯ ಮಾಡವ್ನೆ*

'ಮಲೆಮಾದೇಶ್ವರ ಕಾವ್ಯ'ದಲ್ಲಿನ ಈ ಲಯ, ರೂಪಕ, ನಿರೂಪಣೆಗಳನ್ನು ಸಿದ್ಧಲಿಂಗಯ್ಯನವರು ತಮ್ಮ ಈ 'ಅಲ್ಲೆ ಕುಂತವರೆ' ಕಥನ ಕಾವ್ಯದ ಉದ್ದಕ್ಕೂ ಬಳಸಿಕೊಂಡು ಅದು ಒಂದು ಉತ್ತಮವಾದ ಆಧುನಿಕ ಕಥನ ಪುರಾಣವನ್ನಾಗಿ ಮಾಡಿದ್ದಾರೆ. ದೇವನೂರ ಮಹಾದೇವ ಅವರು ತಮ್ಮ 'ಕುಸುಮಬಾಲೆ' ಕಥನ ಕಾದಂಬರಿಯಲ್ಲಿ ಕೂಡ ಉದ್ದಕ್ಕೂ 'ಮಲೆಮಾದೇಶ್ವರ ಕಾವ್ಯದ' ಭಾಷಾ ಲಯದ ವಿವಿಧ ಸ್ತರವನ್ನು ಬಳಸಿಕೊಂಡಿರುವುದನ್ನು ಕಾಣುತ್ತೇವೆ. ಉದಾಹರಣೆಗಾಗಿ ಕೊನೆಯ 'ಉಪಸಂಹಾರ'ದಲ್ಲಿ ಕುಸುಮಳ ಗಂಡ ಚನ್ನನ ಕೊಲೆಯನ್ನು ಜನಪದ ಕಥನದ ನಿರೂಪಣೆಯ ನೆಲೆಯಲ್ಲಿಯೇ ಗ್ರಹಿಸಿರುವುದನ್ನು ಇಲ್ಲಿ ಕಾಣಬಹುದಾಗಿದೆ :

*ಆ ಸೊಪ್ಪುಸೊದ್ದ ಮಾರ್ತ ಈ ಹೊಟ್ಟೆಯಾಪ್ತಿಗೆ*
*ಮಾಡ್ವಂಥಾ*
*ಆ ತೋರಾರ ಹಣ್ಣಣ್ಣುಮುದುಕೀ ಅವಳ*
*ಹೆಸರೋ ಸಿಂಗಾರಮ್ಮಾ*
*ಆ ಏಳಾದೇ ಕುಳಿತಿಹಳೂ ಚನ್ನ ಕುಸುಮಾರು*
*ಕೂಡುವ ತಳ ಆದುವು*
*ಆ ಸಿಂಗಾರಮ್ಮನ ಕಣ್ಮುಂದಾದುದು ಅವುಳ*
*ಕಣ್ಮುಂದ ಇದೆಯಲ್ಲಾ*
*ಆ ಅಲ್ಲಿ ಚನ್ನಾನ ಉಸೂರನ್ನು ಅವುನ*
*ದೇಹದಿಂದಲಿ ತಗುದರಲ್ಲಾ*
*ಆ ರಾತ್ರ ತಗೂದ ಬಾಗಲೂವು ಆ ತಗುದಂತಲೇ*
*ಇದೆಯಲ್ಲಾ*

✶ ✶ ✶

ಶಿಷ್ಟಮಹಾಕಾವ್ಯಗಳ ಒಂದು ಮುಖ್ಯ ಗುಣವೆಂದರೆ ಅವುಗಳ ಸಾರ್ವಕಾಲಿಕತೆ, ಸಾಂಸ್ಕೃತಿಕ ನಾಯಕ ಮತ್ತು ಅದು ಪ್ರತಿಪಾದಿಸುವಂತಹ ಸಾಂಪ್ರದಾಯಕ ಮೌಲ್ಯಗಳು. ಜನಪದ ಅಥವಾ ಬುಡಕಟ್ಟು ಮಹಾಕಾವ್ಯ ಗಳಲ್ಲಿಯೂ ಈ ಸಾರ್ವಕಾಲಿಕವಾದ ಮೌಲ್ಯಗಳ ಪ್ರತಿಪಾದನೆ ಇದೆ. ಇದು ತುಂಬ ಪ್ರಾಚೀನವಾದ ಇತಿಹಾಸವನ್ನು, ಪರಂಪರೆಯನ್ನು, ನಾಗರಿಕತೆಯ ಬೆಳವಣಿಗೆಯನ್ನು, ಪದ್ಧತಿ, ಆಚರಣೆ ಗಳನ್ನು ಹೊಂದಿರುವ ಸಾಹಿತ್ಯ. ಕುರುಬ, ಬೇಡ, ಗೊಲ್ಲ – ಇವು ತುಂಬ ಪ್ರಾಚೀನವಾದ ಬುಡಕಟ್ಟು ಗಳಿರಬೇಕು. ಕುರುಬರ ಬೀರಪ್ಪ /ಮಾಳಿಂಗರಾಯ, ಬೇಡರ ಕುಮಾರರಾಮ, ಗೊಲ್ಲರ ಜುಂಜಪ್ಪ ಇವರೆಲ್ಲಾ ಆಯಾಯ ಸಮುದಾಯಗಳ ಸಾಂಸ್ಕೃತಿಕ ವೀರರು; ಹಾಗೆಯೇ 'ಮಲೆಮಾದೇಶ್ವರ' ಕಾವ್ಯದ ಮಾದಪ್ಪ, 'ಮಂಟೇಸ್ವಾಮಿ' ಕಾವ್ಯದ ಮಂಟೇಸ್ವಾಮಿ ಕೂಡ ಐತಿಹಾಸಿಕ ಸಾಂಸ್ಕೃತಿಕ ವೀರರು. ಬೇಟೆ, ಪಶುಪಾಲನೆ, ಜೇನು ಬೇಟೆ, ಕೃಷಿ /ಹೈನುಗಾರಿಕೆ ಹಂತದ ಸಮಾಜ ಇವರದು. ಕುರುಬರು 'ಕುರಿಗಾಯಿ'ಗಳಾದರೆ, ಬೇಡರು 'ಬೇಟೆಗಾರ'ರಾಗಿ, ಗೊಲ್ಲರು 'ಪಶುಗಾಯಿ'ಗಳಾಗಿ ಕಾಣಿಸಿಕೊಳ್ಳುತ್ತಾರೆ. 'ಮಲೆಮಾದೇಶ್ವರ' ಫಲವಂತಿಕೆಯ ಕಾವ್ಯ; 'ಮಂಟೇಸ್ವಾಮಿ' ಕಬ್ಬಿಣದ ಉತ್ಪನ್ನ ಕಾವ್ಯ. ಆದರೆ ಕುರುಬ, ಗೊಲ್ಲ ಮತ್ತು ಬೇಡ ಈ ಮೂರೂ ಸಮುದಾಯಗಳಲ್ಲಿರುವ ಸಾಮ್ಯತೆ ಮತ್ತು ವ್ಯತ್ಯಾಸ ಗಳನ್ನು ಗಮನಿಸಿದರೆ ಈ ಸಮುದಾಯಗಳನ್ನು ಗೆರೆ ಎಳೆದ ಹಾಗೆ ಇವುಗಳನ್ನು ಬೇರ್ಪಡಿಸುವುದು ಕಷ್ಟ. ಇವರಿಗೆಲ್ಲಾ ಇವರಿವರ ಸಾಂಸ್ಕೃತಿಕ ವೀರರ ಮಹಾಕಾವ್ಯಗಳೂ ಇವೆ.

ಪ್ರಾಚೀನ ಬುಡಕಟ್ಟು ಸಮಾಜಗಳು ತಮ್ಮ ಕುಲದೇವತಾ ಆರಾಧನೆಯನ್ನು ತಮ್ಮೊಳಗೆ ಇಟ್ಟು ಕೊಂಡಿವೆ. ಪ್ರಾಣಿ, ವೃಕ್ಷ /ಸಸ್ಯಗಳಿಂದ ಬಂದಿರುವ ಕುಲದೇವತಾ ಹೆಸರುಗಳನ್ನು ಪ್ರಪಂಚದಲ್ಲಿ ಇನ್ನೂ ಅನೇಕ ಬುಡಕಟ್ಟು ಸಮಾಜಗಳು ಉಳಿಸಿಕೊಂಡಿರು ವುದನ್ನು ಕಾಣಬಹುದು. ಕೆಲವು ಬುಡಕಟ್ಟುಗಳಲ್ಲಿ ಮೊಲ, ಕರಡಿ, ತೋಳ, ಹಲ್ಲಿ, ಆಮೆ, ಜಿಂಕೆ, ಕೊಕ್ಕರೆ, ನವಿಲು, ಹದ್ದು, ಗೂಬೆ, ಕಾಗೆ, ಹುಲಿ ಮುಂತಾದ ಪ್ರಾಣಿ, ಪಕ್ಷಿಗಳ ಹೆಸರಿನಲ್ಲಿ ತಂತಮ್ಮ ಕುಲಗಳನ್ನು ಹೊಂದಿರುವುದನ್ನು ಈಗಲೂ ಕಾಣುತ್ತೇವೆ. ಇದು ಭಾರತದಲ್ಲಿ ಮಾತ್ರವಲ್ಲದೆ, ಅಮೆರಿಕಾ, ಆಸ್ಟ್ರೇಲಿಯಾ, ಆಫ್ರಿಕಾ, ಭಾರತದ ಬುಡಕಟ್ಟು ಸಮಾಜಗಳಲ್ಲೂ ಕಾಣಿಸುತ್ತದೆ.

ಬುಡಕಟ್ಟುಗಳಲ್ಲಿ ಎಷ್ಟೇ ಪಂಗಡಗಳು, ಉಪ ಪಂಗಡಗಳಿದ್ದರೂ ಅವು ಒಂದೊಂದೂ ಒಂದೊಂದು 'ಗುರುತಿನ ಲಾಂಛನ'ವನ್ನು ಇಟ್ಟುಕೊಂಡಿರುತ್ತವೆ. ಆ 'ಲಾಂಛನ' ಪ್ರಾಣಿ/ಸಸ್ಯ/ವೃಕ್ಷಗಳ ಹೆಸರಿನ ಜೊತೆ ಪರಿಸರದ ಸಂಬಂಧವನ್ನಿಟ್ಟುಕೊಂಡಿರುತ್ತದೆ ಮತ್ತು ಅವುಗಳ ನಡುವೆ ಕೆಲವು ಕಟ್ಟುಪಾಡು, ನಿಷಿದ್ಧಗಳ ಪರಿಪಾಲನೆಯೂ ಇರುತ್ತದೆ. ಇದನ್ನು ಅವರು 'ಬಳಿಗಳು' (Totem) ಎಂದೂ ಕರೆಯುತ್ತಾರೆ.

ಇಂತಹ ಪಂಗಡಗಳ ನಡುವೆ ಕೊಡುಬಿಡುವ ವಿವಾಹ ವ್ಯವಹಾರಗಳು ಹಾಗೂ ಪದ್ಧತಿಗಳು ನಡೆಯುವ ಹಾಗಿಲ್ಲ. ಈ ಕುಲದೇವತಾ ಪದ್ಧತಿಯ ಪಳೆಯುಳಿಕೆ ಬುಡಕಟ್ಟುಗಳಲ್ಲಿ ಒಂದು ಪ್ರಮುಖ ಲಕ್ಷಣವಾಗಿರುತ್ತದೆ. ಪ್ರಾಣಿಗಳ ಹೆಸರುಗಳಲ್ಲಿ ಸಾಂಕೇತಿಕವಾಗಿ ಈ ಕುಲದೇವತಾ ಪದ್ಧತಿಯ ಪಳೆಯುಳಿಕೆಗಳು ಋಗ್ವೇದದಲ್ಲಿಯೂ ಕಂಡುಬರುತ್ತವೆ ಎಂದು ವಿದ್ವಾಂಸರು ಹೇಳುತ್ತಾರೆ. ಪುರಾತನವಾದ ಈ ಸಂಸ್ಕೃತಿಯ ಉಳಿಕೆಗಳು ವೈದಿಕ ಸಾಹಿತ್ಯದಲ್ಲೂ ನಂತರ ಉಳಿದುಕೊಂಡಿರಬಹುದು.

ಬುಡಕಟ್ಟು ರಚನೆಯು ಸಮಾನತೆ ಹಾಗೂ ಸೋದರತೆಯಿಂದ ಕೂಡಿರುತ್ತದೆ; ಅಲ್ಲಿ ಸ್ತ್ರೀ ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಸ್ಥಾನವಿದೆ. ಕ್ರಿ. ಪೂ. ೭ – ೬ನೇ ಶತಮಾನ ದಲ್ಲಿಯೇ ಭಾರತದಲ್ಲಿದ್ದ 'ಗಣ', 'ಸಂಘಗಳು' ಬುಡಕಟ್ಟು ಸಮುದಾಯದಿಂದ ಹೊರಬಂದು ಪ್ರಭುತ್ವಗಳನ್ನು ಸ್ಥಾಪಿಸಿಕೊಂಡವೆಂದು, ನಂತರ ಈ 'ಗಣಗಳು' ಒಡೆದು ನಂತರ ಅವುಗಳ ಅವಶೇಷಗಳ ಮೇಲೆ ರಾಜ್ಯಗಳು ಉದಯ ವಾದವೆಂದು, ಕೆಲವು ರಾಜ್ಯಗಳನ್ನು ಬುಡಕಟ್ಟುಗಳು ಆವರಿಸಿದ್ದವೆಂದು ಅಥವಾ ಅವು ರಾಜ್ಯದ ಅಧೀನದಲ್ಲಿದ್ದವೆಂದು ಮಾನವಶಾಸ್ತ್ರಜ್ಞರು ಊಹೆ ಮಾಡುತ್ತಾರೆ.

ಈ ಬುಡಕಟ್ಟುಗಳನ್ನು ಒಡೆದು ಪ್ರಭುತ್ವವು ಅವರನ್ನು ತನ್ನ ಅಡಿಯಾಳುಗಳನ್ನಾಗಿ ಮಾಡಿ ಕೊಂಡಿವೆಯೆಂಬುದಕ್ಕೆ ಬುಡಕಟ್ಟು ಕಾವ್ಯಗಳಲ್ಲಿ ಸಿಗುವ ಪಳೆಯುಳಿಕೆಯ ಆಕರಗಳೇ ಸಾಕ್ಷಿಯಾಗಿವೆ. ಬುಡಕಟ್ಟು ಜನರ ಜೀವನದ ಪರಂಪರೆಯಲ್ಲಿ ಮಾತೃ ಆರಾಧನೆ ಬಹು ಮುಖ್ಯವಾದ ಇನ್ನೊಂದು ಲಕ್ಷಣವಾಗಿದೆ. ಸಾಮಾಜಿಕವಾಗಿ ಮಹಿಳೆಯ ಔನ್ನತ್ಯಕ್ಕೆ ಇದು ಸಾಕ್ಷಿಯಾಗಿದೆ. ಕೃಷಿಯು ಆವಿಷ್ಕಾರ ವಾದದ್ದೇ ಬುಡಕಟ್ಟು ಮಹಿಳೆಯಿಂದ; ಮೊದಲ ಹಂತದಲ್ಲಿ ಮಹಿಳೆ ಕೃಷಿಯಲ್ಲಿಯೇ ತಲ್ಲೀನ ಳಾಗಿದ್ದಳು. ಇದು ಅವರ ಆರ್ಥಿಕ ಹಾಗೂ ಸಾಮಾಜಿಕ ಸ್ಥಾನವನ್ನು ಉನ್ನತಕ್ಕೇರಿಸಿತು. ಆದರೆ ವೈದಿಕರಲ್ಲಿ ಕೃಷಿಗೆ ಬದಲಾಗಿ ಪಶುಸಂಗೋಪನಾ ಆರ್ಥಿಕತೆ ಇದ್ದದ್ದು ಕಾಣಿಸುತ್ತದೆ. ಕೃಷಿ ಆಧಾರಿತ ದೇವತೆಗಳಲ್ಲಿ ಸ್ತ್ರೀ ದೇವತೆಗಳೇ ಹೆಚ್ಚು. ಉದಾಹರಣೆಗೆ : ಗಂಗೆ, ಗೌರಿ, ಗ್ರಾಮದೇವತೆಗಳು ಇತ್ಯಾದಿ.

ಬುಡಕಟ್ಟುಗಳ ಆರ್ಥಿಕತೆಯ ಹಂತದಲ್ಲಿ ಬೇಟೆ, ಕೃಷಿ, ಪಶುಸಂಗೋಪನೆ ಕಂಡುಬರುತ್ತವೆ. ಮೊದಲ ಹಂತದಲ್ಲಿ ಆಹಾರ ಸಂಗ್ರಹಣೆ, ಬೇಟೆ ಮುಖ್ಯ. ನಂತರ ಬೇಟೆ ಮತ್ತು ಮೀನುಗಾರಿಕೆ, ನಂತರ ಎರಡನೆಯ ಹಂತದಲ್ಲಿ ಪಶುಪಾಲನೆ ಮತ್ತು ಕೃಷಿ, ಮೂರನೆಯ ಹಂತದಲ್ಲಿ ಗುದ್ದಲಿ ಬದಲು ನೇಗಿಲು, ಕೃಷಿ ಮತ್ತು ಪಶುಸಂಗೋಪನೆ ಎರಡೂ ಒಟ್ಟೊಟ್ಟಿಗೇ ಬೆಳೆದು ಬಂದಿವೆ; ಪ್ರಾಚೀನ ಬುಡಕಟ್ಟು ಸಮಾಜಗಳು ಹೀಗೆ ಬೇಟೆ, ಪ್ರಾಣಿ, ಸಸ್ಯ, ಆಹಾರ ಸಂಗ್ರಹಣೆ, ಪಶುಪಾಲನೆ, ವ್ಯವಸಾಯ ಇವುಗಳನ್ನು ಆಶ್ರಯಿಸಿ ತಮ್ಮ ಬದುಕನ್ನು ಕಟ್ಟಿಕೊಂಡಿವೆ.

ಆಹಾರ ಸಂಗ್ರಹಣೆ ಮುಖ್ಯವಾಗಿ ಮಹಿಳೆಯ ಕೆಲಸವಾಗಿದ್ದರಿಂದ ಆಕೆ ಕೃಷಿಯ ಬಗ್ಗೆ ಹೊಸ ಹೊಸ ಆವಿಷ್ಕಾರಗಳನ್ನು ಮಾಡಬೇಕಾಗಿತ್ತು. ಎತ್ತುಗಳನ್ನು ಹೂಡಿ ಉಳುವ ನೇಗಿಲು ಬರುವ ತನಕ ಕೃಷಿ ಮಹಿಳೆಯ ಕೈಗುದ್ದಲಿಯಿಂದಲೇ ನಡೆಯುತ್ತಿದ್ದದ್ದಕ್ಕೆ ಉಲ್ಲೇಖಗಳು ಇವೆ. ಈ ಕೈಗುದ್ದಲಿ ಸಹ ಹಳೆಯ ಶಿಲಾಯುಗದ ಅನ್ವೇಷಣೆಯಾಗಿತ್ತು. ಕೋಲನ್ನು ಕೆತ್ತಿ ಚೂಪಾಗಿ ಮಾಡಿ ಅದರಿಂದ ಮಹಿಳೆಯರು ಆಹಾರಕ್ಕಾಗಿ ಗೆಡ್ಡೆಗೆಣಸುಗಳನ್ನು ತೆಗೆಯುತ್ತಿದ್ದರು. ಆಯುಧ ಅವರಿಗೆ ತಮ್ಮ ಆಹಾರದ ಸಂಗ್ರಹಣೆಯ ಭಾಗವಾಗಿತ್ತು. ಆಹಾರ ಸಂಗ್ರಹಿಸಲು ಬೇಟೆಗಾರಿಕೆಯಿಂದ ಕೃಷಿಯ ಕಡೆಗೆ ಹೊರಳಿದಾಗ ಮಹಿಳೆಯರ ಸಾಮಾಜಿಕ ಸ್ಥಾನಮಾನಗಳಲ್ಲೂ ಪಲ್ಲಟವಾಗುತ್ತದೆ. ಪಿತೃಸಂತಾನದ ವಾರಸುದಾರಿಕೆ ಬೇಟೆಗಾರಿಕೆಯ ಹಂತದಲ್ಲಿದ್ದದ್ದು ಕೃಷಿಯ ಆವಿಷ್ಕಾರದೊಡನೆ ಮಾತೃಸಂತಾನದ ಯಜಮಾನಿಕೆಗೆ ಸ್ಥಿತ್ಯಂತರಗೊಂಡಿತು. ಬುಡಕಟ್ಟು ಮಹಿಳೆಯು ಕೃಷಿಯ ಆವಿಷ್ಕಾರ ಮಾಡಿದ ಗೌರವಕ್ಕೆ ಪಾತ್ರಳಾಗಿದ್ದಾಳೆ. ಆಸ್ಟ್ರೇಲಿಯಾ ಮತ್ತು ಈಜಿಪ್ಟ್‌ನ ನೈಲ್ ನದಿಯ ದಂಡೆಯಲ್ಲಿರುವ ಬುಡಕಟ್ಟು ಮಹಿಳೆಯರಲ್ಲಿ ಈ ಅಗೆಯುವ ಪದ್ಧತಿ ಇಂದಿಗೂ ಇದೆ ಎಂದು ವಿದ್ವಾಂಸರು ಹೇಳುತ್ತಾರೆ.

ಬಿಹಾರದಲ್ಲಿ ಮೌರ್ಯ ಸಾಮ್ರಾಜ್ಯ ಉದಯವಾಗುವ ಹೊತ್ತಿನಲ್ಲಿ 'ವಜ್ಜಿಗಳು' ಎಂಬ ಬುಡಕಟ್ಟು ಜನಾಂಗವಿತ್ತೆಂದು ವಿದ್ವಾಂಸರು ಊಹಿಸುತ್ತಾರೆ. ಚಂದ್ರಗುಪ್ತ (ಚಂದ್ರಗುತ್ತ), ಮೌರ್ಯ (ಮೋರಿಯಾ ಬುಡಕಟ್ಟು) 'ಮೋರ' ಅಂದರೆ ನವಿಲು, (ಇದು ಕುಲದೇವತಾ ಪದ್ಧತಿಯಲ್ಲಿ ಪಕ್ಷಿ ಲಾಂಛನ ಎಂದು ತಿಳಿದಿದ್ದೇವೆ) ಈ ಮೋರಿಯರು ಸಹ ಮೂಲತಃ ಶಾಕ್ಯ ಬುಡಕಟ್ಟಿಗೆ ಸೇರಿದ ಜನಾಂಗ. ಇಲ್ಲಿ ಆಕ್ರಮಣ ನಡೆದಾಗ ಈ ಮೋರಿಯಾ ಜನಾಂಗ ಉತ್ತರದ ಹಿಮಾಲಯದ ಘಟ್ಟಗಳಿಗೆ ಹೋಗಿರಬೇಕೆಂದು, ನಂತರ ಬುದ್ಧನ ಕಾಲಕ್ಕೂ ಈ ಮೋರಿಯಾ ಬುಡಕಟ್ಟು ಇತ್ತೆಂದು, ಬುದ್ಧ ಕೂಡ 'ಗೋತಮ' ಗೋತ್ರದವನೆಂದು, ಬುಡಕಟ್ಟುಗಳು ಚೆದುರಿದ ಮೇಲೆ ಬುಡಕಟ್ಟಿನಿಂದ ಪ್ರಭುತ್ವದ ವ್ಯವಸ್ಥೆಗೆ ಸ್ಥಿತ್ಯಂತರವಾದ ಬದಲಾವಣೆ ಚರಿತ್ರೆಯಲ್ಲಿ ಒಂದು ಪ್ರಮುಖ ಹೆಜ್ಜೆಯೆಂದು, ಆಗತಾನೆ ಬುದ್ಧನ ಕಾಲದಲ್ಲಿ ರಾಜ್ಯವ್ಯವಸ್ಥೆ ಅಸ್ತಿತ್ವಕ್ಕೆ ಬರುತ್ತಿತ್ತೆಂದು ಇತಿಹಾಸಕಾರ ಬಿಪಿನ್ ಚಂದ್ರ ಅವರು ಹೇಳುತ್ತಾರೆ.

ಕೃಷಿ ಪ್ರಧಾನವಾಗುವ ಹೊತ್ತಿಗೆ ಕುರುಬರು, ಗೊಲ್ಲರು ಮತ್ತು ಬೇಡರು ಈ ಮೂರೂ ಸಮುದಾಯಗಳು ಹೇಗೆ ಬೆರೆತುಹೋಗುತ್ತವೆ ಎಂಬುದನ್ನು ಈ ಬುಡಕಟ್ಟು ಮೌಖಿಕ ಕಾವ್ಯಗಳು ಸಹ ಸೂಕ್ಷ್ಮವಾಗಿ ತೋರಿಸಿಕೊಡುತ್ತವೆ. ಆದರೆ ಈಗ ಸಂಗ್ರಹವಾಗಿ ಪ್ರಕಟವಾಗಿರುವ ಈ ಮೌಖಿಕ ಬುಡಕಟ್ಟು / ಜನಪದ ಕಾವ್ಯ / ಕಥನಗಳನ್ನು ಸೂಕ್ಷ್ಮವಾದ ಚಾರಿತ್ರಿಕ ಹಾಗೂ ಸಾಂಸ್ಕೃತಿಕವಾದ ಅಧ್ಯಯನಕ್ಕೆ ಒಳಪಡಿಸಬೇಕಾಗಿದೆ. ಆಚರಣೆ, ಪ್ರದರ್ಶನ ಮತ್ತು ವಿಶಿಷ್ಟ ಕನ್ನಡ ಭಾಷಾಸ್ತರದ ಮೇಲೆ ನಿಂತಿರುವ ಈ ಮೌಖಿಕ ಕಾವ್ಯಗಳು ಆಧುನಿಕ ಕನ್ನಡ ಸಾಹಿತ್ಯದ ಮೇಲೆ ಬೀರಿರುವ ಪ್ರಭಾವ, ಪ್ರೇರಣೆಗಳನ್ನು ಸಾಹಿತ್ಯಕವಾಗಿ, ಭಾಷಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಮರು ಓದಿಗೆ, ಮರುಮೌಲ್ಯ ಮಾಪನಕ್ಕೆ ಒಳಪಡಿಸಬೇಕಾದ ಸಂದರ್ಭ ಕೂಡ ಇದೆ.

ಕನ್ನಡದ ಮೌಖಿಕ ಕಾವ್ಯಗಳನ್ನು ಸೂಕ್ಷ್ಮವಾದ ಅಧ್ಯಯನಕ್ಕೆ ಒಳಪಡಿಸಿದರೆ ಈ ಎಲ್ಲಾ ಸೂಕ್ಷ್ಮವಾದ ಪಳೆಯುಳಿಕೆಗಳು ಕಾಣಿಸಿಕೊಳ್ಳುತ್ತವೆ. ಹಾಗಾಗಿ ಈ ಮೌಖಿಕ ಕಾವ್ಯಗಳು ಪಳೆಯುಳಿಕೆಗಳ ಮತ್ತು ಜೀವಂತ ಸಮಾಜದ ಸಾಂಸ್ಕೃತಿಕ ತಿಳುವಳಿಕೆಯ ಸಾವಯವ ಪ್ರತೀಕಗಳಾಗಿವೆ ಎನ್ನಬಹುದಾಗಿದೆ. ಆಧುನಿಕ ಕನ್ನಡದ ಲೇಖಕರು ಮೌಖಿಕ ಕಾವ್ಯಗಳನ್ನು ಓದಿ ಅವುಗಳಿಂದ ಪಡೆಯಬೇಕಾದ ಪ್ರೇರಣೆ ಇಂದು ಅತ್ಯವಶ್ಯಕವಾಗಿದೆ.

**ಪ್ರೊ॥ ಕರೀಗೌಡ ಬೀಚನಹಳ್ಳಿ**
ನಿವೃತ್ತ ಪ್ರಾಧ್ಯಾಪಕ, ನಂ. ೧೧೦೪, 'ಪ್ರಕೃತಿ', ೩ನೇ ಮುಖ್ಯರಸ್ತೆ, ೪ನೇ ಅಡ್ಡರಸ್ತೆ, ಎಂ.ಪಿ.ಎಂ. ಬಡಾವಣೆ, ಮಲ್ಲತ್ತಹಳ್ಳಿ, ಬೆಂಗಳೂರು – ೫೬೦ ೦೫೬



# ರೋಹಿಣೀ ಶಕಟ ಭೇದ – ಪ್ರಾತ್ಯಕ್ಷಿಕೆ




ಕಳೆದ ತಿಂಗಳು ಮುಂಜಾನೆಯ ಆಕಾಶದಿಂದ ಮಾಯವಾಗಿದ್ದ ಶುಕ್ರ ಈಗ ಸಂಜೆಯಲ್ಲಿ ಕಾಣ ತೊಡಗಿದೆ. ಅದು ದಿನೇ ದಿನೇ ಮೇಲೆರುವುದನ್ನು ಕಾಣಬಹುದು. ತಿಂಗಳ ಮೊದಲ ವಾರದಲ್ಲಿ ಬುಧ ಗ್ರಹ ಮುಂಜಾವಿನಲ್ಲಿ ಕಾಣುವುದು. ಒಂದೇ ವಾರದಲ್ಲಿ ಬುಧ ದಿಗಂತಕ್ಕೆ ಸರಿದು ಕಾಣದಂತಾಗುವುದು. ೧೫ಕ್ಕೆ ಸೂರ್ಯನನ್ನು ಹಾದು ತಿಂಗಳ ಕೊನೆಗೆ ಸಂಜೆಯ ಆಕಾಶದಲ್ಲಿ ಕಾಣುವುದು. ಶುಕ್ರವನ್ನು ಗುರುತಿಸುವುದು ಸುಲಭ; ಅದಕ್ಕೂ ಕ್ಷಿತಿಜಕ್ಕೂ ಮಧ್ಯೆ ಕಾಣುವ ಕ್ಷೀಣ ಚುಕ್ಕೆಯೇ ಬುಧ. ಸಂಜೆಯ ಆಕಾಶದಲ್ಲಿ ಪಶ್ಚಿಮದ ಅಂಚಿನಲ್ಲಿ ಸಂಜೆಗೆಂಪಿನಲ್ಲಿ ಈ ಎರಡು ಚುಕ್ಕೆಗಳನ್ನು ಗುರುತಿಸಬಹುದು. ಮಾರ್ಚ್ ೫ಕ್ಕೆ ಎರಡೂ ಪಕ್ಕಪಕ್ಕದಲ್ಲಿಯೇ ಕಾಣ ಬೇಕಾದುದರ ಸಿದ್ಧತೆ ಇದು.

ಚಂದ್ರ ೧೮ರ ರಾತ್ರಿ ಮಘ ನಕ್ಷತ್ರದ ಪಕ್ಕವೇ ಕಾಣುತ್ತದೆ. ಅದೇ ರೀತಿ ಶುಕ್ರ ಗ್ರಹದ ಪಕ್ಕವೇ ೧೬ರಂದು ಕಾಣುತ್ತದೆ. ೨೫ರಂದು ರೋಹಿಣಿ ನಕ್ಷತ್ರದ ಪಕ್ಕವೇ ಕಾಣುತ್ತದೆ. ಈ ಮೂರೂ ಸಂದರ್ಭಗಳಲ್ಲಿ ಚಂದ್ರ ಅದನ್ನು ಮರೆಮಾಡುವ ಆಚ್ಛಾದನೆ ಎಂಬ ಘಟನೆ ನಡೆಯುತ್ತದೆ. (ಆದರೆ ಭಾರತಕ್ಕೆ ಕಾಣುವುದಿಲ್ಲ). ರೋಹಿಣಿ ನಕ್ಷತ್ರದ ಆಸುಪಾಸಿನಲ್ಲಿ ಇರುವ ನಕ್ಷತ್ರಗಳ ಹಂಚಿಕೆ ಇಂಗ್ಲಿಷ್ ವಿ ಅಕ್ಷರದಂತಿದೆ. ಇದನ್ನು ಸಂಸ್ಕೃತ ಗ್ರಂಥಗಳಲ್ಲಿ ಶಕಟ ಎಂದರೆ ಗಾಡಿ ಎಂದು ಕರೆದಿದ್ದಾರೆ. ಚಂದ್ರ ಈ ಗಾಡಿಯೊಳಗೆ, ಅಂದರೆ ವಿ ಆಕಾರದ ನಕ್ಷತ್ರದ ಗುಂಪಿನೊಳಗೆ ಕಾಣುವುದನ್ನು ಶಕಟ ಭೇದ ಎಂದು ಗುರುತಿಸುತ್ತಾರೆ. ಅದನ್ನು ನೋಡಲು ೨೫ರಂದು ಒಳ್ಳೆಯ ಅವಕಾಶವಿದೆ.

ಸಂಜೆಯ ಆಕಾಶದಲ್ಲಿ ಕಾಣುವ ನಕ್ಷತ್ರಪುಂಜಗಳಲ್ಲಿ ಮುಖ್ಯ ಆಕರ್ಷಣೆ ಒರೆಯನ್ – ಮಹಾವ್ಯಾಧ ನಕ್ಷತ್ರ ಪುಂಜ. ಅದರ ಸುತ್ತಲಿನ ವೃಷಭ, ವಿಜಯಸಾರಥಿ (ಆರಿಗ), ಮಿಥುನ ಇವುಗಳೂ ಪ್ರಕಾಶಮಾನವಾದವು. ಅತಿ ಪ್ರಕಾಶ ಮಾನವಾದ ಲುಬ್ಧಕ (ಸಿರಿಯಸ್) ಮತ್ತು ಅಗಸ್ತ್ಯ (ಕೆನೋಪಸ್) ಇವನ್ನು ಸುಲಭವಾಗಿ ಗುರುತಿಸ ಬಹುದು. ಈ ಭಾಗಕ್ಕೆ ಹೋಲಿಸಿದರೆ ಪಶ್ಚಿಮ ಖಾಲಿ ಎನ್ನಿಸಬಹುದು. ನೆತ್ತಿಯ ಮೇಲೆ ಕಾಣುವ ಚೌಕವೇ ನಕುಲ (ಪೆಗಸಸ್). ಇದರ ಆಚೀಚೆ ಮೀನ ರಾಶಿಯ ಎರಡು ಮೀನುಗಳಿವೆ. ನೆತ್ತಿಯ ಮೇಲೆ ಮೇಷರಾಶಿ ಇದೆ. ರಾಶಿ ಚಕ್ರದ ಮೀನ, ಮೇಷ, ವೃಷಭ ಹೀಗೆ ಸ್ಪಷ್ಟವಾಗಿ ಪತ್ತೆಯಾಗುವುವು. ಮಿಥುನ ಪೂರ್ವದ ಅಂಚಿನಲ್ಲಿದೆ. ಉತ್ತರದ ಭಾಗದಲ್ಲಿ ಕುಂತಿ (ಕೆಸಿಯೋಪಿಯಾ), ಪಾರ್ಥ (ಪರ್ಸಿಯುಸ್) ಮತ್ತು ದ್ರೌಪದಿ (ಆಂಡ್ರೊಮೆಡಾ) ಕಾಣುವುವು. ದಕ್ಷಿಣದಲ್ಲಿ ಪ್ರಕಾಶಮಾನವಾದ ಲುಬ್ಧಕ (ಸಿರಿಯಸ್) ಮತ್ತು ಅಗಸ್ತ್ಯ (ಕೆನೋಪಸ್) ಕಾಣುವುವು. ನೈಋತ್ಯದ ಅಂಚಿನಲ್ಲಿ ಕಾಣುವ ಇನ್ನೊಂದು ಪ್ರಕಾಶಮಾನ ನಕ್ಷತ್ರಕ್ಕೆ ವೈತರಣೀ ಮುಖ ಎಂಬ ಹೆಸರಿದೆ. ಮಹಾವ್ಯಾಧನ ಕಾಲಿನ ಸಮೀಪದಿಂದ ಹೊರಡುವ ನದಿಯ ಹೆಸರು ಎರಿಡಾನಸ್; ಇದನ್ನು ಪ್ರೊ ಆರ್ ಎಲ್ ನರಸಿಂಹಯ್ಯ ಅವರು ವೈತರಣೀ ಎಂದು ಹೆಸರಿಸಿದರು.

ಉ

ಕುಂತಿ
ದ್ರೌಪದಿ
ವಿಜಯಸಾರಥಿ
ಪಾರ್ಥ
ನಕುಲ
ಮಿಥುನ
ವೃಷಭ
ಮೇಷ
ಪೂ
ಮೀನ
ಪ
ಮಹಾವ್ಯಾಧ
ಶುಕ್ರ
ಲುಬ್ಧಕ
ವೈತರಣೀ
ಅಗಸ್ತ್ಯ

ದ

ಬೆಳಗಿನ ಜಾವ ದಿಗಂತದ ಅಂಚಿನಲ್ಲಿ ಕಾಣುವ ಗ್ರಹಗಳು ಮಂಗಳ, ಗುರು ಮತ್ತು ಶನಿ. ಇವು ಮೂರೂ ವೃಶ್ಚಿಕ ರಾಶಿಯ ವಿಸ್ತಾರದುದ್ದಕ್ಕೂ ಹರಡಿಕೊಂಡಿವೆ. ಮಂಗಳ ಗ್ರಹದ ಪಕ್ಕದ ಕೆಂಪು ಚುಕ್ಕೆಯೇ ಜ್ಯೇಷ್ಠಾ ನಕ್ಷತ್ರ. ಇದಕ್ಕೆ ಐರೋಪ್ಯ ಹೆಸರು ಅಂಟಾರೆಸ್ – ಅಂದರೆ ಆರೆಸ್‌ನ ಪ್ರತಿಸ್ಪರ್ಧಿ. ಆರೆಸ್ ಎಂಬುದು ಮಂಗಳ ಗ್ರಹದ ಹೆಸರು. ಆದ್ದರಿಂದ ಈ ನಕ್ಷತ್ರ ಮಂಗಳ ಗ್ರಹದ ಪ್ರತಿಸ್ಪರ್ಧಿ. ಇದನ್ನು ಆಕಾಶದಲ್ಲಿ ಪರೀಕ್ಷಿಸಲು ಈಗ ಒಳ್ಳೆಯ ಅವಕಾಶ.

ಜನವರಿ ಮತ್ತು ಮಾರ್ಚ್‌ಗಳಲ್ಲಿ ಎರಡೆರಡು ಹುಣ್ಣಿಮೆಗಳಿರುವುದರಿಂದ ಈ ತಿಂಗಳಲ್ಲಿ ಒಂದೇ ಹುಣ್ಣಿಮೆಯೂ ಇಲ್ಲದಿರುವುದು ಸಹಜವಲ್ಲವೇ?


*ರೋಹಿಣಿ ಶಕಟ ಭೇದ ಚಂದ್ರ ವಿ ಆಕಾರದ ನಕ್ಷತ್ರದ ಗುಂಪಿನೊಳಗೆ ಕಾಣುವುದು*

**ಖಗೋಳ ದಿನಚರಿ**

೧ ಚಂದ್ರ – ಮಘ ನಕ್ಷತ್ರ ಜೋಡಿ*(ಆಚ್ಛಾದನೆ ಕಾಣುವುದಿಲ್ಲ)
೭ ಚಾಂದ್ರ ಮಾಸದ ಮೊದಲ ಪಾದ; ಗುರು – ಚಂದ್ರ ಜೋಡಿ
೯ ಮಂಗಳ ಚಂದ್ರ ಜೋಡಿ*
೧೧ ಶನಿ ಚಂದ್ರ ಜೋಡಿ*
ಚಂದ್ರ – ಭೂಮಿ ನಡುವೆ ಗರಿಷ್ಠ ದೂರ
ಮಂಗಳ – ಜ್ಯೇಷ್ಠಾ ಜೋಡಿ*
೧೫ ಬುಧ – ಚಂದ್ರ ಜೋಡಿ
ಅಮಾವಾಸ್ಯೆ – ಸೂರ್ಯ ಗ್ರಹಣ ಭಾರತಕ್ಕೆ ಕಾಣುವುದಿಲ್ಲ
೧೬ ಶುಕ್ರ – ಚಂದ್ರ ಜೋಡಿ* (ಆಚ್ಛಾದನೆ ಕಾಣುವುದಿಲ್ಲ)
೧೭ ಬುಧ ಗ್ರಹದ ಉಚ್ಚ ಯುತಿ
೨೩ ಚಾಂದ್ರಮಾಸದ ಕೊನೆಯ ಪಾದ
ಚಂದ್ರ ಕೃತ್ತಿಕಾ ಜೋಡಿ*(ಆಚ್ಛಾದನೆ ಕಾಣುವುದಿಲ್ಲ)
೨೭ ಚಂದ್ರ – ಭೂಮಿ ನಡುವೆ ಕನಿಷ್ಠ ದೂರ
(*ಛಾಯಾಗ್ರಹಣಕ್ಕೆ ಸದವಕಾಶ)

**ಡಾ|| ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ
ಹೈಗ್ರೌಂಡ್ಸ್, ಬೆಂಗಳೂರು – ೫೬೦ ೦೦೧




# ಅಭಿವೃದ್ಧಿಯ ಅರ್ಭಟದಲ್ಲಿ ನಲುಗುತ್ತಿರುವ ಪೌರಕಾರ್ಮಿಕರು

ಟಿ. ಮಂಜು ಮತ್ತು ಡಾ॥ ಆರ್. ಸಿದ್ದರಾಜು

**ಭಾ**ರತದಲ್ಲಿ ಈಗ ಎಲ್ಲೆಡೆ ರಾಷ್ಟ್ರೀಯತೆಯ ಕೂಗು ಗಟ್ಟಿಯಾಗುತ್ತಿದೆ. ರಾಜಕೀಯ ಪ್ರೇರಿತ ರಾಷ್ಟ್ರಪ್ರೇಮ ಮತ್ತು ಹಿಂದುತ್ವದ ಜ್ವಾಲೆ, ಹಿಂದಿಗಿಂತಲೂ ಈಗ ಹೆಚ್ಚು ಪ್ರಚಲಿತವಾಗುತ್ತಿದೆ. ವರ್ತಮಾನದ ಕೇಸರಿ ರಾಜಕಾರಣಕ್ಕೆ ಪರ್ಯಾಯ ರಾಜಕಾರಣ ರೂಪಿಸುವ ದಿಕ್ಕಿನಲ್ಲಿ ಯೋಚಿಸುತ್ತಿರುವ ಕೆಲವು ಪ್ರಾದೇಶಿಕ ರಾಜಕೀಯ ಪಕ್ಷಗಳೂ ಸಹ ಹಿಂದೂ ಧರ್ಮದ ತೀರ್ಥವನ್ನು ಪ್ರೋಕ್ಷಣೆ ಮಾಡುತ್ತಿವೆ. ಇಡೀ ದೇಶದಾದ್ಯಂತ ಬಲಪಂಥೀಯ ಭಜನೆಯನ್ನು ಜೋರಾಗಿ ಮೊಳಗಿಸಿ, ಅದಕ್ಕೆ ವಿಕಾಸ, ಅಭಿವೃದ್ಧಿ ಪದಗಳ ಗಂಧ ಹಚ್ಚಿ ಹುಸಿ ದೇಶಪ್ರೇಮದ ಸಾಂಬ್ರಾಣಿ ಘಮಲನ್ನು ನಾಜೂಕಾಗಿ ಹರಡಲಾಗುತ್ತಿದೆ.

ಅಭಿವೃದ್ಧಿಶೀಲ ರಾಷ್ಟ್ರವಾದ ಭಾರತದಲ್ಲಿ ಹಸಿವಿನ ಯಾತನೆ ಅರಿಯದವರ ಮಾತುಗಳೇ ಸಾಮಾಜಿಕ ಮುನ್ನೆಲೆಗೆ ಬರುತ್ತಿದ್ದು, ಈ ನಡುವೆ ಹಸಿದವರ ಮಾತುಗಳನ್ನು ನೇಪಥ್ಯಕ್ಕೆ ಸರಿಸುವ ಸಾಮಾಜಿಕ ಗುಂಪುಗಳು ಬಲಗೊಳ್ಳುತ್ತಿವೆ. ವಿಶ್ವದ ಶಕ್ತಿಶಾಲಿ ರಾಷ್ಟ್ರವಾಗಬೇಕೆಂಬ ಹಪಾಹಪಿಯನ್ನು ಈ ಹೊತ್ತಿನ ರಾಜಕಾರಣ ಉದ್ದೇಶಪೂರ್ವಕವಾಗಿಯೇ ಯುವಕರಲ್ಲಿ ಬಿತ್ತುತ್ತಿದೆ. ಸಮಾಜದ ಅಂಚಿನ ಸಮುದಾಯಗಳ ತವಕ–ತಲ್ಲಣಗಳನ್ನು ತಿರಸ್ಕಾರದಿಂದ ನೋಡುವ ಕ್ರೌರ್ಯ ಹೆಚ್ಚುತ್ತಿದೆ. ನವಭಾರತದ ಕನಸುಗಳ ಅಜೆಂಡಾದಲ್ಲಿ ತಂತ್ರಜ್ಞಾನ ಮತ್ತು ನಗರೀಕರಣ ಸಮಬಲ ಸಾಧಿಸುತ್ತಿವೆ. ನಗರಗಳು ವೃದ್ಧಿಸುತ್ತಾ ಹೋದಂತೆ ನೈರ್ಮಲೀಕರಣದ ಅಭಾವ ಬೆಳೆಯುತ್ತಿದೆ. ತಲೆತಲಾಂತರದಿಂದಲೂ ನೈರ್ಮಲ್ಯದ ಕೆಲಸ ಮಾಡುತ್ತಿರುವ ಪೌರಕಾರ್ಮಿಕರ ಬದುಕು ಅಸಹನೀಯವಾದುದು. ಪ್ರತಿದಿನ ಸರಾಸರಿ ಮೂರು ಮಂದಿ ಪೌರಕಾರ್ಮಿಕರು ಮ್ಯಾನ್‌ಹೋಲ್‌ಗಳಲ್ಲಿ ಉಸಿರುಗಟ್ಟಿ ಸಾಯುತ್ತಿದ್ದಾರೆ. ಅಂದರೆ ವರ್ಷಕ್ಕೆ ಸರಿಸುಮಾರು ಸಾವಿರ ಮಂದಿ ಬಲಿಯಾಗುತ್ತಿದ್ದಾರೆ. ದೇಶವನ್ನು ನೈರ್ಮಲ್ಯದಿಂದಿರುವಂತೆ ನೋಡಿಕೊಂಡು ಆರೋಗ್ಯಕರ ಸಮಾಜಕ್ಕೆ ಕಾರಣೀಭೂತರಾದ ಜನ ನರಕಯಾತನೆಯ ಗಬ್ಬು ನಾರುವ ಗುಡಿಸಲುಗಳಲ್ಲಿ ವಾಸಿಸುತ್ತಿರುವುದು ನಮ್ಮ ದೇಶದ ಮಾನಸಿಕ ಸ್ಥಿತಿಯ ದ್ಯೋತಕವಾಗಿದೆ.

ಇವತ್ತಿಗೂ ಕೈಯಿಂದಲೇ ಮಲವನ್ನು ಬಾಚಿ ತೊಳೆಯುವ ಭಂಗಿಗಳು ಚರಂಡಿ, ಒಳಚರಂಡಿ ಹಾಗೂ ಪಾಯಿಖಾನೆಗಳಲ್ಲಿನ ಮಲವನ್ನು ಯಾವ ಸುರಕ್ಷತಾ ಕ್ರಮವನ್ನು ಅನುಸರಿಸದೆ ಮಾಡುತ್ತಿದ್ದಾರೆ. ರಸ್ತೆ, ಚರಂಡಿ, ಬಸ್ ನಿಲ್ದಾಣಗಳು, ರೈಲ್ವೆ ನಿಲ್ದಾಣಗಳು, ವಿಮಾನ ನಿಲ್ದಾಣಗಳು, ದೊಡ್ಡ ದೊಡ್ಡ ಮೋರಿಗಳು ಮುಂತಾದೆಡೆ ಮಲವನ್ನು ಸ್ವಚ್ಛಗೊಳಿಸುವ ಪೌರಕಾರ್ಮಿಕರು ತಮ್ಮ ಪೂರ್ತಿ ಆಯುಷ್ಯವನ್ನು ಅದರಲ್ಲಿಯೇ ಕಳೆದುಕೊಂಡುಬಿಡುತ್ತಾರೆ. ಚರ್ಮದ ತುರಿಕೆ, ಅಲರ್ಜಿ, ಉಸಿರಾಟದ ತೊಂದರೆ, ಸೋಂಕು, ಮತ್ತಿತರ ರೋಗಗಳು ಬಾಧಿಸುತ್ತಿವೆ. ವಿಷಾನಿಲದ ನಡುವೆ ಕೆಲಸ ಮಾಡುವುದರಿಂದ ಆರೋಗ್ಯ ಸಮಸ್ಯೆಗಳು ಪದೇ ಪದೇ ಎದುರಾಗುತ್ತವೆ. ಗುತ್ತಿಗೆ ಆಧಾರದ ಮೇಲೆ ಕೆಲಸ ಮಾಡುವ ಪೌರಕಾರ್ಮಿಕರ ಜೀವನ ಇನ್ನೂ ದಯನೀಯ.

ಸದಾಕಾಲ ಅನೈರ್ಮಲ್ಯದ ನಡುವೆ ಕೆಲಸ ಮಾಡುವ ಪೌರಕಾರ್ಮಿಕ ಮಹಿಳೆಯರ ಬದುಕು ಅಕ್ಷರಶಃ ನರಕದಂತಿದೆ. ದೈನಂದಿನ ಬದುಕಿನಲ್ಲಿ ಮುಂಜಾನೆ ೫.೩೦ಕ್ಕೆ ಮನೆಯಿಂದ ಹೊರಟರೆ, ಮರಳಿ ಮನೆ ಸೇರುವ ಹೊತ್ತಿಗೆ ಮಧ್ಯಾಹ್ನ ೨ ಗಂಟೆ ಕಳೆದಿರುತ್ತದೆ. ನಗರಗಳ ನಾಗರಿಕರು ತಮ್ಮ ದೇಹದ ಆರೋಗ್ಯಕ್ಕಾಗಿ 'ವಾಕಿಂಗ್, ಜಾಗಿಂಗ್, ರನ್ನಿಂಗ್'ಗಳನ್ನು ಮಾಡಲು ಪ್ರಾರಂಭಿಸಿದರೆ ಅದೇ ನಗರಗಳ ಪೌರಕಾರ್ಮಿಕರು ಮಲಮೂತ್ರ ಬಳಿಯಲು ಆರಂಭಿಸುತ್ತಾರೆ. ಮಕ್ಕಳಿಗೆ ಅಡುಗೆ ಮಾಡಿ ಶಾಲೆಗೆ ಕಳುಹಿಸಲೂ ಆಗುತ್ತಿಲ್ಲ. ಬೆಳ್ಳಂಬೆಳಿಗ್ಗೆಯೇ ಕೆಲಸಕ್ಕೆ ಹಾಜರಾಗ ಬೇಕಿರುವುದರಿಂದ ಬೆಳಗಿನ ಉಪಾಹಾರವನ್ನೂ ಸಹ ಸೇವಿಸಲು ಆಗುತ್ತಿಲ್ಲ. ಜನದಟ್ಟಣೆ ಸ್ಥಳಗಳಲ್ಲಿಯೇ ಅತಿಹೆಚ್ಚು ಕೆಲಸ ಮಾಡುವುದರಿಂದ ಮೂತ್ರ ವಿಸರ್ಜನೆ ಮಾಡಲು ಆಗುವುದಿಲ್ಲ. ಸ್ವಚ್ಛತಾ ಕೆಲಸ ಮಾಡುವ ಸಮೀಪದ ನಾಗರಿಕರ ಮನೆಗಳಲ್ಲಿ ಕುಡಿಯಲು ನೀರು ಕೇಳಿದರೆ ಕೊಡುವುದಿಲ್ಲ. ಆದ್ದರಿಂದ ಬಾಯಾರಿಕೆ ಮತ್ತು ಮೂತ್ರ ವಿಸರ್ಜನೆಯನ್ನು ಪೌರಕಾರ್ಮಿಕ ಮಹಿಳೆಯರು ಅಸಹಜವಾಗಿ ನಿಯಂತ್ರಿಸಿಕೊಳ್ಳುತ್ತಾರೆ. ಇದರಿಂದ ಅವರ ಆರೋಗ್ಯದ ಮೇಲೆ ಗಂಭೀರವಾದ ಪರಿಣಾಮ ಬೀರುತ್ತಿದೆ. ಬೆಳಿಗ್ಗೆಯಿಂದ ಮಧ್ಯಾಹ್ನದವರೆಗೂ ಉಪವಾಸ ಇದ್ದು, ಸ್ವಚ್ಛತಾ ಕಾರ್ಯ ಮಾಡಿದ ನಂತರ ಅನಿವಾರ್ಯವಾಗಿ ಮದ್ಯದ ಮೊರೆ ಹೋಗ ಬೇಕಾಗುತ್ತದೆ.





ಸಮಾಜದ ಪ್ರತಿಷ್ಠಿತರು, ಸಾಮಾಜಿಕವಾಗಿ ಹೆಚ್ಚಿನ ತಿಳುವಳಿಕೆ ಉಳ್ಳವರೂ, ಬೆಳಿಗ್ಗೆ ಎದ್ದತಕ್ಷಣ ತಮ್ಮ ಸಾಕುನಾಯಿಗಳನ್ನು ವಾಯುವಿಹಾರಕ್ಕೆ ಕರೆದುಕೊಂಡು ಹೋಗುತ್ತಾರೆ. ಆ ನಾಯಿಗಳು ರಸ್ತೆ ಬದಿಯಲ್ಲೇ ಮಲ ವಿಸರ್ಜಿಸುತ್ತವೆ. ಹಾಗೆ ವಿಸರ್ಜಿಸುವ ರೀತಿಯಲ್ಲೇ ಆ ನಾಯಿಗಳಿಗೆ ಅಭ್ಯಾಸ ಮಾಡಿಸಿರುತ್ತಾರೆ. ವಿದ್ಯಾವಂತರಾದ ಈ ಜನರಿಗೆ ರಸ್ತೆಯಲ್ಲಿನ ಮಲವನ್ನು ಪೌರಕಾರ್ಮಿಕರೇ ಶುಚಿಗೊಳಿಸುತ್ತಾರೆ ಎನ್ನುವ ಸಾಮಾನ್ಯ ಜ್ಞಾನ ಇದ್ದೇ ಇರುತ್ತದೆ. ಆದರೂ ತಮ್ಮ ಮನೆಗಳ ಶೌಚಾಲಯಗಳಲ್ಲಿ ಸಾಕುನಾಯಿಗಳಿಗೆ ಮಲ ಮೂತ್ರ ಮಾಡಿಸುವುದನ್ನು ಬಿಟ್ಟು ರಸ್ತೆಗೆ ಕರೆ ತರುವುದಾದರೂ ಏಕೆ? ಈ ಪ್ರಶ್ನೆಗೆ ಉತ್ತರ ತುಂಬ ಸರಳ. ಅವರ ಮನಸ್ಸಿನಲ್ಲಿ ಆಳವಾಗಿ ಬೇರೂರಿರುವ ಜಾತೀಯತೆ ಮತ್ತು ಮತಾಂಧತೆಯ ಧೋರಣೆಗಳು.

## ಆಯುಷ್ಯ

ಮರಗಳು ಕಡಿವಲ್ಪಟ್ಟವು
ರಸ್ತೆಗಳು ಅಗಲವಾದವು
ವೇಗವಾಗಿ ಓಡುತ್ತಿದೆ
ಭೂಮಿ ಮತ್ತು ಮನುಷ್ಯರ
ಆಯುಷ್ಯಕಾಲ

**ಶ್ರೀನಿವಾಸ ಕುಂಡಂತಾಯ**
ಬೆಂಗಳೂರು – ೫೬೦ ೦೯೪

ಕಳೆದ ವರ್ಷ ದಿವ್ಯಾಭಾರತಿ ಎನ್ನುವ ತಮಿಳುನಾಡಿನ ಹೆಣ್ಣು ಮಗಳು 'ಕಕ್ಕಸು' ಎಂಬ ಸಾಕ್ಷ್ಯಚಿತ್ರ ತಯಾರಿಸಿದ್ದಳು. ಪ್ರಧಾನಿ ಮೋದಿಯವರ ಸ್ವಚ್ಛ ಭಾರತ ಪರಿಕಲ್ಪನೆ ಮತ್ತು ವಾಸ್ತವದ ಸಫಾಯಿ ಕರ್ಮಚಾರಿಗಳ ಬದುಕನ್ನು ತುಲನೆ ಮಾಡುವ ಚಿತ್ರಕಥಾ ಅದಾಗಿತ್ತು. ಶ್ರೀ ಮನಮೋಹನ ಸಿಂಗ್ ನೇತೃತ್ವದ ಯು.ಪಿ.ಎ.–೨ರ ಸರ್ಕಾರ 'ನಿರ್ಮಲ ಭಾರತ' ಎಂಬ ಕಕ್ಕಸ್ಸು ಮನೆ ಕಟ್ಟಿಸಿಕೊಳ್ಳುವ ಯೋಜನೆ ರೂಪಿಸಿತ್ತು. ತದನಂತರ ಅಧಿಕಾರಕ್ಕೆ ಬಂದ ನರೇಂದ್ರ ಮೋದಿಯವರು, ನಿರ್ಮಲ ಭಾರತದ ಯೋಜನೆಗೆ 'ಸ್ವಚ್ಛ ಭಾರತ' ದ ಲೇಬಲ್ ಹಚ್ಚಿದರು. ಸ್ವತಃ ತಾವೇ ಪೊರಕೆ ಹಿಡಿದು ಬೀದಿಯಲ್ಲಿ ಕಸಗುಡಿಸಿದರು. ಇದು ಭಾರತೀಯ ಎಲೈಟ್ ಸಮುದಾಯದಲ್ಲಿ ಒಂದು ಬಗೆಯ ಸಮೂಹ ಸನ್ನಿ ಸೃಷ್ಟಿಸಿತು. ಸಿನಿಮಾ ತಾರೆಗಳು, ಕ್ರಿಕೆಟ್ ಆಟಗಾರರು, ಕಲಾವಿದರು, ಬೀದಿಯಲ್ಲಿ ಪೊರಕೆ ಹಿಡಿದು ನಿಂತರು.

ಕಸ ಗುಡಿಸುವಾಗ ಉತ್ಕೃಷ್ಟತೆಯ ಮುಖಗವಸು, ಕೈಗವಸು, ಬೂಟು, ಪ್ರಥಮ ಚಿಕಿತ್ಸೆ ಪೆಟ್ಟಿಗೆಯುಳ್ಳ ಆಂಬ್ಯುಲೆನ್ಸ್ ಮುಂತಾದ ಸೂಕ್ತ ಮುನ್ನೆಚ್ಚರಿಕೆ ರಕ್ಷಣಾ ಸುರಕ್ಷತಾ ಕ್ರಮಗಳನ್ನು ತೆಗೆದುಕೊಂಡು ಕಸ ಗುಡಿಸಿದರು.

ಒಂದು ದಿನದಲ್ಲಿ ಅರ್ಧಗಂಟೆ ನಡೆಯುವ ಈ ಅಭಿಯಾನ ಭರ್ಜರಿ ಪ್ರಚಾರ ಪಡೆಯುತ್ತದೆ. ಇಡೀ ದೇಶವೇ ಇವರೆಡೆಗೆ ನೋಡುತ್ತದೆ. ಮಾಧ್ಯಮಗಳಲ್ಲಿ ಚರ್ಚೆಯಾಗುತ್ತದೆ. ಈ ಬಗೆಯ ಜನರ ಪೋಷಾಕು, ನಾಟಕೀಯತೆ ಜನರನ್ನು ಮರುಳು ಮಾಡುವ, ಭಾವನಾತ್ಮಕ ಬಣ್ಣದ ಮಾತುಗಳನ್ನು ಸಾಕ್ಷ್ಯಚಿತ್ರದಲ್ಲಿ ಆಪ್ತವಾಗಿ ವಿವರಿಸುತ್ತಾರೆ ನಿರ್ದೇಶಕಿ ದಿವ್ಯಾಭಾರತಿ. ಇದರ ಜೊತೆಗೆ ತಮಿಳುನಾಡಿನ ಹೃದಯಭಾಗದ ನಗರಗಳಾದ ತಿರುಚಿ, ನೀಲಗಿರಿ, ಚೆನ್ನೈ, ಮಧುರೈ, ಕೊಯಂಬತ್ತೂರು, ಈರೋಡು ಮುಂತಾದ ೧೨ ಜಿಲ್ಲೆಗಳ ಬಸ್ ನಿಲ್ದಾಣಗಳ ಶೌಚಾಲಯ, ಕೊಳಚೆ ತುಂಬಿದ ದೊಡ್ಡ ಮೋರಿಗಳಲ್ಲಿ ಯಾವುದೇ ಸುರಕ್ಷತಾ ಕ್ರಮಗಳಿಲ್ಲದೆ ಬರೀ ಕೈಯಿಂದಲೇ ಮಲ ಶುಚಿಗೊಳಿಸುವ ಜನರ ಹೀನಾಯ ಸ್ಥಿತಿ ಕಣ್ಣೀರು ತರಿಸುತ್ತದೆ.

ಪ್ರತಿದಿನ ತಂಗಳು ಅನ್ನವನ್ನು ಸಂಗ್ರಹಿಸಿಕೊಂಡು ರಾತ್ರಿಯ ವೇಳೆ ಹಂಚಿಕೊಳ್ಳುವ ತಾಯಂದಿರ ಕರುಣಾಜನಕ ಪರಿಸ್ಥಿತಿ. ತಮಗಂಟಿದ ರೋಗ–ರುಜಿನಗಳಿಗೆ ಚಿಕಿತ್ಸೆ ಪಡೆಯಲಾಗದ ಅಸಹಾಯಕತೆ, ಮಕ್ಕಳಿಗೆ ಬೆಳಗಿನ ಉಪಾಹಾರ ಮಾಡಿಕೊಡಲಾಗದ ಚಡಪಡಿಕೆ. ಪ್ರತಿದಿನ ಹೇಸಿಗೆಯಲ್ಲೇ ಕೆಲಸ ಮಾಡಬೇಕೆನ್ನುವ ಬೇಸರ. ಸರ್ಕಾರ ನೀಡಿದ ಕಳಪೆ ಗುಣಮಟ್ಟದ ಮಾಸ್ಕ್, ಗ್ಲೌಸ್‌ಗಳು. ಬರಿಗೈಯಲ್ಲೇ ಹರಿದು ಬಿಸಾಡಬಹುದಾದ ಮೇಲಂಗಿಗಳು, ಕಸದ ತಿಪ್ಪೆಯ ಮಗ್ಗುಲಿನಲ್ಲೆ ಅವರಿವರು ಕೊಟ್ಟ ತಂಗಳು ತಿನ್ನುವುದು, ಮಲಗುಂಡಿಯಲ್ಲಿ ಬಿದ್ದು ಸತ್ತ ಮನೆಯವರ ಗೋಳಾಟ, ಪ್ರಾಯಕ್ಕೆ ವಿಧವೆಯರಾದ ಹೆಣ್ಣುಮಕ್ಕಳು, ಅನಾಥ ಕಂದಮ್ಮಗಳ ಆಕ್ರಂದನ, ಜೋಪಡಿಗಳ ಮಗ್ಗುಲಿನಲ್ಲೇ ಹೊಳೆಯಂತೆ ಹರಿಯುವ ಮಲಿನ ನೀರು, ಗಬ್ಬು ವಾಸನೆ ಇವೆಲ್ಲವು ನೋಡುಗರ ಮನಸ್ಸನ್ನು ಕಲಕುತ್ತವೆ.

"ಕಕ್ಕಸು" ಸಾಕ್ಷ್ಯಚಿತ್ರದ ಭೌಗೋಳಿಕ ವ್ಯಾಪ್ತಿ ತಮಿಳುನಾಡು ಜಿಲ್ಲೆಯಾದರೂ ಅದು ಇಡೀ ಭಾರತದ ಭಂಗಿಗಳ ಬದುಕಿನ ಚಿತ್ರಣವಾಗಿದೆ. ಅಂತರರಾಷ್ಟ್ರೀಯ ವೇದಿಕೆಗಳಲ್ಲಿ ಪ್ರದರ್ಶನಗೊಂಡು, ಸುದ್ದಿ ಮಾಡಿದ ಈ ಸಾಕ್ಷ್ಯಚಿತ್ರ ಭಾರತದಲ್ಲಿ ನಿಷೇಧಕ್ಕೆ ಒಳಗಾಯಿತು. ಭಾರತದ ಕೆಲವು ಮಲಿನ ಮನಸ್ಸುಗಳು ಸಾಕ್ಷ್ಯಚಿತ್ರದ ವಿರುದ್ಧ ಪ್ರಕರಣ ದಾಖಲಿಸಿದವು. 'ಕಕ್ಕಸು' ಸಾಕ್ಷ್ಯಚಿತ್ರವು ಭಾರತದ ಭಾವೈಕ್ಯತೆಗೆ ಧಕ್ಕೆ ತರುತ್ತದೆ. 'ಕ' ಎನ್ನುವ ಅಕ್ಷರ ಶಿವಲಿಂಗದ ಹೋಲಿಕೆ ಹೊಂದುತ್ತದೆ. ಪ್ರಧಾನಿ ಮೋದಿಯವರ ಆಶಯಕ್ಕೆ ವಿರುದ್ಧವಿದೆ ಎಂದು ಕೇಸುಗಳನ್ನು ಹಾಕಲಾಯಿತು. ಕೊನೆಗೆ ನಿರ್ದೇಶಕಿ ದಿವ್ಯಾಭಾರತಿಯನ್ನು ನಕ್ಸಲೈಟ್ ಎಂದು ಬಿಂಬಿಸಲಾಯಿತು. ಸಾಕ್ಷ್ಯಚಿತ್ರದ ವಿಚಾರಗಳು ಚರ್ಚೆಯಾಗುವ ಬದಲು, ನಿರ್ದೇಶಕಿ ಕುರಿತು ಚರ್ಚೆಯಾಗುವ ರೀತಿ ತಂತ್ರ ಹೆಣೆಯಲಾಯಿತು. ಇದು ವರ್ತಮಾನ ಭಾರತದ ಸಾಮಾಜಿಕ ವೈರುಧ್ಯ.

ಕೈಯ್ಯಾರೆ ಮಲ ಶುಚಿ ಮಾಡುವುದನ್ನು ೧೯೯೩ರಲ್ಲಿ ಅಧಿಕೃತವಾಗಿ ರದ್ದುಗೊಳಿಸಲಾಯಿತು. ಯಾವುದೇ ವ್ಯಕ್ತಿಯೂ ಒಳಚರಂಡಿಗೆ ಇಳಿದು ಶುಚಿ ಮಾಡಬಾರದು. ಆ ಕೆಲಸಕ್ಕೆ ಯಂತ್ರಗಳನ್ನು ಬಳಸಬೇಕು ಎಂದು ಸರ್ವೋಚ್ಚ ನ್ಯಾಯಾಲಯ ಆದೇಶಿಸಿದೆ. ೨೦೧೪ರಲ್ಲಿ ಮ್ಯಾನ್‌ಹೋಲ್ ಗುಂಡಿಗೆ ಬಿದ್ದು ತೀರಿಕೊಂಡವರ ಕುಟುಂಬದವರಿಗೆ ೧೦ ಲಕ್ಷ ರೂ.ಗಳ ಪರಿಹಾರ ನೀಡಬೇಕೆಂದು ನ್ಯಾಯಾಲಯ ನಿರ್ದೇಶನ ನೀಡಿದೆ.

ಇದೆಲ್ಲವು ಕಾಗದದ ಮೇಲೆ ಮಾತ್ರ ಇದೆ. ಮಲ ಶುಚಿ ಮಾಡುವವರ ಪಾಲಿಗೆ ವರದಾನವಾಗಿಲ್ಲ. ಕಕ್ಕಸ್ಸು ಸ್ವಚ್ಛ ಮಾಡುವುದು ಭಂಗಿಗಳು ಮಾತ್ರ ಮಾಡುವ ಕೆಲಸ. ಅವರ ಧ್ವನಿ ಯಾರಿಗೂ ಕೇಳಿಸುವುದಿಲ್ಲ. ಅವರಿಗೆ ರಾಜಕೀಯ ಪ್ರಭಾವವಿಲ್ಲ. ಹಾಗಾಗಿ ಈ ಕ್ಷೇತ್ರದಲ್ಲಿ ತಂತ್ರಜ್ಞಾನದ ಬೆಳವಣಿಗೆ ಆಗಿಲ್ಲ. ಎಲ್ಲಾ ರಂಗಗಳಲ್ಲಿಯೂ ವ್ಯಾಪಕ ಸಂಶೋಧನೆಗಳಾಗಿವೆ. ಆದರೆ ಶೌಚಾಲಯಕ್ಕೆ ಸಂಬಂಧಿಸಿದಂತೆ, ಮಲ ಸ್ವಚ್ಛ ಮಾಡುವುದಕ್ಕೆ ತಂತ್ರಜ್ಞಾನ ಅಭಿವೃದ್ಧಿಪಡಿಸಲಾಗಿಲ್ಲ. ನಮ್ಮ ರಾಷ್ಟ್ರದ





# ಮರ–ಅಮರ






೧

ಮರದ ರೆಂಬೆಕೊಂಬೆಗಳಲಿ
ಹೂವು ಅರಳಿ ಹೀಚಾಗಿ ಕಾಯಾಗಿ
ಕಾಯಿ ಹಣ್ಣಾಗಿ, ಹಣ್ಣು ಹೃದಯವಂತರ
ನಾಲಿಗೆಗಳು ಚಪ್ಪರಿಸಿವೆ

ಹಣ್ಣೊಳಗಿನ ಬೀಜ
ಹೃದಯದೊಳಗೆ ಸೇರಿ ಮೊಳೆತಿದೆ
ಅಲ್ಲಿ ಪ್ರೀತಿ ಕರುಣೆ ಸ್ನೇಹಗಳು
ಭ್ರೂಣವಾಗಿ ಚಿಮ್ಮಿ
ಮತ್ತೆ ಮರವಾಗಿವೆ

ಮರವು ಹಕ್ಕಿ ಸಂಕುಲಕೆ
ಆಸರೆಯಾಗಿ
ಚಾಚಿದ ರೆಂಬೆಕೊಂಬೆಗಳು
ಬಳಲಿದವರಿಗೆ ನೆರಳಾಗಿ ಅರಳಿದ ಹೂವುಗಳು
ಮಕರಂದ ನೀಡಿ ಸಂತಸ ಹಂಚಿ ಮಾಗಿದ ಹಣ್ಣುಗಳು
ಹಸಿದವರನು ತಣಿಸಿ
'ಪರೋಪಕಾರಾರ್ಥಮಿದಂ ಶರೀರಂ'
ಎಂದು ತಮ್ಮೆದೆಯ ತೆರೆದಿವೆ

ನಿತ್ಯ ಸಾಗಿದೆ ಹೀಗೆ
ಮರದ ಚರಿತೆ

೨

ಈ ನೆಲದಲ್ಲಿ ಬುದ್ಧ ಬಸವ ಗಾಂಧಿಯರು
ಗಿಡವಾಗಿ ಮರವಾಗಿ
ಹೂವು ಕಾಯಿ ಹಣ್ಣಾಗಿ
ಹೊಸ ಬೀಜವಾಗುತ್ತಲೇ ಇದ್ದಾರೆ

ಆಗಾಗ ಹಿಂಸೆ ಸ್ವಾರ್ಥ ವಂಚನೆಗಳೆಂಬ
ಕ್ರಿಮಿಗಳು ತಗುಲಿದರೂ
ಎದೆಯೊಳಗಿನ ಸಂವೇದನೆ ಸೊರಗದೆ
ಮತ್ತೆ ಮತ್ತೆ ಚಿಮ್ಮಿ
ನೆಲದಾಯಿಯ ಬೆಚ್ಚನೆಯ ಅಪ್ಪುಗೆಯಲಿ
ಚಿಗಿಯುತ್ತಲೇ ಇವೆ

ನಿತ್ಯ ಸಾಗಿದೆ ಹೀಗೆ
ಮರ ಅಮರವಾದ ಚರಿತೆ

**ನಾಗರಾಜ ಸಿರಿಗೆರೆ**
ಕನ್ನಡ ಅಧ್ಯಾಪಕ, ನಂ.೯೦೪, ೧ನೇ 'ಎ' ಅಡ್ಡರಸ್ತೆ, ೧ನೇ ಮುಖ್ಯರಸ್ತೆ
ಶಿವಕುಮಾರ ಬಡಾವಣೆ, ದಾವಣಗೆರೆ – ೫೭೭ ೦೦೫

ವಿಜ್ಞಾನಿಗಳು ಒಂದೇ ರಾಕೆಟಿನಲ್ಲಿ ನೂರ ಹನ್ನೆರಡು ಕ್ಷಿಪಣಿಗಳನ್ನು ನಭೋಮಂಡಲಕ್ಕೆ ಉಡಾಯಿಸಬಲ್ಲರು. ಮಂಗಳಯಾನಕ್ಕೆ ಕಡಿಮೆ ಅವಧಿಯಲ್ಲಿ ಇತರ ದೇಶಕ್ಕಿಂತಲೂ ಕಡಿಮೆ ವೆಚ್ಚದಲ್ಲಿ ಅಂಗಾರಕವನ್ನು ರೂಪಿಸಿ ಮೊದಲ ಯತ್ನದಲ್ಲೆ ಯಶಸ್ವಿಯಾದರು. ಆದರೆ ಮನುಷ್ಯನ ಮಲವನ್ನು ಸ್ವಚ್ಛಗೊಳಿಸಲು ಮಾನವರಹಿತ ಯಂತ್ರವನ್ನು ಸಂಶೋಧಿಸದಿರುವುದು ನಮ್ಮ ರಾಷ್ಟ್ರದ ವೈಜ್ಞಾನಿಕ ಕ್ಷೇತ್ರಕ್ಕೆ ಕಪ್ಪುಚುಕ್ಕಿ ಎನ್ನಬಹುದು. ಅಂದ ಮಾತ್ರಕ್ಕೆ ವೈಜ್ಞಾನಿಕ ಯಂತ್ರವನ್ನು ಸಂಶೋಧಿಸಲಾರದಷ್ಟು ನಮ್ಮ ವಿಜ್ಞಾನಿಗಳು ಅಸಮರ್ಥರೇನಲ್ಲ. ಅಂದರೆ ವಿಜ್ಞಾನಿಗಳ ಈ ತಾರತಮ್ಯಕ್ಕೆ ಜಾತಿವ್ಯವಸ್ಥೆಯೇ ಕಾರಣ.

ಕಕ್ಕಸು ತೊಳೆಯುವ ಕೆಲಸ ಯಾರಿಗೂ ಇಷ್ಟವಿಲ್ಲ. ಹೊಟ್ಟೆಪಾಡಿಗಾಗಿ ಆ ಕೆಲಸ ಮಾಡುತ್ತಾರೆ. ಈಗ ಖಾಸಗಿ ಕ್ಷೇತ್ರದಲ್ಲಿ ಹೌಸ್ ಕೀಪಿಂಗ್ ಎನ್ನುವ ಹೆಸರಿನಲ್ಲಿ ಭಂಗಿ ಸಮುದಾಯದ ಯುವಕ ಯುವತಿಯರನ್ನು, ಅದೇ ಜಾಡಮಾಲಿ ಕೆಲಸಕ್ಕೆ ನೇಮಿಸಿಕೊಳ್ಳಲಾಗುತ್ತಿದೆ. ಸ್ವಚ್ಛ ಭಾರತ ಆಂದೋಲನ ಆರಂಭವಾದ ಮೇಲೆ ಗ್ರಾಮೀಣ ಪ್ರದೇಶದ ಮನೆಗಳಲ್ಲೂ ಕಕ್ಕಸ್ಸು ಗುಂಡಿ ಇದೆ. ಆ ಗುಂಡಿಯನ್ನು ಸ್ವಚ್ಛ ಮಾಡುವುದಕ್ಕೆ ಯಂತ್ರಗಳು ಬೇಕು. ನಗರ ಪ್ರದೇಶದ ಐದು ಲಕ್ಷ ಜನರಿರುವಲ್ಲಿ ಕನಿಷ್ಠ ೫೦ ಯಂತ್ರಗಳಿರಬೇಕು. ಆದರೆ ಒಂದೋ ಎರಡೋ ಯಂತ್ರಗಳಿವೆ. ಮುನಿಸಿಪಾಲಿಟಿಗಳಲ್ಲಿ, ಕಾರ್ಪೊರೇಷನ್‌ಗಳಲ್ಲೇ, ಸ್ವಚ್ಛ ಮಾಡುವ ಯಂತ್ರಗಳ ಅಭಾವ ಇರುವಾಗ, ಇನ್ನು ಗ್ರಾಮ ಪಂಚಾಯಿತಿಗಳಲ್ಲಿ ಸಕ್ಕಿಂಗ್ ಯಂತ್ರ ಇರುತ್ತದೆಯೇ? ಅಲ್ಲೆಲ್ಲಾ ಮನುಷ್ಯರೇ ಸ್ವಚ್ಛಗೊಳಿಸಬೇಕು. ನಮ್ಮ ಕಕ್ಕಸ(ಮಲ)ನ್ನು ಸ್ವಚ್ಛ ಮಾಡುವುದಕ್ಕೆ ಒಂದು ಸಮುದಾಯವಿದೆ. ಆ ಸಮುದಾಯದ ಜನರ ನೋವುಗಳಿಗೆ ಸ್ಪಂದಿಸಬೇಕೆನ್ನುವ ಸಂವೇದನೆಯನ್ನೇ ಕಳೆದುಕೊಂಡಿರುವುದು ನಾಚಿಕೆಗೇಡು.

**ಟಿ. ಮಂಜು**
ಸಂಶೋಧಕರು, ಗಾಂಧೀ ಅಧ್ಯಯನ ಕೇಂದ್ರ
ಮೈಸೂರು ವಿಶ್ವವಿದ್ಯಾನಿಲಯ ಮೈಸೂರು
**ಡಾ|| ಆರ್. ಸಿದ್ದರಾಜು**
ಸಹಾಯಕ ಪ್ರಾಧ್ಯಾಪಕರು, ಮಹಾರಾಜ ಕಾಲೇಜು
ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು




ನಾನು ಓದಿದ ಪುಸ್ತಕ

*ಲೇಖಕರು :*
**ಸೂರ್ಯಪ್ರಕಾಶ ಡಿ. ಹೆಚ್.**
ಪುಟಗಳು : ೨೮೫ ಬೆಲೆ : ರೂ. ೨೨೦/-
*ಪ್ರಕಾಶಕರು :*
**ದೀಪಕ್ ಪ್ರಕಾಶನ,** ಶಿವಮೊಗ್ಗ

# ಗಟ್ಟಿಯಾದ ವೈಚಾರಿಕ ನಡೆ

ತಳನಿಂತ ನೆಲೆವಾಸಿಗಳು ದೋಚಿ ತಿನ್ನುವ ಅಲೆಮಾರಿಗಳನ್ನು ನಿರಾಯುಧರನ್ನಾಗಿಸಿ ಆಳುಗಳನ್ನಾಗಿಸಿಕೊಂಡು ಅದೇ ಅಲೆಮಾರಿಗಳನ್ನು ಮುಂದೆ ತಳವಾಸಿಗಳು ಭಾರತ ಉಪಖಂಡದ ಇತಿಹಾಸದ ವಿಕಸನದಲ್ಲಿ ಬೆಳೆಯದಂತೆ ಮಾಡುವರು. ಆದರೆ ಅವರೊಂದಿಗೆ ಸಹಜವಾಗಿ ಸೇರುವಿಕೆ ಅನಿವಾರ್ಯವಾಗಿ ಸಾಗಿದಾಗ ಅದಕ್ಕೆ ಸಂಕರವೆನ್ನಲಾಯಿತು. ಸಂಕರಕ್ಕೆ ಅನುಗುಣವಾಗಿ ಜಾತಿಲೇಪನವನ್ನು ಅಂಟಿಸುತ್ತಾ ಶ್ರಮವನ್ನು ಅಧೀನರಿಗೆ ವರ್ಗಾಯಿಸುತ್ತಾ ಧರ್ಮದ ಕಟ್ಟಳೆಯೆಂಬ ಸಂಕೋಲೆಯಲ್ಲಿ ಅವರನ್ನು ನಿಯಂತ್ರಿಸುತ್ತಾ, ವರ್ಗಾಯಿಸುತ್ತಾ, ಅಧಿಕಾರ ಕೇಂದ್ರದಲ್ಲಿ ಸದಾ ಸುಖಪಡುತ್ತಾ ಸಾಗುವ ಪುರೋಹಿತಶಾಹಿಯ ಒಳಗುಟ್ಟನ್ನು ತೆರೆದಿಡುವುದೇ 'ವರ್ಣ' ಕಾದಂಬರಿಯ ವಸ್ತು. ಅದಕ್ಕೆ ಪೂರಕವಾಗಿ ಅನೇಕ ಶಾಸ್ತ್ರ, ವೈಚಾರಿಕ ಗ್ರಂಥಗಳ ವಿಚಾರಗಳನ್ನು ಬಳಸಿಕೊಳ್ಳುವ ತಂತ್ರವನ್ನು ಬಳಸಿಕೊಳ್ಳಲಾಗಿದೆ.

ಅಸ್ಪೃಶ್ಯತೆ ಹುಟ್ಟಿನ ಬಗ್ಗೆ ಅಂಬೇಡ್ಕರ್ ಹೇಳಿರುವ ವಿವರಗಳನ್ನೊಳಗೊಂಡು ಕಥನರೂಪವಾಗಿ ಕಾದಂಬರಿಯ ಮೊದಲ ಅಧ್ಯಾಯ ಆರಂಭವಾಗುತ್ತದೆ. ಆದಿಯಲ್ಲಿ ಇಲ್ಲದ ಜಾತಿವ್ಯವಸ್ಥೆಯು ಮುಂದೆ ರೂಪಿತಗೊಂಡು ಭಾರತೀಯ ಸಮಾಜವನ್ನೇ ನಿರ್ವಹಿಸುವಂತಹ, ಇದರ ಮೂಲಕ ಗಟ್ಟಿಯಾದ ಸಾಂಸ್ಥಿಕ ರೂಪವನ್ನು (ಅಧಿಕಾರ ನಿರ್ವಹಿಸುವ) ಪಡೆಯಿತು. ಈ ಸಾಂಸ್ಥಿಕ ರೂಪವು ನಿರಂತರವಾಗಿ ಅಧಿಕಾರವನ್ನು ನಿರ್ವಹಿಸುತ್ತಾ ಹೇಗೆ ಬದಲಾಗಿದೆ ಎಂಬ ವಿಚಾರದ ಕುರಿತು ಸಂಶೋಧನೆಯನ್ನು ಮತ್ತು ಪ್ರೇಮದ ಕಥಾನಕ, ಈ ಎರಡನ್ನು ಹೆಣೆದುಕೊಂಡೇ ಕಾದಂಬರಿ ಸಾಗುತ್ತದೆ. ವಿಶ್ವವಿದ್ಯಾನಿಲಯದ ಭಿನ್ನ ವಿಭಾಗದ ಇಬ್ಬರು ವಿದ್ಯಾರ್ಥಿನಿಯರು ಪರಸ್ಪರ ಅನ್ಯಶಿಸ್ತುಗಳಾದ ತತ್ವಶಾಸ್ತ್ರ ಮತ್ತು ಸಮಾಜಶಾಸ್ತ್ರಗಳಲ್ಲಿ ಸಂಶೋಧನೆಯ ವಿಷಯವನ್ನು ಆಯ್ದುಕೊಂಡಿದ್ದರಿಂದ ಆತ್ಮೀಯರಾಗುತ್ತಾರೆ. ಬ್ರಾಹ್ಮಣ (?) ಕುಟುಂಬದಿಂದ ಬಂದ ಇವರು ವಿವಿಯ ದಲಿತ ಅಧ್ಯಾಪಕರ ಮಾರ್ಗದರ್ಶನದಲ್ಲಿ ನಡೆಸುವ ಅಧ್ಯಯನ ಏನೆಲ್ಲ ಘಟ್ಟಕ್ಕೆ ಬಂದು ತಲುಪುತ್ತದೆ; ಸಂಶೋಧನೆ, ಅಧ್ಯಯನ, ಕ್ಷೇತ್ರಕಾರ್ಯ, ಸಂದರ್ಶನ, ಮಾರ್ಗದರ್ಶನಗಳೇ ಆಯಾ ಪಾತ್ರಗಳ ವೈಯಕ್ತಿಕ ಜೀವನದಲ್ಲಿಯ ಅನೇಕ ತಿಳಿವುಗಳಿಗೂ, ತಿರುವುಗಳಿಗೂ ಕಾರಣವಾಗುತ್ತದೆ ಎಂಬುದನ್ನು ಓದುಗರಲ್ಲಿ ಕುತೂಹಲ ಉಳಿಸಿಕೊಳ್ಳುವಂತೆ ನಿರೂಪಿಸಲಾಗಿದೆ.

ಕಾದಂಬರಿಯ ಮುಖ್ಯಪಾತ್ರವಾದ ವೈಷ್ಣವಿಯ ಸಂಶೋಧನೆಯ ವಿಷಯವು ಇಂದಿಗೂ ಅನೇಕ ಸಮಸ್ಯೆಗಳಿಗೆ ಕಾರಣವಾದ ಜಾತಿ ಸೃಷ್ಟಿಯ ಹಿನ್ನೆಲೆಯ ಚಾರಿತ್ರಿಕ ಅನ್ವೇಷಣೆಯಾಗಿದೆ. ಭಾರತದ ಉಪಖಂಡದಲ್ಲಿ ವರ್ಣ/ಜಾತಿ ವ್ಯವಸ್ಥೆಯ ಬೇರು, ಅದರ ವಿಕಸಿತ ಹಂತಗಳು, ಅವುಗಳ ರಚನೆಯ ಕಾರಣ, ಪರಿಣಾಮಗಳನ್ನು ಪ್ರಸ್ತುತಪಡಿಸುತ್ತಾ ಸಾಗುತ್ತದೆ. ಇದರೊಂದಿಗೆ ಪಾತ್ರಗಳಲ್ಲಿ ಪ್ರೇಮ ಸೆಲೆಯೂ ಬತ್ತದೆ ಹರಿಯುತ್ತದೆ.

ಪೂರ್ವಿಕರೆನಿಸಿದ ಜ್ಞಾನಿಗಳಾದ ಹರಪ್ಪನ್ನರನ್ನು ವಾಯವ್ಯ ಭಾಗದಿಂದ ಬಂದ ಆರ್ಯರು ಮಣಿಸಿ ವೇದಕಾಲದ ಸಮಾಜವನ್ನು ಕಟ್ಟಿದರು. ವೇದಕಾಲೀನ ಸಮಾಜವು ಹರಪ್ಪನ್ನರ ಸಮಾಜಕ್ಕೆ ಹೋಲಿಸಿದರೆ ಹೇಗೆ ಬರ್ಬರವಾಗಿ ಅನಾಗರಿಕವಾಗಿತ್ತು ಎಂಬುದನ್ನು ಅನೇಕ ಸಾಕ್ಷಿಗಳ ಮೂಲಕ ಭಾರತದ ಜಾತಿ ವ್ಯವಸ್ಥೆಯ ಸಾಮಾಜಿಕ ಚರಿತ್ರೆಯನ್ನು ಕಥಾನಕದ ಮೂಲಕ ಕಟ್ಟಿಕೊಡಲಾಗಿದೆ.

ಇತಿಹಾಸದಲ್ಲಿ ಸಾಮಾಜಿಕ, ಆರ್ಥಿಕ, ಧರ್ಮ ರಾಜಕೀಯ ಹೀಗೆ ಅನೇಕ ಕ್ಷೇತ್ರಗಳಲ್ಲಿ ಒಂದೇ ವರ್ಣವು ಹೇಗೆ ಏಕಮೇವಾದ್ವಿತೀಯವಾಗಿ ವಿಜಯಿಯಾಗುತ್ತಾ ಬಂದಿದೆ ಮತ್ತು ಅದರಿಂದ ಭಾರತವು ಹೇಗೆ ನಲುಗಿತು (ಈಗಲೂ ನಲುಗುತ್ತಲೇ ಇದೆ) ಎಂಬುದು ವೈಷ್ಣವಿಯ ಸಂಶೋಧನೆಯ ಫಲಿತ. ಆ ಫಲಿತವನ್ನು ಮಂಡಿಸುವುದೇ ಕಾದಂಬರಿಯ ಮುಖ್ಯ ಘಟ್ಟ.

ವೈಷ್ಣವಿಯಂತೆಯೇ ಸಂಶೋಧನೆಯಲ್ಲಿ ತೊಡಗಿದ ಅವಳ ಗೆಳತಿ ಪ್ರಣೀತಾ ಕೂಡ ತತ್ವಶಾಸ್ತ್ರದ ಸಂಶೋಧನೆಯಲ್ಲಿ ಇದೇ ತೆರನಾದ ವಿಷಯದ ಸಂಶೋಧನೆಯಲ್ಲಿ ತೊಡಗಿರುತ್ತಾಳೆ. ಈ ಮೂಲಕ ನಮ್ಮ ದರ್ಶನಗಳಲ್ಲಿ ಜಾತಿಯನ್ನು ಉಳಿಸಿ ಬೆಳೆಸಲು ಹೂಡಿರುವ ರಾಜಕಾರಣ ಬಯಲಾಗುತ್ತದೆ. ಹೀಗಾಗಿ 'ವರ್ಣ ವ್ಯವಸ್ಥೆ'ಯ ಅಪರಾಳಗಳು ತೆರೆಯಲು ಸಾಕಷ್ಟು ಸಂದರ್ಭಗಳು ಕಾದಂಬರಿಯಲ್ಲಿ ಸಹಜವಾಗಿ ನಡೆದುಹೋಗುತ್ತವೆ. ಪ್ರೇಮ, ಗೆಳೆತನ, ಸಂಬಂಧಗಳ ಬೆಸುಗೆ, ವಿರಹ, ಜೊತೆಯಲ್ಲಿಯೇ ಪಥ ಬದಲಾಯಿಸಿ ಅಂತಿಮ ಹಂತ ತಲುಪುತ್ತದೆ .

ಕಥಾಹಂದರದಲ್ಲಿ ಆಪದ್ಧರ್ಮ, ಧರ್ಮದ್ರೋಹ, ಚಾತುರ್ಮಾಸ್ಯ, ತಪ್ತಮುದ್ರೆ, ಯತಿ ಪಟ್ಟಾಭಿಷೇಕ, ಬಂಡೆ ಒಡೆಯುವ ಮದ್ದು, ಮುಂಬೈನ ಸ್ಥಳ ವಿವರಣೆಗಳು – ಹೀಗೆ ಒಂದಕ್ಕಿಂತ ಒಂದು ಭಿನ್ನ ವಿಷಯಗಳನ್ನು ಓದುಗರ ರಸಾಸ್ವಾದನೆಗೆ ಭಂಗ ಬರದಂತೆ ಕ್ರಮಾನುಗತಿಯಲ್ಲಿ ಜೋಡಿಸಲಾಗಿದೆ. ಇದಕ್ಕೆ ಸಮರ್ಥವಾಗಿ ಮಾರ್ಗದರ್ಶನ ಮಾಡುವ ಸುಹಾಸ್‌ನ ಪ್ರೌಢಿಮೆಯು ವ್ಯಕ್ತವಾಗುತ್ತದೆ.

ಕಥಾನಕದ ನಡುವೆಯೇ ಶ್ರಮಿಕರ ಜೀವನ ಸುಹಾಸ್‌ನ ಪೂರ್ವಿಕರ ಚರಿತ್ರೆ ಬಂದು ಸೇರಿದೆ. ಇವರಲ್ಲಿ ಕೆಲವರು ಬಂಡೆ ಒಡೆಯುವ ಕಾಯಕದಲ್ಲಿ ಮದ್ದು ಸಿಡಿದು ಸಾಯುತ್ತಾರೆ. ಇನ್ನು ಕೆಲವರು ಮೌಢ್ಯದ ಕೊಂಡ ಹಾಯ್ದು ಮರಣಿಸುತ್ತಾರೆ. ಇವೆಲ್ಲವೂ ಕಥನಕ್ಕೆ ತೀವ್ರತೆಯನ್ನು ತಂದುಕೊಟ್ಟಿವೆ.

ಪ್ರೇಮ ಕಥನದ ಜೊತೆಗೆ ತೀಕ್ಷ್ಣ ವೈಚಾರಿಕತೆಯನ್ನು ಜೋಡಿಸಿ ಕಾದಂಬರಿಯನ್ನು ರಚಿಸುವುದು ಸವಾಲಿನ ಕೆಲಸ. ವರ್ಗ, ಜಾತಿ ಮತ್ತು ಜಾತಿ ಸಮಸ್ಯೆಯನ್ನು ಇಟ್ಟುಕೊಂಡು ಅದರ ಅನೇಕ ಮಗ್ಗಲುಗಳನ್ನು ಚರ್ಚಿಸಿ ಅದರಿಂದ ಉಂಟಾಗುವ ಅನಾಹುತಗಳನ್ನು ಚಿತ್ರಿಸಿರುವುದರಿಂದ 'ವರ್ಣ' ಕಾದಂಬರಿ ಪ್ರಸ್ತುತವೂ ಆಗುತ್ತದೆ. ಧರ್ಮ-ಜಾತಿಯ ಸಂಕೋಲೆಗಳಿಂದ ಹೊರಬರಲಾರದೆ ಎಲ್ಲವನ್ನೂ ಭಾವನಾತ್ಮಕತೆಯಲ್ಲಿ ಇಟ್ಟುನೋಡುವ ಇಂದಿನ ಸ್ಥಿತಿಯಲ್ಲಿ ಸೂರ್ಯಪ್ರಕಾಶ ಪ್ರಸ್ತುತಪಡಿಸಿರುವ ವರ್ಣ ಕಾದಂಬರಿ ಒಂದು 'ಗಟ್ಟಿಯಾದ ವೈಚಾರಿಕ ನಡೆ' ಎನ್ನಬಹುದು.

**ಡಾ॥ ಎಚ್. ಟಿ. ಕೃಷ್ಣಮೂರ್ತಿ**
ಉಪನ್ಯಾಸಕರು
ಡಿ.ವಿ.ಎಸ್. ಕಲಾ ಮತ್ತು ವಿಜ್ಞಾನ ಕಾಲೇಜು, ಶಿವಮೊಗ್ಗ



# ವಿಜ್ಞಾನ ಲೇಖಕ ಮಾರ್ಕ್ಸ್‌ವಾದಿ ಚಿಂತಕ 'ಜೆಆರ್‌ಎಲ್'

## – ಒಂದು ನೆನಪು

> ಭೂಗತ ಚಟುವಟಿಕೆಯ ದಿನಗಳಲ್ಲಿ ಪಾರ್ಟಿಯ ಹಿತೈಷಿಗಳು ನೀಡಿದ ಬೆಂಬಲ ಅಭೂತಪೂರ್ವವಾದ್ದು ಹಾಗೂ ಅಪಾಯಕಾರಿ. ಯಾವ ಸಂದರ್ಭದಲ್ಲಾಗಲಿ ಪೊಲೀಸರು ದಾಳಿ ನಡೆಸುವ, ಹಿಂಬಾಲಿಸುವ ಸಂಭವವಿತ್ತು. ಅಂಥದರಲ್ಲೂ ಧೈರ್ಯವಾಗಿ ಪಾರ್ಟಿ ನಾಯಕರುಗಳಿಗೆ ಆಶ್ರಯ ನೀಡಿ, ಪಾರ್ಟಿಯನ್ನು ಜೀವಂತವಾಗಿರಿಸಿದ ಹಿತೈಷಿಗಳನ್ನು ಯಾವತ್ತೂ ಸ್ಮರಿಸಬೇಕು. ಲಕ್ಷ್ಮಣ ರಾಯರು ತಮ್ಮ ನೆನಪುಗಳಲ್ಲಿ ಅಂತಹ ಕೆಲವು ಘಟನೆಗಳನ್ನು ಮೆಲುಕು ಹಾಕಿದ್ದಾರೆ.

**ಸಿ. ಆರ್. ಕೃಷ್ಣರಾವ್**

**ಜೆ.** ಆರ್. ಲಕ್ಷ್ಮಣ ರಾವ್ ಅವರನ್ನು ನನಗೆ ಪರಿಚಯಿಸಿದವರು ಎಂ. ಎಸ್. ಕೃಷ್ಣನ್. ನಾನು ಆಗ ಭೂಗತರಾಗಿದ್ದ ಕಮ್ಯುನಿಸ್ಟ್ ನಾಯಕರಿಗೆ ಸಂಪರ್ಕದ ಕೊಂಡಿ. ನ್ಯಾಷನಲ್ ಕಾಲೇಜಿನಲ್ಲಿ ಇಂಟರ್ ಓದುತ್ತಿದ್ದೆ. ಆಗ ಲಕ್ಷ್ಮಣ ರಾಯರ ವಿಚಾರ ನನಗೇನೂ ಗೊತ್ತಿರಲಿಲ್ಲ. ಮುಂದೆ ನಾನು ಸೆಂಟ್ರಲ್ ಕಾಲೇಜಿಗೆ ಬಿಎಸ್ಸಿ ಓದಲು ಸೇರಿಕೊಂಡಾಗ 'ಜೆಆರ್‌ಎಲ್' ಎಂದೇ ಹೆಸರಾಗಿದ್ದ ಅವರು ನನಗೆ ರಸಾಯನ ವಿಜ್ಞಾನದ ಮೇಷ್ಟ್ರು. ಅಖಿಲ ಭಾರತ ವಿದ್ಯಾರ್ಥಿ ಫೆಡರೇಷನ್ನಿನ ಕಾರ್ಯದರ್ಶಿಯಾಗಿದ್ದ ನಾನು ಕಮ್ಯುನಿಸ್ಟ್ ಪಾರ್ಟಿಯ ಸದಸ್ಯ. ಲಕ್ಷ್ಮಣ ರಾಯರು ಪಾರ್ಟಿಯ ಹಿತೈಷಿ ಎಂಬುದು ಗೊತ್ತಾದದ್ದು ಆಗಲೆ. ಆಗೆಲ್ಲ ಸೆಂಟ್ರಲ್ ಕಾಲೇಜಿನಲ್ಲಿ ಇಂಗ್ಲಿಷ್–ಕನ್ನಡ ಬೆರೆಸಿ ಪಾಠ ಮಾಡುತ್ತಿದ್ದರು. ಜೆಆರ್‌ಎಲ್ ಕಾರ್ಬನಿಕ ರಸಾಯನ ವಿಜ್ಞಾನ ಪಾಠ ಮಾಡುತ್ತಿದ್ದರು ಎಂದು ನೆನಪು. ಅವರಿಗೆ ನಾನು ಆಗ ಪಾರ್ಟಿ ಕೇಂದ್ರದಿಂದ ಪ್ರಕಟವಾಗುತ್ತಿದ್ದ 'ನ್ಯೂ ಏಜ್' ವಾರಪತ್ರಿಕೆ ಪ್ರತಿವಾರವೂ ತಲುಪಿಸುತ್ತಿದ್ದೆ. ಅದರೊಂದಿಗೆ ಪೀಪಲ್ಸ್ ಪಬ್ಲಿಷಿಂಗ್ ಹೌಸ್ ಮತ್ತು ಸೋವಿಯೆತ್ ಪ್ರಕಟಣೆಗಳನ್ನು ಒದಗಿಸುತ್ತಿದ್ದೆ.

ಸಾವಿರದ ಒಂಭೈನೂರ ಐವತ್ತರ ಪ್ರಾರಂಭದಲ್ಲಿ ಮಾರ್ಕ್ಸ್‌ವಾದದ ಅಧ್ಯಯನ ಮಾಡಲು 'ಸ್ಟಡಿ ಸರ್ಕಲ್' ಪ್ರಾರಂಭವಾದ ಮೇಲೆ ನನಗೆ ಜೆಆರ್‌ಎಲ್ ಅವರು ನಿಕಟವಾಗಿ ಪರಿಚಿತರಾದ್ದು. ವಿದ್ಯಾರ್ಥಿಯಾಗಿದ್ದಾಗಲೇ ಅವರು ಕಮ್ಯುನಿಸ್ಟ್ ಪಾರ್ಟಿಯ ನಿಕಟವರ್ತಿಯಾಗಿದ್ದರು. ಎರಡನೇ ಮಹಾಯುದ್ಧದ ಕಾಲ ಅದು. ಸೋವಿಯೆತ್ ಒಕ್ಕೂಟ ಯುದ್ಧ ಪ್ರವೇಶಿಸಿದ ಮೇಲೆ ಅದನ್ನು 'ಪೀಪಲ್ಸ್ ವಾರ್' ಎಂದು ಕರೆದ ಕಮ್ಯುನಿಸ್ಟರು ಫ್ಯಾಸಿಸ್ಟ್ ವಿರೋಧಿ ನಿಲುವನ್ನು ತಳೆದು ಅಂದಿನ ಬ್ರಿಟಿಷ್ ಸರಕಾರದ ಯುದ್ಧದ ಪ್ರಯತ್ನಕ್ಕೆ ಒತ್ತಾಸೆ ನೀಡಿದ್ದರು. ಅದೇ ಸಂದರ್ಭದಲ್ಲಿ ಕಾಂಗ್ರೆಸ್ ೧೯೪೨ರ 'ಚಲೇಜಾವ್' ಚಳವಳಿ ಪ್ರಾರಂಭಿಸಿತ್ತು. ಆ ದಿನಗಳಲ್ಲಿ ಕಾಲೇಜು ವಿದ್ಯಾರ್ಥಿಗಳ ಮುಷ್ಕರ ವಿರೋಧಿಸಿ ಲಕ್ಷ್ಮಣರಾಯರು ಪಾರ್ಟಿ ನಿಲುವಿಗೆ ಬದ್ಧರಾಗಿದ್ದರು. ಅವರ ಸಹಪಾಠಿ ಸೇತುರಾವ್ ಮುಷ್ಕರದಲ್ಲಿ ಭಾಗಿಯಾಗಿ ಜೈಲು ಸೇರಿದರು. ಪ್ರಾಯಶಃ ಅವರುಗಳು ಆಗ ಸಕ್ರಿಯವಾಗಿದ್ದ ವಿದ್ಯಾರ್ಥಿ ಫೆಡರೇಷನ್ನಿನ ಸದಸ್ಯರಾಗಿ ಎಂ. ಎಸ್. ಕೃಷ್ಣನ್ ಸಂಪರ್ಕದಲ್ಲಿದ್ದರೆಂದು ತೋರುತ್ತದೆ. ಈ ನೆನಪನ್ನು ಅವರೇ ಸ್ಮರಿಸಿಕೊಳ್ಳುತ್ತಿದ್ದರು. ಸ್ಟಡಿ ಸರ್ಕಲ್‌ನಲ್ಲಿ

ಇದ್ದವರೆಲ್ಲ ಹೆಚ್ಚಾಗಿ ರಸಾಯನ ವಿಜ್ಞಾನದ ಅಧ್ಯಾಪಕರುಗಳು. ಅದೇಕೆ ಎನ್ನುವುದು ಇವತ್ತಿಗೂ ನನಗೆ ಜಿಜ್ಞಾಸೆ. ಕೆ. ಶ್ರೀನಿವಾಸನ್, ಜೆ. ಆರ್. ಲಕ್ಷ್ಮಣ ರಾವ್, ಎಂ. ಎ. ಸೇತುರಾವ್, ಶ್ವೇತಾದ್ರಿ, ಅಮೂಲ್ಯ ರೆಡ್ಡಿ ಇವರೆಲ್ಲರೂ ರಸಾಯನ ವಿಜ್ಞಾನದ ಮೇಷ್ಟ್ರುಗಳೆ. ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್‌ನಿಂದ ಬಂದು ಭಾಗವಹಿಸುತ್ತಿದ್ದ ವಾಸುದೇವಮೂರ್ತಿ ಕೂಡ ರಸಾಯನ ವಿಜ್ಞಾನಿ, ಸತೀಶ್ ಧಾವನ್ ಮಾತ್ರ ಏರೋನಾಟಿಕ್ಸ್ ವಿಭಾಗದವರು. ಮುಂದೆ 'ಇಸ್ರೋ' ಸಂಸ್ಥೆಯ ಮೊದಲ ಅಧ್ಯಕ್ಷರಾದ ಇವರು ಪಂಜಾಬಿನ ಟ್ರೇಡ್ ಯೂನಿಯನ್ ನಾಯಕ ಸತೀಶ್ ಲೂಂಬ ಇವರ ಸಂಬಂಧಿಕರು. ಐದಾರು ವರ್ಷ ನಡೆದ ಈ ಅಧ್ಯಯನದಲ್ಲಿ ಕಾರ್ಲ್ ಮಾರ್ಕ್ಸ್‌ರ 'ಕ್ಯಾಪಿಟಲ್' ಗ್ರಂಥದ ಕುರಿತು ವಿಶ್ಲೇಷಣೆ ನಡೆಯಿತು. ಪ್ರತಿ ಅಧ್ಯಾಯವನ್ನು ಯಾರಾದರೊಬ್ಬರು ಓದಿಕೊಂಡು ಒಂದರ್ಧ ಗಂಟೆ ಸಾರಾಂಶವನ್ನು ನೀಡುತ್ತಿದ್ದರು. ಅನಂತರ ಅದರ ಮೇಲೆ ಚರ್ಚೆ. ಪ್ರತಿ ಭಾನುವಾರ ಒಬ್ಬೊಬ್ಬರ ಮನೆಯಲ್ಲಿ ಸೇರುತ್ತಿದ್ದೆವು. ಹೆಚ್ಚಾಗಿ ಎಂ. ಎ. ಸೇತುರಾಯರ ಶ್ರೀರಾಮಪುರದ ಮನೆಯಲ್ಲಿ ಬೆಳಗ್ಗೆ ೯.೩೦ಕ್ಕೆ ಎಲ್ಲರೂ ಸೇರುತ್ತಿದ್ದರು. ಮೊದಲ ಅರ್ಧ ಗಂಟೆ ವಾರದ ಅಂತರರಾಷ್ಟ್ರೀಯ, ರಾಷ್ಟ್ರೀಯ ಘಟನೆಗಳ ಕುರಿತು ವಿಚಾರ ವಿನಿಮಯ ಆಗುತ್ತಿತ್ತು. ಲಕ್ಷ್ಮಣ ರಾಯರು ಮೂರು ವಾರಗಳು ಗತಿತಾರ್ಕಿಕ ಭೌತವಾದ (ಡೈಲೆಕ್ಟಿಕಲ್ ಮೆಟೀರಿಯಲಿಸಂ) ಪಾಠ ಮಾಡಿದರೆಂದು ನೆನಪು. ಕೆಲವೊಮ್ಮೆ ಎಂ. ಎಸ್. ಕೃಷ್ಣನ್, ಎನ್. ಎಲ್. ಉಪಾಧ್ಯಾಯ, ಎಂ. ಸಿ. ನರಸಿಂಹನ್ ಈ ಅಧ್ಯಯನ ಕೂಟಕ್ಕೆ ಬರುತ್ತಿದ್ದುದುಂಟು. ಭಾಗವಹಿಸುತ್ತಿದ್ದವರೆಲ್ಲ ಪಾರ್ಟಿ ಹಿತೈಷಿಗಳು. ಪ್ರತಿ ತಿಂಗಳೂ ಪಾರ್ಟಿಗೆ ಧನಸಹಾಯ ಮಾಡುತ್ತಿದ್ದರು. ಪಾರ್ಟಿ ಸದಸ್ಯರಾಗಲು ಬಯಸಿದಾಗ್ಯೂ ಹಿತೈಷಿಗಳಾಗಿಯೇ ಉಳಿದಿದ್ದರು. ಒಮ್ಮೆ ಪಾರ್ಟಿ ಪ್ರಾಂತ ಸಮಿತಿ ಕಚೇರಿ ಆವರಣದಲ್ಲಿ ಅಕ್ಟೋಬರ್ ಕ್ರಾಂತಿ ಕಿಡಿ ಹಾರಿಸಿದ ಐಸೆನ್‌ಸ್ಟೈನರ ನಿರ್ದೇಶನದ ಚಿತ್ರ 'ಬ್ಯಾಟಲ್‌ಷಿಪ್ ಪೊಟೆಮ್ಕಿನ್' ಪ್ರದರ್ಶನ ಏರ್ಪಡಿಸಿದ್ದಾಗ ವೃಂದದವರೆಲ್ಲ ಭಾಗವಹಿಸಿದ್ದರು. ಪ್ರೊ॥ ಡಿ. ಡಿ. ಕೊಸಾಂಬಿಯವರು ಬೆಂಗಳೂರಿಗೆ ಆಗಾಗ ಬರುತ್ತಿದ್ದರು. ಒಂದೆರಡು ಬಾರಿ ಅವರು ಅಧ್ಯಯನ ವೃಂದದ ಕಲಾಪಗಳಲ್ಲಿ ಭಾಗವಹಿಸಿದ್ದರು. ಒಮ್ಮೆ ಮಲ್ಲೇಶ್ವರದ ಹಿತೈಷಿಯೊಬ್ಬರ ಮನೆಯಲ್ಲಿ ಒಂದು ವಾರ ಕೊಸಾಂಬಿ ಯವರು ಭಾರತದ ಪುರಾತನ ಇತಿಹಾಸ ಕುರಿತು ಉಪನ್ಯಾಸಗಳನ್ನು ನೀಡಿದ್ದರು. ವೃಂದದ ಸದಸ್ಯರೆಲ್ಲರೂ ಅದರಲ್ಲಿ ಭಾಗವಹಿಸಿದ್ದರು. ಆ ಸಂದರ್ಭದಲ್ಲಿ ಕೊಸಾಂಬಿಯವರು ಪಾರ್ಟಿಗೆ ಮೈಕ್‌ಸೆಟ್‌ವೊಂದನ್ನು ಕೊಡುಗೆಯಾಗಿ ನೀಡಿದ್ದರು.

ಭೂಗತ ಚಟುವಟಿಕೆಯ ದಿನಗಳಲ್ಲಿ ಪಾರ್ಟಿಯ ಹಿತೈಷಿಗಳು ನೀಡಿದ ಬೆಂಬಲ ಅಭೂತಪೂರ್ವವಾದ್ದು ಹಾಗೂ ಅಪಾಯಕಾರಿ. ಯಾವ ಸಂದರ್ಭದಲ್ಲಾಗಲಿ ಪೊಲೀಸರು ದಾಳಿ ನಡೆಸುವ, ಹಿಂಬಾಲಿಸುವ ಸಂಭವವಿತ್ತು. ಅಂಥದರಲ್ಲೂ ಧೈರ್ಯವಾಗಿ ಪಾರ್ಟಿ ನಾಯಕರುಗಳಿಗೆ ಆಶ್ರಯ ನೀಡಿ, ಪಾರ್ಟಿಯನ್ನು ಜೀವಂತವಾಗಿರಿಸಿದ ಹಿತೈಷಿಗಳನ್ನು ಯಾವತ್ತೂ ಸ್ಮರಿಸಬೇಕು. ಲಕ್ಷ್ಮಣ ರಾಯರು ತಮ್ಮ ನೆನಪುಗಳಲ್ಲಿ ಅಂತಹ ಕೆಲವು ಘಟನೆಗಳನ್ನು ಮೆಲುಕುಹಾಕಿದ್ದಾರೆ. ನವಕರ್ನಾಟಕ ಸಂಸ್ಥೆಯೊಂದಿಗೆ ಅವರ ಸಂಬಂಧ ಪ್ರಾರಂಭದಿಂದಲೂ ಇತ್ತು. ಸೋವಿಯೆತ್ ಪುಸ್ತಕಗಳು ಮತ್ತು ಪತ್ರಿಕೆಗಳನ್ನು ಖರೀದಿಸಲು ಅವರು ಮೆಜೆಸ್ಟಿಕ್ ವೃತ್ತದ ಬಳಿ ಇದ್ದ ಮಳಿಗೆಗೆ ಭೇಟಿ ಕೊಡುತ್ತಿದ್ದರು. ನಿವೃತ್ತರಾದ ನಂತರ ನವಕರ್ನಾಟಕ ಪ್ರಕಾಶನ ಸಂಸ್ಥೆಯ ಕಾರ್ಯಚಟುವಟಿಕೆಗಳಲ್ಲಿ ಭಾಗವಹಿಸುತ್ತಿದ್ದರು. ಅವರ ಹಲವು ಕೃತಿಗಳನ್ನು ಸಂಸ್ಥೆ ಪ್ರಕಟಿಸಿದೆ. ಇದಿಷ್ಟೂ ಲಕ್ಷ್ಮಣ ರಾಯರ ಚಟುವಟಿಕೆಗಳ ಒಂದು ಮುಖ.

ಮುಖ್ಯವಾಗಿ ವಿಜ್ಞಾನ ಲೇಖಕರಾಗಿ, ವೈಜ್ಞಾನಿಕ ಮನೋಧರ್ಮದ ಸಂವಹನಕಾರರಾಗಿ ಜೆಆರ್‌ಎಲ್ ಸಲ್ಲಿಸಿದ ಸೇವೆ ಶಾಶ್ವತವಾದ್ದು. ಕರ್ನಾಟಕ ರಾಜ್ಯದಲ್ಲಿ ವಿಜ್ಞಾನ ಪ್ರಸರಣಕ್ಕಾಗಿ ಅವರು ಎಂ. ಎ. ಸೇತುರಾವ್ ಮತ್ತು ಅಡ್ಯನಡ್ಕ ಕೃಷ್ಣ ಭಟ್ ಜೊತೆಗೂಡಿ ಸ್ಥಾಪಿಸಿದ 'ಕರ್ನಾಟಕ ವಿಜ್ಞಾನ ಪರಿಷತ್' ಸಂಸ್ಥೆ ಇಂದು ಬೃಹದಾಕಾರವಾಗಿ ಬೆಳೆದಿದೆ. ಹಾಗೆಯೇ ಅವರು ಪ್ರಾರಂಭಿಸಿದ 'ಬಾಲ ವಿಜ್ಞಾನ' ಮಾಸ ಪತ್ರಿಕೆ ಇನ್ನೂ ಜೀವಂತ. ಮದರಾಸು ವಿಶ್ವವಿದ್ಯಾನಿಲಯದ ಪ್ರಶಸ್ತಿ ಗಳಿಸಿದ 'ಪರಮಾಣು ಚರಿತ್ರೆ'ಯಿಂದ ಪ್ರಾರಂಭವಾದ ಅವರ ವಿಜ್ಞಾನ ಬರವಣಿಗೆ ಕೊನೆಯವರೆಗೂ ಬೆಳೆಯಿತು. ಪರಿಷತ್ತು ಪ್ರಕಟಿಸಿದ ಜೆ. ಆರ್. ಲಕ್ಷ್ಮಣ ರಾವ್ ಮತ್ತು ಅಡ್ಯನಡ್ಕ ಕೃಷ್ಣ ಭಟ್ ವಿರಚಿತ ವಿಜ್ಞಾನ ನಿಘಂಟು ವಿಜ್ಞಾನ ಲೇಖಕರಿಗೆ, ವಿದ್ಯಾರ್ಥಿಗಳಿಗೆ ಅತ್ಯಮೂಲ್ಯವಾದ ಕೊಡುಗೆ. ವಿಜ್ಞಾನ ಪ್ರಸರಣಕ್ಕಾಗಿ ಅವರು ಸಲ್ಲಿಸಿದ ಸೇವೆ ಗುರ್ತಿಸಿ ಭಾರತ ಸರಕಾರ ಗೌರವ ಪ್ರಶಸ್ತಿ ನೀಡಿತು. ಕರ್ನಾಟಕದಲ್ಲಿ ಈ ಪ್ರಶಸ್ತಿ ಪುರಸ್ಕೃತರಲ್ಲಿ ಜೆಆರ್‌ಎಲ್ ಮೊದಲಿಗರು. ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಸಮೇತ ಹಲವು ಪ್ರಶಸ್ತಿಗಳಿಗೆ ಅವರು ಭಾಜನರಾಗಿದ್ದರು. ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕ ಹುದ್ದೆ ಅವರಿಗೆ ತಡವಾಗಿ ಬಂದರೂ ಲೆಕ್ಕಿಸದೆ ಸಹಸ್ರಾರು ವಿದ್ಯಾರ್ಥಿಗಳಿಗೆ ವಿಜ್ಞಾನ ಬೋಧಿಸಿದವರು ಲಕ್ಷ್ಮಣ ರಾಯರು. ಮೈಸೂರು ವಿಶ್ವವಿದ್ಯಾನಿಲಯದ 'ಪ್ರಬುದ್ಧ ಕರ್ನಾಟಕ' ಪತ್ರಿಕೆಯ ಚಿನ್ನದ ಹಬ್ಬದ ಅಂಗವಾಗಿ ೧೫೦೦ ಪುಟಗಳ 'ವಿಜ್ಞಾನ ಕರ್ನಾಟಕ' ವಿಶೇಷ ಸಂಚಿಕೆಯ ಸಂಪಾದಕರಾಗಿ ಸಲ್ಲಿಸಿದ ಸೇವೆ ಸ್ಮರಣೀಯ. ಮೈಸೂರು ವಿಶ್ವವಿದ್ಯಾನಿಲಯ ಪ್ರಕಟಿಸಿದ ನಾಲ್ಕು ಸಂಪುಟಗಳ 'ಇಂಗ್ಲಿಷ್–ಕನ್ನಡ ನಿಘಂಟು' ಸಂಪಾದಕ ಮಂಡಲಿಯ ಸದಸ್ಯರಾಗಿ ದುಡಿದರು. ನವಕರ್ನಾಟಕ ಪ್ರಕಾಶನ ಸಂಸ್ಥೆ ಪ್ರಕಟಿಸಿದ ನಾಲ್ಕು ಸಂಪುಟಗಳ 'ಜ್ಞಾನ ವಿಜ್ಞಾನ ಕೋಶ'ದ ಸಲಹಾ ಮಂಡಳಿಯ ಸದಸ್ಯರಾಗಿದ್ದರು. *ವಿಜ್ಞಾನ ಎಂದರೇನು?, ಜನಸಾಮಾನ್ಯರಿಗೆ ಎಂಥ ವಿಜ್ಞಾನ ಬೇಕು?, ಬೈಜಿಕ ವಿದ್ಯುತ್, ಗೆಲಿಲಿಯೋ, ವಿಜ್ಞಾನ ವಿಚಾರ, ಲೂಯಿ ಪಾಶ್ಚರ್, ವಿಜ್ಞಾನಿಗಳೊಡನೆ ರಸನಿಮಿಷಗಳು* ಮೊದಲಾದವು ಅವರ ಪ್ರಮುಖ ಕೃತಿಗಳು. ನವಕರ್ನಾಟಕ ಪ್ರಕಾಶನ ಸಂಸ್ಥೆ ಪ್ರಕಟಿಸಿದ ಅವರ 'ನೆನಪಿನ ಅಲೆಗಳು' ಹಾಗೂ ೯೦ರ ವಯಸ್ಸಿನಲ್ಲಿ ಪತ್ನಿ ಜೀವೂಬಾಯಿ ಜೊತೆಗೂಡಿ ಅವರು ಅನುವಾದಿಸಿದ ಆರ್ನಾಲ್ಡ್ ಕೆಟಲ್ ಅವರ 'ಕಾರ್ಲ್ ಮಾರ್ಕ್ಸ್' ಜೀವನ ಚರಿತ್ರೆ ಎರಡು ಮುದ್ರಣಗಳನ್ನು ಕಂಡಿವೆ. ನವಕರ್ನಾಟಕ ಪ್ರಕಟಿಸುತ್ತಿರುವ 'ಹೊಸತು' ಪತ್ರಿಕೆಗೆ ಅವರು ತಪ್ಪದೇ ಲೇಖನಗಳನ್ನು ಬರೆಯುತ್ತಿದ್ದರು. ಅವರು 'ಹೊಸತು'ಗೆ ಬರೆದ ಕೊನೆಯ ಲೇಖನ 'ಹೀಗಿದ್ದರು ನಮ್ಮ ಎಂ.ಎಸ್.ಕೆ.' ಅವರಿಗೆ ಆಗ ವಯಸ್ಸು ೯೩ ಆಗಿತ್ತು. ಮೈಸೂರಿಗೆ ಭೇಟಿ ನೀಡಿದಾಗಲೆಲ್ಲ ಅವರನ್ನು ಭೇಟಿಯಾಗುತ್ತಿದ್ದೆ. ಅವರು ಇಂದು ನಮ್ಮೊಂದಿಗೆ ಇಲ್ಲದಿದ್ದರೂ ನಮಗೆಲ್ಲ ಪ್ರಾತಃಸ್ಮರಣೀಯರು.

**ಸಿ. ಆರ್. ಕೃಷ್ಣರಾವ್**
'ಚೌಬೀನ', ನಂ. ೮೪೯, ೭ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫



# ಟಿಪ್ಪು ಕಾಲದ ನರಮೇಧ : ಚರಿತ್ರೆ ಮತ್ತು ವಾಸ್ತವ

**ಡಾ॥ ವಿಜಯ್ ಪೂಣಚ್ಚ ತಂಬಂಡ**

೧೯೯೦ರ ದಶಕದಲ್ಲಿ "ಕೊಡವ ರಾಷ್ಟ್ರೀಯತೆಯ" ಮೂಲಕ ಕೊಡಗು ಪ್ರತ್ಯೇಕ ರಾಜ್ಯವಾಗಬೇಕೆನ್ನುವ ಹೋರಾಟವನ್ನು ಹಮ್ಮಿಕೊಂಡಿದ್ದ ಲಿಬರೇಷನ್ ವಾರಿಯರ್ಸ್ ಆಫ್ ಕೊಡಗು ಎನ್ನುವ ಸಂಘಟನೆಯು ಮಾರ್ಕ್ಸಿಸ್ಟ್–ಲೆನಿನಿಸ್ಟ್ ಸಿದ್ಧಾಂತದ ಮೂಲಕ, ಮಾರ್ಕ್ಸ್, ಫಿಡೆಲ್ ಕ್ಯಾಸ್ಟ್ರೊ, ಮಂಡೇಲಾರವರ ಆದರ್ಶಗಳೊಂದಿಗೆ ಆರಂಭವಾಗಿತ್ತು. ತನ್ನೊಳಗೆ ಅಂತರ್ಗತವಾಗಿದ್ದ ಹಿಂಸಾಪ್ರವೃತ್ತಿಗಳಿಂದಾದ ಕಾನೂನಿನ ತೊಡಕಿನಿಂದ ಪಾರಾಗಲು ಈ ಸಂಸ್ಥೆ ನೇಪಥ್ಯಕ್ಕೆ ಸರಿಯಿತು. ನಂತರದ ದಿನಗಳಲ್ಲಿ ದಲಿತರ, ಬುಡಕಟ್ಟುಗಳ, ಮೂಲನಿವಾಸಿಗಳ ಸಾಮಾಜಿಕ ನ್ಯಾಯಕ್ಕಾಗಿ "ಗಾಂಧಿ ಮಾರ್ಗದ" ಮೂಲಕ ಹೋರಾಡುತ್ತೇವೆ ಎಂದು ಈ ಸಂಘಟನೆ 'ಕೊಡಗು ರಾಜ್ಯ ಮುಕ್ತ ಮೋರ್ಚಾ' ಎಂಬ ಹೆಸರಿನಿಂದ ಕೆಲಸ ನಿರ್ವಹಿಸಲು ಆರಂಭಿಸಿತು. ಆದರೆ, ಕೊಡಗಿನ ಜನಸಂಖ್ಯೆಯಲ್ಲಿ ಸುಮಾರು ಶೇ. ೧೫ರಷ್ಟಿರುವ ಮೇಲ್ಜಾತಿಯ ಕೊಡವರ ಹಿತಾಸಕ್ತಿಗಳನ್ನು ಮಾತ್ರ ಈ ಸಂಘಟನೆ ಪ್ರತಿನಿಧಿಸುತ್ತದೆ ಎಂಬ ಕಾರಣಕ್ಕಾಗಿ ಉಳಿದ ಕೊಡಗು ಭಾಷಿಕ ಸಮುದಾಯಗಳು, ಹಿಂದುಳಿದ ಜಾತಿಗಳು, ದಲಿತರು, ಅಲ್ಪಸಂಖ್ಯಾತರು, ಕೊಡವರಲ್ಲಿನ ಸಂವೇದನಾಶೀಲರು ಈ ಸಂಘಟನೆಯನ್ನು ಉಗ್ರವಾಗಿ ವಿರೋಧಿಸಿದರು. ಪರಿಣಾಮವಾಗಿ ಈ ಮೋರ್ಚಾವೂ ಮುಚ್ಚಿಹೋಯಿತು. ಇಂತಹ ಸಂದರ್ಭದಲ್ಲಿ "ಕೊಡವರು" ಎನ್ನುವ ಜಾತಿಯ ಹಿತಾಸಕ್ತಿಗಾಗಿ ಮಾತ್ರ ಹುಟ್ಟಿಕೊಂಡ ಜಾತಿ ಸಂಘಟನೆಯೇ ಕೂರ್ಗ್ ನ್ಯಾಷನಲ್ ಕೌನ್ಸಿಲ್ (ಸಿಎನ್‌ಸಿ). ಜಗತ್ತಿನಲ್ಲಿ "ನಶಿಸಿಹೋಗುತ್ತಿರುವ ಕೊಡವ ಜನಾಂಗದವರಿಗೆ ಬುಡಕಟ್ಟು ಮೀಸಲಾತಿ, ಪಾರ್ಲಿಮೆಂಟ್‌ನಲ್ಲಿ ಸದಸ್ಯತ್ವ, ಕೊಡವ ವಿಶ್ವವಿದ್ಯಾಲಯ, ಕೊಡವರಿಗೆ ಸ್ವಾಯತ್ತ ರಾಜ್ಯ... ಇತ್ಯಾದಿಗಳನ್ನು ಕೊಡಿಸುವ ಕಾರ್ಯಕ್ರಮವಿರುವ ಸಂಘಟನೆ ಇದು. ತಾನು ಹಿಂದೆ ಹೇಳುತ್ತಿದ್ದ "ಗಾಂಧಿ ಆದರ್ಶಗಳನ್ನು" ಕೈಬಿಟ್ಟು ಭಾವನಾತ್ಮಕ ವಿಚಾರಗಳನ್ನು ಪ್ರಚೋದಿಸಲು ಆರಂಭಿಸಿದೆ. ದ್ವೇಷ, ಹಗೆತನದ ರಾಜಕಾರಣದಿಂದ ಜಾತಿ ಸಂಘಟನೆಯೊಂದು ಲಾಭಗಳಿಸಬಹುದೆಂಬ ಲೆಕ್ಕಾಚಾರದಿಂದ ಇಲ್ಲಿಯವರೆಗೂ ಪ್ರಸ್ತಾಪಿಸದೆ ಇದ್ದ ಟಿಪ್ಪು ಎಂಬ ಚಾರಿತ್ರಿಕ ವ್ಯಕ್ತಿಯನ್ನು ಖಳನಂತೆ ಬಿಂಬಿಸುತ್ತಾ ಆ ಮೂಲಕ ಕೇಂದ್ರದಲ್ಲಿ ಅಧಿಕಾರದಲ್ಲಿರುವ ಬಿಜೆಪಿಯನ್ನು ಓಲೈಸಲು ಆರಂಭಿಸಿದೆ. ಇದರ ಪ್ರತೀಕವೆಂಬಂತೆ ಬಿಜೆಪಿಯ ರಾಜ್ಯಸಭಾ ಸದಸ್ಯ ಡಾ॥ ಸುಬ್ರಮಣ್ಯಸ್ವಾಮಿ ಅವರು ನವೆಂಬರ್ ೨೬ರಂದು ಮಡಿಕೇರಿಯಲ್ಲಿ ನಡೆದ ಸಿಎನ್‌ಸಿಯ ಅಧಿವೇಶನದಲ್ಲಿ ಪಾಲ್ಗೊಂಡು ಆ ಸಂಘಟನೆಯ ಎಲ್ಲ ಬೇಡಿಕೆಗಳನ್ನು ಈಡೇರಿಸಲು ಕೇಂದ್ರ ಸರ್ಕಾರವನ್ನು ಕೋರುತ್ತೇನೆಂದರು.

ಸಿಎನ್‌ಸಿಯ ಮನವಿಗೆ ಸ್ಪಂದಿಸಿ, "ಕೊಡವರ ಜನಾಂಗೀಯ" ಬೇಡಿಕೆಗಳಿಗಾಗಿ ಕಾಂಗ್ರೆಸ್‌ನ ರಾಜ್ಯಸಭಾ ಸದಸ್ಯರಾದ ಬಿ. ಕೆ. ಹರಿಪ್ರಸಾದ್ ಅವರು ಕೆಲವು ತಿಂಗಳ ಹಿಂದೆ ರಾಜ್ಯಸಭೆಯಲ್ಲಿ ಭಾಷಣ ಮಾಡಿದ್ದು ಮತ್ತು ಅದಕ್ಕೆ ಸಿಎನ್‌ಸಿಯು ಕೃತಜ್ಞತೆ ಹೇಳಿದ್ದು ಪ್ರತ್ಯೇಕ ವಿಚಾರ. ನೂರಾರು ವರ್ಷಗಳಿಂದ ಕಾಫಿ ಪ್ಲ್ಯಾಂಟೇಶನ್, ಅಧಿಕಾರಶಾಹಿಗಳಲ್ಲಿ ಕಾರ್ಪೊರೇಟ್‌ಗಳಲ್ಲಿ ಪ್ರಬಲರಾಗಿರುವ ಕೊಡವ ಸಮುದಾಯದವರಿಗೆ ಬುಡಕಟ್ಟು ಮೀಸಲಾತಿ ನೀಡಬೇಕೆಂದು ಕೊಡಗಿನ ಬಿಜೆಪಿ ಶಾಸಕರೊಂದಿಗೆ ಮುಖ್ಯಮಂತ್ರಿಗಳ ಕಾನೂನು ಸಲಹೆಗಾರರಾಗಿದ್ದವರೊಬ್ಬರು ಒತ್ತಾಯಿಸಿದ್ದಾರೆ. ಕೊಡಗಿನ ಜನಸಂಖ್ಯೆಯ ಶೇ. ೨೨ರಷ್ಟಿರುವ ದಲಿತ–ಬುಡಕಟ್ಟುಗಳ ದಿಡ್ಡಳ್ಳಿ ರೀತಿಯ ಸಮಸ್ಯೆಗೆ ಪ್ರಜ್ಞಾವಂತರು ಸ್ಪಂದಿಸಿದರೆ ಅವರನ್ನು ಸಿಎನ್‌ಸಿಯು ನಕ್ಸಲೈಟ್ ಎಂದು ಜರೆದಿದ್ದನ್ನು ನೋಡಬಹುದು. ಕಾಂಗ್ರೆಸ್ ಸರ್ಕಾರ ಕೊಡಗಿನ ಉಸ್ತುವಾರಿಗೆಂದು ನೇಮಿಸಿರುವ ಕಾಂಗ್ರೆಸ್ ಸರ್ಕಾರದ ಉಸ್ತುವಾರಿ ಮಂತ್ರಿ ಕೂಡ ದಿಡ್ಡಳ್ಳಿ ಗಿರಿಜನರ ಪರ ಧ್ವನಿ ಎತ್ತಿದವರು ನಕ್ಸಲೈಟರು ಎಂಬ ವಾದವನ್ನು ಸಮರ್ಥಿಸಿಕೊಂಡಿದ್ದಾರೆ. ಈ ಬಗೆಯ ಪ್ರಭಾವವಿರುವ ಸಿಎನ್‌ಸಿ ಸಂಘಟನೆ ಹೇಳುತ್ತಿರುವ ನರಮೇಧಕ್ಕೆ ಸಂಬಂಧಿಸಿದಂತೆ ಕುತೂಹಲಕ್ಕಾಗಿ ಚಾರಿತ್ರಿಕ ದಾಖಲೆಗಳನ್ನು, ಗ್ರಂಥಗಳನ್ನು ಗಮನಿಸಿದರೆ ಸಿಗುವ ಅಂಶವೇ ಬೇರೆ.

ಸರ್ಕಾರವು ಟಿಪ್ಪು ಜನ್ಮಾಚರಣೆಯನ್ನು ಘೋಷಿಸುವವರೆಗೂ ಟಿಪ್ಪು "೬೦,೦೦೦ ಕೊಡವರನ್ನು" ನರಮೇಧ ಮಾಡಿದ ವಿಚಾರವಾಗಲಿ, ಕೊಡವ ಹೆಂಗಸರ ಮೇಲೆ "ಅತ್ಯಾಚಾರ" ಮಾಡಿದ "ಘಟನೆಯಾಗಲಿ" ಯಾರಿಗೂ ಗೊತ್ತಿರಲಿಲ್ಲ. ಟಿಪ್ಪುವಿನ ಹೆಸರಿನಲ್ಲಿ ತನ್ನ ಉಜ್ವಲ ಭವಿಷ್ಯ ಕಂಡುಕೊಂಡ ಸಿಎನ್‌ಸಿಯು ಅಪ್ರತಿಮ ಸುಳ್ಳುಗಳನ್ನು ವಾಚಾಮಗೋಚರವಾಗಿ "ಮಾಧ್ಯಮಗಳ" ಮೂಲಕ ಸತ್ಯ ಮಾಡಲು ಪ್ರಯತ್ನಿಸಿತು. ಟಿಪ್ಪುವಿನ ಆಜನ್ಮ ಶತ್ರುವಾಗಿದ್ದ ಕೊಡಗಿನ ಅರಸ ವೀರರಾಜೇಂದ್ರನು ರಚಿಸಿದ ರಾಜೇಂದ್ರ ನಾಮೆಯಲ್ಲಾಗಲಿ

ಸರ್ಕಾರವು ಟಿಪ್ಪು ಜನ್ಮಾಚರಣೆಯನ್ನು ಘೋಷಿಸುವವರೆಗೂ ಟಿಪ್ಪು "೬೦,೦೦೦ ಕೊಡವರನ್ನು" ನರಮೇಧ ಮಾಡಿದ ವಿಚಾರವಾಗಲಿ, ಕೊಡವ ಹೆಂಗಸರ ಮೇಲೆ "ಅತ್ಯಾಚಾರ" ಮಾಡಿದ "ಘಟನೆಯಾಗಲಿ" ಯಾರಿಗೂ ಗೊತ್ತಿರಲಿಲ್ಲ. ಟಿಪ್ಪುವಿನ ಹೆಸರಿನಲ್ಲಿ ತನ್ನ ಉಜ್ವಲ ಭವಿಷ್ಯ ಕಂಡುಕೊಂಡ ಸಿಎನ್‌ಸಿಯು ಅಪ್ರತಿಮ ಸುಳ್ಳುಗಳನ್ನು ವಾಚಾಮಗೋಚರವಾಗಿ "ಮಾಧ್ಯಮಗಳ" ಮೂಲಕ ಸತ್ಯ ಮಾಡಲು ಪ್ರಯತ್ನಿಸಿತು.



## ಅಭಿನಂದನೆ...

ಮೂಡುಬಿದರೆಯ ಶಿವರಾಮ ಕಾರಂತ ಪ್ರತಿಷ್ಠಾನವು ನೀಡುವ 'ಶಿವರಾಮ ಕಾರಂತ ಪುರಸ್ಕಾರ'ವು ಖ್ಯಾತ ಚಿಂತನಾಶೀಲ ಲೇಖಕರಾದ ಶ್ರೀ ಕಂನಾಡಿಗಾ ನಾರಾಯಣ ಅವರ 'ದ್ವಾಪರ' (ನವಕರ್ನಾಟಕ ಪ್ರಕಾಶನ) ಕೃತಿಗೆ ಲಭಿಸಿದೆ. ಕಂನಾಡಿಗಾ ನಾರಾಯಣ ಅವರಿಗೆ 'ನವಕರ್ನಾಟಕ' ಹಾಗೂ 'ಹೊಸತು' ಬಳಗದ ಅಭಿನಂದನೆಗಳು.

---

(೧೮೦೯), ಟಿಪ್ಪುವನ್ನು ಉಗ್ರವಾಗಿ ಗೇಲಿ ಮಾಡುತ್ತಿದ್ದ ೧೮–೧೯ನೆಯ ಶತಮಾನದ ಬ್ರಿಟಿಷ್ ಬರಹಗಾರರಾಗಲಿ, ಮಿಶನರಿಗಳಿಗಾಗಲಿ ಕಾಣದ, ವೃತ್ತಿಪರ ಚರಿತ್ರೆಕಾರರಿಗಾಗಲಿ ಕಾಣದ, ಅಷ್ಟೇಕೆ ಟಿಪ್ಪುವಿನ ಚಾರಿತ್ರ್ಯಹರಣವನ್ನು ಮಾಡುವ ಹಾಗೂ ಕೊಡಗಿನಲ್ಲಿ ಅವನು ಮಾಡಿದ ಮತಾಂತರ ಕಾರ್ಯವನ್ನು ವಿಜೃಂಭಿಸುವ ಉದ್ದೇಶದಿಂದ ಐ. ಎಂ. ಮುತ್ತಣ್ಣ ಅವರು ರಚಿಸಿದ ಟಿಪ್ಪು ಎಕ್ಸ್‌ರೇಡ್ (೧೯೮೦) ಎನ್ನುವ ಕೃತಿಯಲ್ಲಾಗಲಿ (ಹಿಂದೂ ದೇವಾಲಯಗಳನ್ನು ಭಗ್ನಗೊಳಿಸಿ ಮುಸ್ಲಿಮರ ಬಹುತೇಕ ಮಸೀದಿಗಳನ್ನು ಕಟ್ಟಲಾಯಿತೆಂದು ತೀವ್ರವಾಗಿ ಪ್ರತಿಪಾದಿಸುತ್ತಿದ್ದ ಪಿ. ಎನ್. ಓಕ್ ಅವರು ಈ ಕೃತಿಗೆ ಮುನ್ನುಡಿ ಬರೆದಿದ್ದರು), ಎಂ. ಚಿದಾನಂದ ಮೂರ್ತಿಯಂತಹ ವಿದ್ವಾಂಸರಿಗಾಗಲಿ ಕಾಣದ ವಿಕೃತ ಸಂಶೋಧನೆಯನ್ನು ಸಿಎನ್‌ಸಿ ಮಾಡಿದೆ. ಮೌಖಿಕ ಆಕರಗಳನ್ನೇ ಪ್ರಧಾನವನ್ನಾಗಿಟ್ಟುಕೊಂಡು ಕೊಡಗು ಮತ್ತು ಕನ್ನಡ ಭಾಷೆಯಲ್ಲಿ ಚರಿತ್ರೆ, ಜನಪರರನ್ನು ದಾಖಲಿಸಲು ಯತ್ನಿಸಿದ, ಟಿಪ್ಪುವಿನ ಬಗ್ಗೆ ನೇತ್ಯಾತ್ಮಕವಾದ ಪೂರ್ವಗ್ರಹಗಳನ್ನಿಟ್ಟುಕೊಂಡಿದ್ದ ನಡಿಕೇರಿಯಂಡ ಚಿಣ್ಣಪ್ಪನವರ ಪಟ್ಟೋಲೆ ಪಳಮೆಯಲ್ಲಿ (೧೯೨೪) ಕೂಡ "ನರಮೇಧ–ಅತ್ಯಾಚಾರ ಘಟನೆಗಳು" ದಾಖಲಾಗಿಲ್ಲ.

ಭಾಗಮಂಡಲದ ಬಳಿಯಿರುವ ದೇವಟ್ಟಿಪರಂಬು ಎಂಬ ಪ್ರದೇಶದಲ್ಲಿ ಮತಾಂತರ ಮಾಡಲಾಗಿದೆ ಎಂದು ಚಾರಿತ್ರಿಕ ದಾಖಲೆಗಳು ತಿಳಿಸುತ್ತವೆ. ವಸ್ತುಸ್ಥಿತಿ ಹೀಗಿದ್ದರೂ ಸಿಎನ್‌ಸಿಯು ದೇವಟ್ಟಿಪರಂಬು ಎಂಬ ಪ್ರದೇಶವನ್ನು ಭಾಗಮಂಡಲದ ಬಳಿಯಿರುವ ಮೀಸಲು ಅರಣ್ಯದಲ್ಲಿ ತಪ್ಪಾಗಿ ಗುರುತಿಸಿ, ಟಿಪ್ಪುವಿನಿಂದ "ಹತರಾದ" "ಕೊಡವರ" ನೆನಪಿಗೆ "ವಾರ್ ಮೆಮೋರಿಯಲ್" ಒಂದನ್ನು ಅತಿಕ್ರಮವಾಗಿ ಸ್ಥಾಪಿಸಿತು. ಅಲ್ಲಿಯವರೆಗೆ "ಹಿಂದುಗಳನ್ನು" ಮಾತ್ರ ಮತಾಂತರ ಮಾಡಲಾಯಿತು ಎನ್ನುವ ವಾದಕ್ಕಿಂತ ಭಿನ್ನವಾಗಿ "ಕೊಡವರನ್ನು" ಮಾತ್ರ ಮತಾಂತರಿಸಲಾಯಿತು ಎನ್ನುವ ವಾದ ಕೇಳಿ ಬಿಜೆಪಿ ಮುಂತಾದ ಬಲಪಂಥೀಯ ಸಂಘಟನೆಗಳು ಬೆರಗಾದವು, ಬೆದರಿದವು. ಕೊಡವರಿಗಿಂತ ಹೆಚ್ಚಿನ ಜನಸಂಖ್ಯೆಯಿರುವ ಕೊಡಗಿನ ಅರೆಭಾಷಿಕ ಗೌಡರು ತಮ್ಮ ತಮ್ಮ ಜಾತಿಗಳ ಜನರು ಮತಾಂತರಕ್ಕೆ ಒಳಗಾದದ್ದನ್ನು ಹೇಳಲಾರಂಭಿಸಿದರು. ಅವರ ಪ್ರಕಾರ, ಟಿಪ್ಪುವು ಕೇವಲ "ಕೊಡವರನ್ನು" ಮತಾಂತರಿಸಿದ್ದು ಎನ್ನುವ ವಿಚಾರ ಸತ್ಯಕ್ಕೆ ದೂರ. ನಂತರದ ಬೆಳವಣಿಗೆಯಲ್ಲಿ ಮೀಸಲು ಅರಣ್ಯದಲ್ಲಿ ನರಮೇಧಕ್ಕೆ ಒಳಗಾದ ವೀರರ ನೆನಪಿಗಿಟ್ಟಿದ್ದ "ವಾರ್ ಮೆಮೊರಿಯಲ್‌ಗಳನ್ನು" ಸಿಎನ್‌ಸಿಯ ವಿರೋಧಿಗಳು ನೆಲಕ್ಕುರುಳಿಸಿದ್ದಾರೆ ಎಂದು ಸಿಎನ್‌ಸಿಯು ಸರ್ಕಾರಕ್ಕೆ ದೂರು ನೀಡಿತು. ಮೀಸಲು ಅರಣ್ಯದಲ್ಲಿ ಅನಧಿಕೃತ ವಾರ್ ಮೆಮೊರಿಯಲ್‌ಗಳನ್ನು ಅಕ್ರಮವಾಗಿ ನೆಟ್ಟವರನ್ನು ಬಿಟ್ಟು, ಅವುಗಳನ್ನು ನೆಲಕ್ಕೆ ಉರುಳಿಸಿದ ಆರೋಪಿಗಳನ್ನು ಹಿಡಿಯಲು ಜಿಲ್ಲಾಡಳಿತವು ಕ್ರಮ ಕೈಗೊಂಡಿರುವುದು ಅಧ್ಯಯನಯೋಗ್ಯವಾದುದು. ಈ ಎಲ್ಲ ವಿವರಗಳನ್ನು ಸಿಎನ್‌ಸಿಯು ನರೇಂದ್ರ ಮೋದಿ ಅವರ ಸರ್ಕಾರಕ್ಕೆ, "ವಿಶ್ವಸಂಸ್ಥೆಗೆ" ವಿವರಿಸಿ ಕೊಡವರ ನರಮೇಧಕ್ಕೆ ಕಾರಣನಾದ ಟಿಪ್ಪುವಿನ ಜೊತೆ ಕೈಜೋಡಿಸಿದ್ದಕ್ಕೆ ಈಗಿನ ಫ್ರೆಂಚ್ ಸರ್ಕಾರವು ಕೊಡವರ ಕ್ಷಮೆ ಕೋರಬೇಕೆಂದು ಆಗ್ರಹಿಸಿತು. ಇವರನ್ನು ವಿರೋಧಿಸಿದವರೆಲ್ಲರನ್ನೂ "ನಕ್ಸಲರೆಂದು" ಕರೆದು ಅವರ ವಿರುದ್ಧ ತೀವ್ರವಾದ ಕ್ರಮ ಕೈಗೊಳ್ಳಲು ಕೇಂದ್ರ ಸರ್ಕಾರಕ್ಕೆ ಹಾಗೂ ವಿಶ್ವಸಂಸ್ಥೆಗೆ ಮನದಟ್ಟುಮಾಡಲು ಯತ್ನಿಸಿತು.




ಸೆಕ್ಯುಲರ್ ಪಕ್ಷವೆಂದು ದಲಿತ ಹಿಂದುಳಿದವರ ಧ್ವನಿಯಾಗಿ ಗುರುತಿಸಿಕೊಂಡಿರುವ ಕಾಂಗ್ರೆಸ್ ಪಕ್ಷದಲ್ಲಿ ಕೊಡವ ಮೂಲ ಹೊಂದಿರುವ ಎ.ಐ.ಸಿ.ಸಿ.ಯ ಮಾಧ್ಯಮ ವಕ್ತಾರರೊಬ್ಬರು (ಇವರು ಮುಖ್ಯಮಂತ್ರಿಗಳ ಕಾನೂನು ಸಲಹೆಗಾರರೂ ಆಗಿದ್ದವರು), ಕಾಂಗ್ರೆಸ್ ಪಕ್ಷದಿಂದ ವಿಧಾನಪರಿಷತ್‌ಗೆ ಆಯ್ಕೆಯಾದ ಕೊಡವ ಮೂಲದ ಮಹಿಳಾ ಪ್ರತಿನಿಧಿಯೊಬ್ಬರು ೨೦೧೬ರಲ್ಲಿ ಸಿಎನ್‌ಸಿಯ ಅಧಿಕೃತ ಕಾರ್ಯಕ್ರಮಗಳಲ್ಲಿ ಪಾಲ್ಗೊಂಡು ಮೂಲಭೂತವಾದಿ ಸಿಎನ್‌ಸಿಯನ್ನು ಹರಸಿ, ಬೆಂಬಲಿಸಿದ್ದನ್ನು ನೋಡಿದರೆ ಭಾರತದ ಬಹುಮುಖ್ಯ ಸೆಕ್ಯುಲರ್ ಪಕ್ಷವೆಂದು ಕರೆದುಕೊಳ್ಳುತ್ತಿರುವ ಕಾಂಗ್ರೆಸ್‌ನ ನಡವಳಿಕೆ ಬಗ್ಗೆ ಗುಮಾನಿ ಬರುತ್ತದೆ. ಕಾಂಗ್ರೆಸ್ ಪಕ್ಷದ ಉನ್ನತ ಸ್ಥಾನಗಳಲ್ಲಿರುವ ಇವರುಗಳು ತಮ್ಮದೇ ಆದ ಕಾಂಗ್ರೆಸ್ ಸರ್ಕಾರವು ಆದೇಶಿಸಿದ ಟಿಪ್ಪು ದಿನಾಚರಣೆಯನ್ನು ಅವಹೇಳನಕಾರಿ ಭಾಷೆಯಲ್ಲಿ ಗೇಲಿ ಮಾಡಿ, ಸಾಮಾಜಿಕ ಅಂತರ್ಜಾಲದಲ್ಲಿ ದ್ವೇಷ ಹರಡಿ ಜನಾಂಗೀಯ ವಾದವನ್ನು ಸಮರ್ಥಿಸಿಕೊಳ್ಳುತ್ತಿರುವ ಸಿಎನ್‌ಸಿಯನ್ನು ಹೆಮ್ಮೆಯಿಂದ ಸಮರ್ಥಿಸಿಕೊಂಡಿರುವುದು ಕಂಡುಬಂದಿದೆ. ಹೀಗಾಗಿ ಕೊಡಗಿನಲ್ಲಿರುವ ಕಾಂಗ್ರೆಸ್ಸನ್ನು "ಕಮಲ ಕಾಂಗ್ರೆಸ್" ಎಂದು ಜನರು ಆಡಿಕೊಳ್ಳುವುದುಂಟು. ಸಮಸ್ತ ಹಿಂದುಗಳನ್ನು ಪ್ರತಿನಿಧಿಸುತ್ತಿದ್ದೇವೆ ಎಂದು ಜಂಭ ಕೊಚ್ಚುವ ಬಿಜೆಪಿ ನಾಯಕರು ಮೇಲ್ಜಾತಿ ಸಿಎನ್‌ಸಿಯ ಮುಖವಾಣಿಯಂತೆ ವರ್ತಿಸುತ್ತಿರುವುದು ಕಂಡುಬರುತ್ತದೆ. ಹೀಗೆ ಸೆಕ್ಯುಲರ್ ಕಾಂಗ್ರೆಸ್ ಮತ್ತು ಹಿಂದುವಾದಿ ಬಿಜೆಪಿ ನಾಯಕರು "ನರಮೇಧ–ಅತ್ಯಾಚಾರಗಳೆಂಬ" ಘಟನೆಗಳನ್ನು ತಮ್ಮ ಸ್ವಾರ್ಥಕ್ಕಾಗಿ ರಾಜಕೀಯಗೊಳಿಸಿದ್ದಾರೆ.

"೬೦,೦೦೦ಕ್ಕೂ ಹೆಚ್ಚಿನ ಕೊಡವರ ನರಮೇಧ ಮತ್ತು ಮಹಿಳೆಯರ ಅತ್ಯಾಚಾರ" ಎನ್ನುವ ವಿಕೃತಿಯ ಮೇಲೆ ನಡೆಯುತ್ತಿರುವ ಅನಾಗರಿಕ ಚಳವಳಿಯ ಪ್ರಲಾಪಗಳನ್ನು ಕಾಂಗ್ರೆಸ್‌ನ ಸೆಕ್ಯುಲರಿಸ್ಟ್‌ಗಳು, ಬಿಜೆಪಿಯ ಹಿಂದು ಲಿಬರಲ್‌ಗಳು, ತೀವ್ರ ಎಡವಾದಿ ಹಾಗೂ ಎಡವಾದಿ ಸೆಕ್ಯುಲರಿಸ್ಟ್‌ಗಳು ಹತಾಶೆಯಿಂದ ನೋಡುತ್ತಾ ಕೈಕಟ್ಟಿ ಕುಳಿತಿರುವುದನ್ನು ನೋಡಬಹುದು. ಕೇವಲ ಮತಾಂತರವನ್ನು ಮುಂದಿಟ್ಟುಕೊಂಡು ತಮ್ಮ ಸಿದ್ಧಾಂತವನ್ನು ಪ್ರತಿಪಾದಿಸುತ್ತಿದ್ದ ಬಿಜೆಪಿ ಮುಂತಾದ ಬಲಪಂಥೀಯರು ಕೂಡ "ನರಮೇಧ, ಅತ್ಯಾಚಾರ" ಎಂಬ ಅನಾಗರಿಕ ರಾಜಕಾರಣವನ್ನು ನೋಡಿ ದಂಗಾಗಿದ್ದರೂ ಜಾಣಮೌನ ತೋರಿಸಿದ್ದಾರೆ. "ಹಿಂದೂ" ಎನ್ನುವ ಕಡೆ "ಕೊಡವ" ಎಂದು ಸಮೀಕರಣಗೊಂಡ ವಿಚಾರ ಕೂಡ ಅವರಿಗೆ ತೀವ್ರವಾದ ಗೊಂದಲವನ್ನುಂಟುಮಾಡಿದೆ.

**ಡಾ॥ ವಿಜಯ್ ಪೂಣಚ್ಚ ತಂಬಂಡ**
ಪ್ರಾಧ್ಯಾಪಕರು, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ
ಹೊಸಪೇಟೆ – ೫೮೩ ೨೭೬, ಬಳ್ಳಾರಿ ಜಿಲ್ಲೆ






# ಭಾರತದಲ್ಲಿ ಸಿನೇಮಾ ಸೆನ್ಸಾರ್‌ಶಿಪ್

**ಖ್ಯಾತ** ನಿರ್ದೇಶಕ ಸಂಜಯ್ ಲೀಲಾ ಬನ್ಸಾಲಿಯವರ 'ಪದ್ಮಾವತಿ' ಚಿತ್ರ ಚಿತ್ರೀಕರಣ ಆರಂಭವಾದಾಗಿನಿಂದ ಒಂದಲ್ಲಾ ಒಂದು ವಿವಾದಕ್ಕೆ ಒಳಗಾಗುತ್ತಲೇ ಇದೆ. ರಜಪೂತ ರಾಣಿ ಪದ್ಮಿನಿಯನ್ನು ಕೆಟ್ಟದಾಗಿ ತೋರಿಸಲಾಗಿದೆ, ಇತಿಹಾಸವನ್ನು ತಿರುಚಲಾಗಿದೆ ಎಂದು ಭಜರಂಗದಳ, ಬಿಜೆಪಿ, ವಿಶ್ವ ಹಿಂದೂ ಪರಿಷತ್ ಹಾಗೂ ಕಾಂಗ್ರೆಸ್ ವಿರೋಧ ವ್ಯಕ್ತಪಡಿಸುತ್ತಿದೆ. ರಜಪೂತ ಸಮುದಾಯದವರು ಗುಜರಾತ್ ಮತ್ತು ರಾಜಸ್ಥಾನಗಳಲ್ಲಿ ಭಾರೀ ಪ್ರತಿಭಟನೆ ನಡೆಸುತ್ತಿದ್ದಾರೆ. ಶಾಹಿದ್ ಕಪೂರ್ ಹಾಗೂ ದೀಪಿಕಾ ಪಡುಕೋಣೆ ಅಭಿನಯದ ಈ ಸಿನೇಮಾ ಬಿಡುಗಡೆಗೆ ಮೊದಲೇ ಸಾಕಷ್ಟು ವಿರೋಧಗಳನ್ನು ಎದುರಿಸುತ್ತಿದೆ. ಇಂತಹ ವಿವಾದಕ್ಕೆ ಗುರಿಯಾದ ಸಿನೇಮಾ ಇದು ಮೊದಲಲ್ಲ. ಇದಕ್ಕೆ ಅನೇಕ ಉದಾಹರಣೆಗಳನ್ನು ನೀಡಬಹುದು.

ಸಿನೇಮಾ ಆರಂಭವಾದಾಗಿನಿಂದಲೇ ಒಂದು ವಿವಾದವಿತ್ತು. ಅದೇನೆಂದರೆ ಸಿನೇಮಾ ಪರದೆಯಲ್ಲಿ ಯಾವುದು ತೋರಿಸಲು ಸೂಕ್ತ ಮತ್ತು ಯಾವುದು ಸೂಕ್ತವಲ್ಲವೆಂಬುದು. ಚಲನಚಿತ್ರದ ವಿಷಯಗಳನ್ನು ನಿಯಂತ್ರಿಸಲು ಎರಡು ರೀತಿಯ ವಿಧಾನಗಳನ್ನು ಅನುಸರಿಸಲಾಗುತ್ತದೆ. ಮೊದಲನೆಯದು ಚಲನಚಿತ್ರ ಉದ್ಯಮದವರೇ ಹಾಕಿಕೊಳ್ಳುವ ಸ್ವನಿಯಂತ್ರಣ. ಅಮೆರಿಕಾದಲ್ಲಿ ಮಕ್ಕಳು ಮತ್ತು ಯುವಜನತೆಯ ಮೇಲೆ ಸಿನೇಮಾ ಪ್ರಭಾವದ ಕಡೆಗೆ ಪೋಷಕರ ಗಮನ ಸೆಳೆಯಲು ರೇಟಿಂಗ್ಸ್ ನೀಡಲಾಗುತ್ತದೆ. ಅಲ್ಲಿ ಸಿನೇಮಾಕ್ಕೆ ಯಾವುದೇ ಕತ್ತರಿ ಪ್ರಯೋಗ ಮಾಡ ಲಾಗುವುದಿಲ್ಲ. ಭಾರತದಲ್ಲೂ ಸರಕಾರಿ ಪೂರ್ವ ಪರಿಶೀಲನೆಯನ್ನು ರದ್ದುಮಾಡಿ ಸ್ವನಿಯಂತ್ರಣವನ್ನು ಪಾಲಿಸಬೇಕೆಂಬ ಒತ್ತಾಯವಿದೆ. ಅದಕ್ಕಾಗಿ ಸಿನೇಮಾಟೊಗ್ರಾಫ್ (ತಿದ್ದುಪಡಿ) ಮಸೂದೆ ೨೦೧೦ನ್ನು ತಯಾರಿಸಲಾಗಿದೆ. ಎರಡನೆಯದು ಸರಕಾರ ಮಾಡುವ ಪೂರ್ವಪರಿಶೀಲನೆ.

ಸಮೂಹ ಮಾಧ್ಯಮಗಳ ಮೇಲೆ ಮುಖ್ಯವಾಗಿ ಸಿನೇಮಾದ ಮೇಲೆ ಅನೇಕ ರೂಪಗಳಲ್ಲಿ ನೇರವಾಗಿ ಅಥವಾ ಪರೋಕ್ಷವಾಗಿ ಸೆನ್ಸಾರ್‌ಶಿಪ್ ಹೇರಲಾಗುತ್ತದೆ. ಮೊದಲನೆಯದಾಗಿ ಧಾರ್ಮಿಕ ಸಂಸ್ಥೆಗಳು ಮತ್ತು ಧಾರ್ಮಿಕ ಶಕ್ತಿಗಳು ಸೆನ್ಸಾರ್‌ಶಿಪ್ ಹೇರುತ್ತವೆ. ಧಾರ್ಮಿಕ ನಾಯಕರು ಜನರು, ಸಮುದಾಯ ಮತ್ತು ಮಾಧ್ಯಮಗಳ ಮೇಲೆ ನಿರ್ಬಂಧ ಹೇರುತ್ತವೆ. ಅದಕ್ಕಾಗಿ ಅನೇಕ ಪುಸ್ತಕಗಳು ಮತ್ತು ಸಿನೇಮಾಗಳು ನಿಷೇಧಿಸಲ್ಪಟ್ಟಿವೆ. ಉದಾಹರಣೆಗೆ ಸಲ್ಮಾನ್ ರಶ್ದಿ ಮತ್ತು ತಸ್ಲೀಮಾ ನಸ್ರಿನ್ ಅವರ ಪುಸ್ತಕಗಳು. ದೀಪಾ ಮೆಹ್ತಾ ಅವರ 'ವಾಟರ್' ಸಿನೇಮಾ ವಾರಣಾಸಿಯಲ್ಲಿ ಚಿತ್ರೀಕರಣ ನಡೆಯುವಾಗ ಗಲಾಟೆ ನಡೆದು ಚಿತ್ರೀಕರಣ ಸ್ಥಳ ಬದಲಾಯಿಸಬೇಕಾಯಿತು.

ಹಣಕಾಸು ಸಂಸ್ಥೆಗಳು ಮಾಧ್ಯಮಗಳನ್ನು ನಿಯಂತ್ರಿಸುತ್ತವೆ. ಉದಾಹರಣೆಗೆ ಜಾಹಿರಾತುದಾರರು. ಸಿನೇಮಾಗಳ ವಾಣಿಜ್ಯೀಕರಣದಿಂದಾಗಿ ಸಿನೇಮಾದಲ್ಲಿ ಶೋಷಣೆ ಮತ್ತು ಹಿಂಸೆ ಹೆಚ್ಚಾಗುತ್ತಿದೆ. ಸಾರ್ವಜನಿಕ ಅಭಿಪ್ರಾಯ ಕೂಡ ಮಾಧ್ಯಮಗಳನ್ನು ನಿಯಂತ್ರಿಸುತ್ತದೆ. ನಾವು ಸಾರ್ವಜನಿಕ ಅಭಿಪ್ರಾಯಕ್ಕೆ ವಿರುದ್ಧವಾಗಿ ಯಾವುದೇ ಚಲನಚಿತ್ರವನ್ನು ನಿರ್ಮಿಸಲು ಸಾಧ್ಯವಿಲ್ಲ. ಅದನ್ನು ಜರ್ಮನ್ ಚಿಂತಕ ಎಲಿಜಬೇತ್ ನೋಯೆಲ್ ನ್ಯೂಮನ್ 'ಮೌನ ಸುರುಳಿ' ಎಂದು ಕರೆದಿದ್ದಾರೆ. ದೇಶದ ಕಾನೂನುಗಳು ಕೂಡ ಸಿನೇಮಾಗಳನ್ನು ನಿಯಂತ್ರಿಸುತ್ತವೆ. ಉದಾಹರಣೆ ತುರ್ತುಪರಿಸ್ಥಿತಿ ಸಂದರ್ಭದಲ್ಲಿ ಅನೇಕ ಸಿನೇಮಾಗಳನ್ನು ನಿಷೇಧಿಸಲಾಯಿತು.

ಭಾರತದಲ್ಲಿ ಮುದ್ರಣ ಮತ್ತು ವಿದ್ಯುನ್ಮಾನ ಮಾಧ್ಯಮಗಳ ಮೇಲೆ ಯಾವುದೇ ರೀತಿಯ ಸೆನ್ಸಾರ್‌ಶಿಪ್ ಇಲ್ಲ. ಆದರೆ ಸಿನೇಮಾದ ಮೇಲೆ ಸೆನ್ಸಾರ್‌ಶಿಪ್ ಇದೆ. ಇದನ್ನು ಸುಪ್ರೀಂ ಕೋರ್ಟ್ ಕೂಡ ಸಮರ್ಥಿಸಿದೆ. ಅದರ ಪ್ರಕಾರ ಸಿನೇಮಾ ಸೆನ್ಸಾರ್‌ಶಿಪ್ ಅಗತ್ಯ. ಯಾಕೆಂದರೆ ಸಿನೇಮಾ ವಿಚಾರ ಮತ್ತು ಕ್ರಿಯೆಯನ್ನು ಪ್ರೇರೇಪಿಸುತ್ತದೆ ಮತ್ತು ಮುದ್ರಿತ ಪದಕ್ಕೆ ಹೋಲಿಸಿದರೆ ಹೆಚ್ಚು ಗಮನ ಮತ್ತು ಮನನದ ಭರವಸೆ ನೀಡುತ್ತದೆ. ಸಿನೇಮಾ ಮಂದಿರದ ಅರೆ ಕತ್ತಲಿನಲ್ಲಿ ಅಭಿನಯ ಮತ್ತು ಮಾತು, ದೃಶ್ಯ ಮತ್ತು ಧ್ವನಿಗಳ ಸಮ್ಮಿಲನದಲ್ಲಿ ಎಲ್ಲಾ ವಿಚಾರಗಳು ದೂರವಾಗಿ ವೀಕ್ಷಕರ ಮನಸ್ಸಿನ ಮೇಲೆ ಗಾಢವಾದ ಪರಿಣಾಮ ಬೀರುತ್ತದೆ ಮತ್ತು ಅವರ ಭಾವನೆಗಳ ಮೇಲೆ ಪರಿಣಾಮ ಬೀರುವ ಸಾಧ್ಯತೆ ಇದೆ. ಆದ್ದರಿಂದ ಅದು ಒಳ್ಳೆಯದನ್ನು ಮಾಡುವುದಷ್ಟೇ ಕೆಡುಕನ್ನೂ ಮಾಡಬಲ್ಲುದು ಮತ್ತು ಹಿಂಸೆ ಅಥವಾ ಕೆಟ್ಟ ನಡತೆಯನ್ನು ಪ್ರಚೋದಿಸುವ ಸಾಧ್ಯತೆಯೂ ಇದೆ. ಅದನ್ನು ಸಂವಹನದ ಇತರ ಮಾಧ್ಯಮಗಳಿಗೆ ಸಮಾನವಾಗಿ ಕಾಣಲು ಸಾಧ್ಯವಿಲ್ಲ. ಆದ್ದರಿಂದ ಪೂರ್ವ ನಿರ್ಬಂಧದೊಂದಿಗೆ ಸೆನ್ಸಾರ್‌ಶಿಪ್ ಹೇರುವುದು ಅಗತ್ಯದ ಜೊತೆಗೆ ಅನಿವಾರ್ಯ ಕೂಡ.

ಮೊದಲ ಸೆನ್ಸಾರ್‌ಶಿಪ್ ಕಾಯಿದೆ ಚಿಕಾಗೋ ನಗರದಲ್ಲಿ ೧೯೦೭ರಲ್ಲಿ ಜಾರಿಗೆ ಬಂದಿತು. ಇತರ ದೇಶಗಳು ಅದನ್ನು ಅನುಸರಿಸಿದವು. ೧೯೦೮ರಲ್ಲಿ ಬ್ರಿಟನ್‌ನಲ್ಲಿ ಸೆನ್ಸಾರ್‌ಶಿಪ್ ಜಾರಿಗೆ ಬಂತು. ಲೂಮಿಯರ್ ಸಹೋದರರು ೧೮೯೬ರ ಜುಲೈನಲ್ಲಿ ಮುಂಬಯಿಯ ವ್ಯಾಟ್ಸನ್ ಹೋಟೆಲ್‌ನಲ್ಲಿ ಸಿನೇಮಾ ಪ್ರದರ್ಶನ ಮಾಡುವುದರ ಮೂಲಕ ಭಾರತಕ್ಕೆ ಸಿನೇಮಾ ಪ್ರವೇಶ ಮಾಡಿತು. ಭಾರತದ ಮೊದಲ ಕಥಾಚಿತ್ರ 'ರಾಜಾ ಹರಿಶ್ಚಂದ್ರ'ವನ್ನು ೧೯೧೩ರಲ್ಲಿ ದಾದಾ ಸಾಹೇಬ್ ಫಾಲ್ಕೆ ನಿರ್ಮಿಸಿದರು. ಭಾರತೀಯ ಸಿನೇಮಾಟೊಗ್ರಾಫ್ ಕಾಯಿದೆ ಜಾರಿಗೆ ಬಂದಿರುವುದು ಮಾತ್ರ ೧೯೧೮ರಲ್ಲಿ. ಅದನ್ನು ೧೯೪೯ ಮತ್ತು ೧೯೫೨ರಲ್ಲಿ ತಿದ್ದುಪಡಿ ಮಾಡಲಾಯಿತು. ೧೯೫೨ರ ಸಿನೇಮಾಟೊಗ್ರಾಫ್ ಕಾಯಿದೆಯ ಮುಖ್ಯ ಉದ್ದೇಶ ಸಿನೇಮಾ ಮಂದಿರಗಳಿಗೆ ಪರವಾನಿಗೆ ನೀಡುವುದು ಮತ್ತು ಸಿನೇಮಾಗಳಿಗೆ ಪ್ರಮಾಣಪತ್ರ ನೀಡುವುದು. ಸಿನೇಮಾ ಸಾರ್ವಜನಿಕ ಪ್ರದರ್ಶನಕ್ಕೆ ಯೋಗ್ಯವೆಂದು ಪ್ರಮಾಣಪತ್ರ ನೀಡಿದ ಮೇಲೆ ಮಾತ್ರ ಸಿನೇಮಾದ ಪ್ರದರ್ಶನ ಮಾಡಲು ಅದು ಅವಕಾಶ ನೀಡಿತು. ಆದಾಗ್ಯೂ ದೇಶದ ಯಾವುದೇ ಪ್ರಾಂತ್ಯದಲ್ಲಿ ಜಿಲ್ಲಾಧಿಕಾರಿ ಅಥವಾ ಪೊಲೀಸ್ ಆಯುಕ್ತರು

**ಡಾ|| ಸತೀಶ್ ಕುಮಾರ್ ಅಂಡಿಂಜೆ**

ಸಿನೇಮಾ ಪ್ರದರ್ಶನವನ್ನು ಅಮಾನತು ಮಾಡಬಹುದು.

ಮೊದಲ ಕಾಯಿದೆಯಂತೆ ಮದ್ರಾಸ್, ಬಾಂಬೆ, ಕಲ್ಕತ್ತ, ಲಾಹೋರ್ ಮತ್ತು ರಂಗೂನ್ ನಗರಗಳಲ್ಲಿ ಪೊಲೀಸ್ ಮುಖ್ಯಸ್ಥರ ನೇತೃತ್ವದಲ್ಲಿ ಸೆನ್ಸಾರ್ ಮಂಡಳಿಗಳನ್ನು ನೇಮಿಸಲಾಯಿತು. ಪ್ರಾದೇಶಿಕ ಸೆನ್ಸಾರ್ ಮಂಡಳಿಗಳು ಸ್ವತಂತ್ರವಾಗಿದ್ದವು. ಮೊದಲ ಕಾಯಿದೆಯಂತೆ ಗಿಸ್ ಸಹೋದರಿಯರು ಅಭಿನಯಿಸಿರುವ ಆರ್ಫಾನ್ಸ್ ಆಫ್ ದಿ ಸ್ಟಾರ್ಮ್ ಸಿನೇಮಾದ ಕೆಲವು ದೃಶ್ಯಗಳನ್ನು ಕತ್ತರಿಸಲಾಯಿತು. ಸ್ವಾತಂತ್ರ್ಯ ಹೋರಾಟಕ್ಕೆ ಬೆಂಬಲ ನೀಡಿದೆ ಎಂಬ ಕಾರಣಕ್ಕೆ 'ಮಾಪಿಲ್ಲ' ಎಂಬ ತೆಲುಗು ಚಿತ್ರಕ್ಕೆ ಪ್ರಮಾಣಪತ್ರ ನೀಡಿರಲಿಲ್ಲ. ೧೯೩೪ರಲ್ಲಿ ಮಾಲಿಕರು ಮತ್ತು ಕಾರ್ಮಿಕರ ನಡುವಿನ ಸಂಘರ್ಷವನ್ನು ಬಿಂಬಿಸುವ 'ಮಿಲ್' ಸಿನೇಮಾಕ್ಕೂ ಪ್ರಮಾಣಪತ್ರ ನೀಡಿರಲಿಲ್ಲ.

ಆರಂಭದ ದಿನಗಳಲ್ಲಿ ಸೆನ್ಸಾರ್‌ಶಿಪ್ ಮಂಡಳಿಗಳು ನಗ್ನತೆ, ಭಾವೋದ್ರೇಕ ಅಥವಾ ಪ್ರಚೋದಕ ಪ್ರೇಮಿಸುವ ದೃಶ್ಯಗಳು, ಕುಡಿತದ ಮತ್ತಿನಲ್ಲಿರುವ ಮಹಿಳೆಯರು, ಬಿಳಿಯರನ್ನು ಕೆಟ್ಟದಾಗಿ ಬಿಂಬಿಸುವ ದೃಶ್ಯಗಳು, ಪಾಶ್ಚಾತ್ಯ ಮಹಿಳೆಯರು ಭಾರತೀಯ ಪುರುಷರ ಜೊತೆ ಹೊಂದಿರುವ ಆಕ್ರಮ ಸಂಬಂಧ ಮತ್ತು ರಾಜಕೀಯ ಚಟುವಟಿಕೆ ಅಥವಾ ಸಿದ್ಧಾಂತಕ್ಕೆ ಸಂಬಂಧಿಸಿದ ದೃಶ್ಯಗಳಿಗೆ ಕತ್ತರಿ ಪ್ರಯೋಗ ಮಾಡುತ್ತಿದ್ದವು. ೧೯೨೭ರ ಅಕ್ಟೋಬರ್‌ನಲ್ಲಿ ಟಿ. ರಂಗಾಚಾರ್ಯರ್ ಅಧ್ಯಕ್ಷತೆಯಲ್ಲಿ ಭಾರತೀಯ ಸಿನೇಮಾಟೊಗ್ರಾಫ್ ಸಮಿತಿಯನ್ನು ನೇಮಕ ಮಾಡಲಾಯಿತು. ಅದು ೧೯೨೮ರಲ್ಲಿ ಸಲ್ಲಿಸಿದ ವರದಿಯಲ್ಲಿ ಭಾರತದಲ್ಲಿ ಸೆನ್ಸಾರ್‌ಶಿಪ್ ಅತೀ ಅಗತ್ಯವೆಂದು ಪ್ರತಿಪಾದಿಸಿತು. ಸಿನೇಮಾದ ಆಮದು, ನಿರ್ಮಾಣ ಮತ್ತು ಸಾರ್ವಜನಿಕ ಪ್ರದರ್ಶನವನ್ನು ನಿಯಂತ್ರಿಸಲು ಅದು ಮಾತ್ರ ಪರಿಣಾಮಕಾರಿ ವಿಧಾನವಾಗಿದೆ. ಯಾಕೆಂದರೆ ಸಿನೇಮಾಗಳು ನೈತಿಕತೆಯನ್ನು ಕೆಡಿಸಬಹುದು, ಧಾರ್ಮಿಕ ನಂಬಿಕೆಗಳನ್ನು ನೋಯಿಸಬಹುದು ಅಥವಾ ಕೋಮು ಅಥವಾ ಜನಾಂಗೀಯ ಗಲಭೆಗಳನ್ನು ಸೃಷ್ಟಿಸಬಹುದು. ಆ ಸಮಿತಿ ಸೆನ್ಸಾರ್ ಮಂಡಳಿಗಳನ್ನು ಒಗ್ಗೂಡಿಸಲು ಶಿಫಾರಸ್ಸು ಮಾಡಿತು.

ಮಹಾಯುದ್ಧಗಳ ಅವಧಿಯಲ್ಲಿ ಸಿನೇಮಾಗಳ ಮೇಲೆ ಕಠಿಣವಾದ ಸೆನ್ಸಾರ್‌ಶಿಪ್ ಹೇರಲಾಯಿತು. ೧೯೪೯ರ ತಿದ್ದುಪಡಿಯಲ್ಲಿ ಸಿನೇಮಾ ಸೆನ್ಸಾರ್‌ಗಳ ಕೇಂದ್ರೀಯ ಮಂಡಳಿಯನ್ನು ನೇಮಕ ಮಾಡುವ ಅಧಿಕಾರವನ್ನು ಕೇಂದ್ರ ಸರಕಾರಕ್ಕೆ ನೀಡಲಾಯಿತು. ಪ್ರಾದೇಶಿಕ ಸೆನ್ಸಾರ್ ಮಂಡಳಿಗಳನ್ನು ರದ್ದು ಮಾಡಿ, ಅವುಗಳನ್ನು ಬಾಂಬೆ ಬೋರ್ಡ್ ಆಫ್ ಫಿಲ್ಮ್ ಸೆನ್ಸಾರ್ ಅಡಿ ತರಲಾಯಿತು. ೧೯೫೨ರಲ್ಲಿ ಹಿಂದಿನ ಕಾಯಿದೆಗಳನ್ನು ರದ್ದುಮಾಡಿ ಸಮಗ್ರವಾದ ಹೊಸ ಕಾಯಿದೆಯನ್ನು ಜುಲೈ ೨೮, ೧೯೫೨ರಲ್ಲಿ ಜಾರಿಗೆ ತರಲಾಯಿತು. ಈ ಕಾಯಿದೆಯಂತೆ ಸೆನ್ಸಾರ್ ಮಂಡಳಿಯನ್ನು ಮರು ರಚಿಸಿ ಸೆಂಟ್ರಲ್ ಬೋರ್ಡ್ ಆಫ್ ಫಿಲ್ಮ್ ಸೆನ್ಸಾರ್ ಎಂದು ಹೆಸರಿಸಲಾಯಿತು.

ರಾಜಕೀಯ ಪರಿಸ್ಥಿತಿ ಅಥವಾ ಕೋಮು ಗುಂಪುಗಳಿಗೆ ಸಂಬಂಧಿಸಿದ ದೃಶ್ಯಗಳಿಗೆ ಕತ್ತರಿ ಹಾಕುವ ಬ್ರಿಟೀಷರ ಕಠಿಣ ಸೆನ್ಸಾರ್‌ಶಿಪ್ ಸಂಪ್ರದಾಯವನ್ನೇ ಈ ಕಾಯಿದೆ ಕೂಡ ಮುಂದುವರಿಸಿತು. ಈ ಕಾಯಿದೆಯ ಮಾರ್ಗದರ್ಶನ ಸೂತ್ರಗಳನ್ನು ಅಮೆರಿಕಾದ ಹೇಸ್ ಕೋಡ್‌ನಿಂದ ಪೂರ್ಣವಾಗಿ ತೆಗೆದುಕೊಳ್ಳಲಾಗಿದೆ. ಅದರಲ್ಲಿ ಸಕಾರಣ ನಿರ್ಬಂಧಗಳಿವೆ. ಅವುಗಳನ್ನು ಉಲ್ಲಂಘಿಸುವ ಸಿನೇಮಾಗಳಿಗೆ ಪ್ರಮಾಣಪತ್ರ ನೀಡಲಾಗುವುದಿಲ್ಲ.

ಸಿನೇಮಾ ಸೆನ್ಸಾರ್‌ಶಿಪ್ ಬಗೆಗೆ ಮುಖ್ಯವಾಗಿ ಸಿನೇಮಾ ಪೂರ್ವಪರಿಶೀಲನೆ ಬಗೆಗೆ ಕೆ. ಎ. ಅಬ್ಬಾಸ್ ಅವರು ೧೯೬೮ರ ನವೆಂಬರ್‌ನಲ್ಲಿ ಸುಪ್ರೀಂ ಕೋರ್ಟಿನಲ್ಲಿ ಮೊಕದ್ದಮೆ ಹೂಡಿದರು. ಮುಂಬಯಿ, ಕೋಲ್ಕತ, ದೆಹಲಿ ಮತ್ತು ಚೆನ್ನೈ ಮಹಾನಗರಗಳಲ್ಲಿರುವ ಶ್ರೀಮಂತರು ಮತ್ತು ಬಡವರ ಜೀವನಶೈಲಿಯಲ್ಲಿರುವ ವಿರೋಧಾಭಾಸಗಳ ಬಗೆಗೆ ಕೆ. ಎ. ಅಬ್ಬಾಸ್ 'ಎ ಟೇಲ್ ಆಫ್ ಟು ಸಿಟೀಸ್' ಎಂಬ ಕಿರು ಚಿತ್ರ ನಿರ್ಮಿಸಿದ್ದರು. ಸೆನ್ಸಾರ್ ಮಂಡಳಿ ಅದಕ್ಕೆ 'ಯು' ಪ್ರಮಾಣಪತ್ರ ನೀಡಲು ನಿರಾಕರಿಸಿತು. ಕೇಂದ್ರ ಸರಕಾರಕ್ಕೆ ಮೇಲ್ಮನವಿ ಸಲ್ಲಿಸಿದ ಅವರು ತನ್ನ ಚಿತ್ರಕ್ಕೆ 'ಎ' ಪ್ರಮಾಣಪತ್ರ ನೀಡಲು ಅದರಲ್ಲಿ ಯಾವುದೇ ಅಶ್ಲೀಲ ದೃಶ್ಯಗಳಿಲ್ಲ ಎಂದು ಹೇಳಿದರು. ಅವರು ವೇಶ್ಯಾಗೃಹಗಳ ದೃಶ್ಯಗಳನ್ನು ತೆಗೆದು ಹಾಕಿದರೆ 'ಯು' ಪ್ರಮಾಣಪತ್ರ ನೀಡಲು ಸರಕಾರ ಒಪ್ಪಿತು. ಸರಕಾರದ ನಿರ್ಧಾರವನ್ನು ನಿರಾಕರಿಸಿದ ಅವರು ಸುಪ್ರೀಂ ಕೋರ್ಟಿನಲ್ಲಿ ಮೇಲ್ಮನವಿ ಸಲ್ಲಿಸಿ ತನಗೆ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ನಿರಾಕರಿಸಲಾಗಿದೆ ಎಂದು ವಾದಿಸಿದರು. ಈ ಪ್ರಕರಣದ ವಾದ ನಡೆಯುವ ಮೊದಲು ನ್ಯಾಯಾಧೀಶರು ಕಿರುಚಿತ್ರವನ್ನು ವೀಕ್ಷಿಸಿದರು. ಸರಕಾರಿ ವಕೀಲರು 'ಯು' ಪ್ರಮಾಣಪತ್ರ ನೀಡಲು ಒಪ್ಪಿಕೊಂಡರು.




ಅಬ್ಬಾಸ್ ಅವರು ತನ್ನ ಮನವಿಯನ್ನು ತಿದ್ದುಪಡಿ ಮಾಡಿ ನಾಲ್ಕು ಅಂಶಗಳನ್ನು ಸೇರಿಸಿದರು. ಅವುಗಳೆಂದರೆ ಮೊದಲನೆಯದು ಸಿನೇಮಾ ಸೆನ್ಸಾರ್‌ಶಿಪ್ ವಾಕ್ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯದ ಉಲ್ಲಂಘನೆಯಾಗಿದೆ. ಎರಡನೆಯದು ಅದು ಸಕಾರಣ ನಿರ್ಬಂಧವಾದರೂ ಅದನ್ನು ನಿರ್ದಿಷ್ಟ ತತ್ವಗಳೊಂದಿಗೆ ಬಳಸಬೇಕು. ಮೂರನೆಯದು ಅಧಿಕಾರಿಗಳು ನ್ಯಾಯಯುತ ಸಮಯದಲ್ಲಿ ತಮ್ಮ ನಿರ್ಧಾರ ತಿಳಿಸಬೇಕು. ನಾಲ್ಕನೆಯದಾಗಿ ಸೆನ್ಸಾರ್ ಮಂಡಳಿ ನಿರ್ಧಾರದ ವಿರುದ್ಧದ ಮೇಲ್ಮನವಿಯನ್ನು ಕೇಂದ್ರ ಸರಕಾರದ ಬದಲಾಗಿ ಒಂದು ಸ್ವತಂತ್ರ ಮೇಲ್ಮನವಿ ಮಂಡಳಿಗೆ ನೀಡಬೇಕು. ಕೊನೆಯ ಎರಡು ವಾದಗಳನ್ನು ಒಪ್ಪಿಕೊಂಡ ಸರಕಾರ ಅದಕ್ಕೆ ಸಂಬಂಧಿಸಿದ ಕಾನೂನು ಮಾಡುವುದಾಗಿ ಹೇಳಿತು. ಅದರಿಂದಾಗಿ ಪ್ರಕರಣವನ್ನು ಕೊನೆಗೊಳಿಸಲಾಯಿತು.

ಆ ಪ್ರಕರಣಕ್ಕೆ ಸಂಬಂಧಿಸಿದಂತೆ ಸೆಪ್ಟೆಂಬರ್ ೨೪, ೧೯೭೦ರಲ್ಲಿ ಸುಪ್ರೀಂ ಕೋರ್ಟ್ ನೀಡಿದ ತೀರ್ಪಿನಲ್ಲಿ 'ಚಲನಚಿತ್ರಗಳ ಪ್ರದರ್ಶನಕ್ಕೆ ಸಂಬಂಧಿಸಿದಂತೆ ಭಾರತದಲ್ಲಿ ಸಿನೇಮಾ ಸೆನ್ಸಾರ್‌ಶಿಪ್‌ಗೆ ಪೂರ್ಣ ಸಮರ್ಥನೆ ಇದೆ. ವಾಕ್ ಮತ್ತು ಅಭಿವ್ಯಕ್ತಿಯ ಇತರ ಪ್ರಕಾರಗಳನ್ನು ನಾವು ಸಾಮಾನ್ಯೀಕರಣಗೊಳಿಸಲು ಸಾಧ್ಯವಿಲ್ಲ. ಆ ರೀತಿಯ ಮೂಲಭೂತ ಹಕ್ಕಿಗೆ ಭಿನ್ನ ವಿಷಯ ಮತ್ತು ಮಹತ್ವವಿದೆ. ಸಮಾಜದ ಹಿತದೃಷ್ಟಿಯಿಂದ ಸೆನ್ಸಾರ್‌ಶಿಪ್ ಇದೆ' ಎಂದು ಹೇಳಿತು.

೧೯೬೮ರಲ್ಲಿ ಇಡೀ ಚಲನಚಿತ್ರ ಉದ್ಯಮದ ಬಗೆಗೆ ವರದಿ ನೀಡಲು ಖೋಸ್ಲಾ ಆಯೋಗವನ್ನು ನೇಮಿಸಲಾಯಿತು. ಆ ಆಯೋಗ ಯಾವುದೇ ಅಧಿಕೃತ ಸರಕಾರಿ ನಿಯಂತ್ರಣವಿಲ್ಲದ ಸ್ವಾಯತ್ತ ಸೆನ್ಸಾರ್ ಮಂಡಳಿಯನ್ನು ಸ್ಥಾಪಿಸಬೇಕು, ಚಲನಚಿತ್ರವನ್ನು ಒಟ್ಟಾಗಿ ಪರಿಶೀಲನೆ ಮಾಡಬೇಕು, ಚಲನಚಿತ್ರದ ನೀತಿಗೆ ಅತೀ ಅಗತ್ಯವಾದರೆ ಚುಂಬನ, ನಗ್ನತೆ ಮತ್ತು ಹಿಂಸಾ ದೃಶ್ಯಗಳಿಗೆ ಅವಕಾಶ ನೀಡಬೇಕೆಂದು ಶಿಫಾರಸ್ಸು ಮಾಡಿತು. ಕೇಂದ್ರ ಸರಕಾರ ಆಯೋಗದ ವರದಿಯನ್ನು ಒಪ್ಪಿಕೊಂಡಿತು. ಅದಕ್ಕನುಗುಣವಾಗಿ ೧೯೭೪ರಲ್ಲಿ ಲೋಕಸಭೆಯಲ್ಲಿ ಹೊಸ ಮಸೂದೆಯನ್ನು ಮಂಡಿಸಿತು. ಆದರೆ ತುರ್ತುಪರಿಸ್ಥಿತಿಯ ಹೇರಿಕೆ ಚಲನಚಿತ್ರಗಳ ಕಠಿಣ ನಿಯಂತ್ರಣಕ್ಕೆ ಕಾರಣವಾಯಿತು. ಹೊಸ ಮಾರ್ಗದರ್ಶನ ಸೂತ್ರಗಳು ಚಲನಚಿತ್ರದಲ್ಲಿ ಆರು ನಿಮಿಷಗಳಿಗಿಂತ ಹೆಚ್ಚಿನ ಹಿಂಸಾ ದೃಶ್ಯವನ್ನು ತಡೆದವು. ಆದಾಗ್ಯೂ ಶೋಲೇ ಚಿತ್ರಕ್ಕೆ ಸರಕಾರ ಪ್ರಮಾಣಪತ್ರ ನೀಡಿತು. 'ಕಿಸ್ಸಾ ಕುರ್ಸಿ ಕಾ'ದಂತಹ ರಾಜಕೀಯ ವಿಡಂಬನಾ ಚಿತ್ರಗಳನ್ನು ನಿಷೇಧಿಸಲಾಯಿತು.

ತುರ್ತುಪರಿಸ್ಥಿತಿಯ ನಂತರ ಅಸ್ತಿತ್ವಕ್ಕೆ ಬಂದ ಜನತಾ ಸರಕಾರ ರಾಷ್ಟ್ರೀಯ ಮಾಧ್ಯಮ ನೀತಿ ಕುರಿತು ಒಂದು ಕಾರ್ಯಕಾರಿ ಗುಂಪನ್ನು ನೇಮಕ ಮಾಡಿತು. ಅದು ಸರಕಾರಕ್ಕೆ ನೀಡಿದ ವರದಿಯಲ್ಲಿ ಸಿನೇಮಾ ಸೆನ್ಸಾರ್‌ಶಿಪ್‌ನ ಕಠಿಣ ನಿಲುವು ಮತ್ತು

ಮಾರ್ಗದರ್ಶನ ಸೂತ್ರಗಳನ್ನು ನೀಡುವುದನ್ನು ಟೀಕಿಸಿತು. ಸಿನೇಮಾ ಒಂದು ಸಾಹಿತ್ಯವಿದ್ದಂತೆ. ಅದು ಸಾಮಾಜಿಕ ಬದಲಾವಣೆಯ ತನ್ನ ಕಾರ್ಯವನ್ನು ನಿರ್ವಹಿಸಲು ಸಿನೇಮಾದಲ್ಲಿ ಸಾಮಾಜಿಕ ಮತ್ತು ರಾಜಕೀಯ ವಿಮರ್ಶೆಗೆ ಸ್ವಾತಂತ್ರ್ಯ ನೀಡಬೇಕು ಎಂದು ಅಭಿಪ್ರಾಯಪಟ್ಟಿತು. ಅದರ ಶಿಫಾರಸ್ಸುಗಳನ್ನು ಹೊಸ ಸರಕಾರ ಜಾರಿಗೆ ತರಲಿಲ್ಲ. ಸಿನೇಮಾಟೋಗ್ರಾಫ್ (ಪ್ರಮಾಣಪತ್ರ) ನಿಯಮಗಳನ್ನು ೧೯೮೩ರಲ್ಲಿ ಪರಿಷ್ಕರಿಸಿ ಜಾರಿಗೆ ತರಲಾಯಿತು. ಅದರ ಪ್ರಕಾರ ಸೆಂಟ್ರಲ್ ಬೋರ್ಡ್ ಆಫ್ ಫಿಲ್ಮ್ ಸೆನ್ಸಾರ್ಸ್‌ನ್ನು ಸೆಂಟ್ರಲ್ ಬೋರ್ಡ್ ಆಫ್ ಫಿಲ್ಮ್ ಸರ್ಟಿಫಿಕೇಷನ್ ಎಂದು ಬದಲಾಯಿಸಲಾಯಿತು. ಕಾಯಿದೆಯಲ್ಲಿರುವ ಅಂಶಗಳು ಮತ್ತು ಕೇಂದ್ರ ಸರಕಾರ ನೀಡುವ ಮಾರ್ಗದರ್ಶನ ಸೂತ್ರಗಳಿಗನುಗುಣವಾಗಿ ಮಂಡಳಿಯು ಸಿನೇಮಾದ ಪರಿಶೀಲನೆ ಮಾಡುತ್ತದೆ. ಪ್ರಸ್ತುತ ಕೇಂದ್ರ ವಾರ್ತಾ ಮತ್ತು ಪ್ರಸಾರ ಸಚಿವಾಲಯವು ಸಿನೇಮಾ ಸೆನ್ಸಾರ್‌ಶಿಪ್ ನಿರ್ದೇಶನಗಳನ್ನು ಸರಳ ಮತ್ತು ತಾರ್ಕಿಕಗೊಳಿಸಿದ್ದು ಡಿಸೆಂಬರ್ ೬, ೧೯೯೧ರಲ್ಲಿ ಹೊಸ ಮಾರ್ಗದರ್ಶನ ಸೂತ್ರಗಳನ್ನು ನೀಡಿದೆ.

ಸಿನೇಮಾದಲ್ಲಿ ಯಾವುದಾದರೂ ದೃಶ್ಯವನ್ನು ಕತ್ತರಿಸಬೇಕೆಂದು ಹೇಳುವಾಗ ಸಿಬಿಎಫ್‌ಸಿಯು ನಿರ್ದಿಷ್ಟ ಕಾರಣ ಮತ್ತು ನಿರ್ದಿಷ್ಟ ಮಾರ್ಗದರ್ಶನ ಸೂತ್ರವನ್ನು ತಿಳಿಸಬೇಕು. ಸಾರ್ವಜನಿಕ ಹಿತಾಸಕ್ತಿಯ ಹೊರತಾಗಿ ಸಿನೇಮಾದ ಯಾವುದೇ ಭಾಗವನ್ನು ಕತ್ತರಿಸಲು ಹೇಳಿದರೆ ಅದರಲ್ಲಿ ಯಾವುದೇ ರಹಸ್ಯವಿರುವುದಿಲ್ಲ. ಸಿಬಿಎಫ್‌ಸಿಯು ಪ್ರಮಾಣಪತ್ರಕ್ಕಾಗಿ ಬಂದ ಚಿತ್ರಗಳಿಗೆ ಯು, ಯುಎ, ಎ ಅಥವಾ ಎಸ್ ಪ್ರಮಾಣಪತ್ರ ನೀಡಬಹುದು. ಒಂದು ಚಿತ್ರವನ್ನು ನಿಷೇಧಿಸಬಹುದು ಅಥವಾ ಕೆಲವು ನಿರ್ದಿಷ್ಟ ದೃಶ್ಯ ಮತ್ತು ಧ್ವನಿಗಳನ್ನು ತೆಗೆಯದಿದ್ದರೆ ಪ್ರಮಾಣಪತ್ರ ನೀಡಲು ನಿರಾಕರಿಸಬಹುದು. ಕೆಲವು ದೃಶ್ಯಗಳನ್ನು ಕತ್ತರಿಸಿದರೆ 'ಎ' ಪ್ರಮಾಣಪತ್ರದ ಬದಲಾಗಿ ಯು ಪ್ರಮಾಣಪತ್ರ ನೀಡಬಹುದು. ಮಂಡಳಿಯಿಂದ ಪ್ರಮಾಣೀಕರಿಸಲ್ಪಟ್ಟ ಸಿನೇಮಾದ ಒಂದು ವಿಡಿಯೋ ಕ್ಯಾಸೆಟ್ಟನ್ನು ಮಂಡಳಿಗೆ ನೀಡಬೇಕು. ಕತ್ತರಿಸಿದ ಭಾಗವನ್ನು ಮತ್ತೆ ಸೇರಿಸಿ ಪ್ರದರ್ಶಿಸುವುದನ್ನು ತಡೆಯಲು ಇದೊಂದು ದಾರಿಯಾಗಿದೆ. ಯಾಕೆಂದರೆ ಕತ್ತರಿಸಿದ ಭಾಗವನ್ನು ಮತ್ತೆ ಸೇರಿಸಿ ಪ್ರದರ್ಶನ ಮಾಡುವುದು ಸುಲಭ. ಅಪರಾಧವನ್ನು ಪತ್ತೆಹಚ್ಚುವುದು ಕಷ್ಟ. ಚಿತ್ರಮಂದಿರದಿಂದ ಸೆನ್ಸಾರ್ ಆಗದ ಭಾಗವನ್ನು ಪತ್ತೆ ಹಚ್ಚಿ ಕೋರ್ಟ್ ಮುಂದೆ ಸಾಕ್ಷಿಯಾಗಿ ನೀಡಲು ಇದು ಉತ್ತಮ ಮಾರ್ಗ.

ಕೆಲವು ಸಂದರ್ಭಗಳಲ್ಲಿ ಪರಿಶೀಲನಾ ಸಮಿತಿ ಸದಸ್ಯರ ಮಧ್ಯೆ ಭಿನ್ನಾಭಿಪ್ರಾಯವಿರಬಹುದು ಅಥವಾ ನಿರ್ಮಾಪಕ ಮರುಪರಿಶೀಲನೆಗೆ ಕೋರಬಹುದು. ಆಗ ಮರುಪರಿಶೀಲನಾ ಸಮಿತಿ ಎರಡನೇ ಬಾರಿ ಸಿನೇಮಾ ವೀಕ್ಷಣೆ ಮಾಡಿ ಹೊಸ ಪ್ರಮಾಣಪತ್ರ ನೀಡುತ್ತದೆ. ಪ್ರಮಾಣ ಪತ್ರ ಹೊಂದಿದೆ ಎಂಬ ಮಾತ್ರಕ್ಕೆ ದೇಶದಾದ್ಯಂತ ಚಲನಚಿತ್ರದ ಪ್ರದರ್ಶನ




ಸುಸೂತ್ರವಾಗಿ ನಡೆಯುತ್ತದೆ ಎಂಬ ಗ್ಯಾರಂಟಿ ಇರುವುದಿಲ್ಲ. ಆ ಚಿತ್ರವನ್ನು ನಿಷೇಧಿಸಬೇಕೆಂದು ಉಚ್ಚ ನ್ಯಾಯಾಲಯಗಳಲ್ಲಿ ಪ್ರಕರಣ ದಾಖಲಿಸಬಹುದು. ಒತ್ತಡ ಗುಂಪುಗಳು ಒಂದು ಚಿತ್ರದ ಪ್ರದರ್ಶನವನ್ನು ನಿಷೇಧಿಸಬೇಕೆಂದು ಒತ್ತಾಯಿಸಬಹುದು. ಅವರು ಬಲಯುತವಾಗಿ ಸಿನೇಮಾ ಪ್ರದರ್ಶನವನ್ನು ತಡೆಯಬಹುದು ಅಥವಾ ನ್ಯಾಯಾಲಯದ ಮೆಟ್ಟಿಲು ಹತ್ತಬಹುದು.

ಕೊಹಿನೂರ್ ಅವರ 'ಭಕ್ತ ವಿದುರ್' ಸೆನ್ಸಾರ್‌ಶಿಪ್ ವಿವಾದದಿಂದ ನಿಷೇಧಿಸಲ್ಪಟ್ಟ ಮೊದಲ ಚಲನಚಿತ್ರವಾಗಿದೆ. ೧೯೨೧ರಲ್ಲಿ ಆ ಚಲನಚಿತ್ರವನ್ನು ಸಿಂದ್ ಮತ್ತು ಚೆನ್ನೈಗಳಲ್ಲಿ ನಿಷೇಧಿಸಲಾಗಿತ್ತು. ೧೯೫೯ರಲ್ಲಿ ಮೃಣಾಲ್ ಸೇನ್ ನಿರ್ದೇಶನದ 'ನೀಲ್ ಆಕಾಶೇರ್ ನೀಚೆ' ಎಂಬ ಬಂಗಾಳಿ ಭಾಷೆಯ ಚಿತ್ರವನ್ನು ಭಾರತ ಸರಕಾರ ಎರಡು ವರ್ಷಗಳ ಕಾಲ ನಿಷೇಧಿಸಿತ್ತು. ಅದರಲ್ಲಿ ೧೯೩೦ರ ದಶಕದಲ್ಲಿ ಕಲ್ಕತ್ತದಲ್ಲಿದ್ದ ವಲಸಿಗಳಾದ ಚೀನಿ ಕಾರ್ಮಿಕರ ಸಮಸ್ಯೆಯ ಚಿತ್ರಣವಿತ್ತು.

೧೯೬೩ರಲ್ಲಿ ಬಿಡುಗಡೆಯಾದ 'ನೈನ್ ಹವರ್ಸ್ ಟು ರಾಮ' ಎಂಬ ಚಿತ್ರವು ನಾಥುರಾಮ್ ಗೋಡ್ಸೆಯ ಮಾನಸಿಕ ಪ್ರೇರಣೆಗಳನ್ನು ಬಿಂಬಿಸುತ್ತದೆ ಎಂಬ ಕಾರಣಕ್ಕೆ ನಿಷೇಧಿಸಲಾಗಿತ್ತು. ಕುಡಿತ ಮತ್ತು ವೇಶ್ಯಾವಾಟಿಕೆಗಳ ದೃಶ್ಯಗಳಿವೆ ಎಂಬ ಕಾರಣಕ್ಕೆ ೧೯೭೦ರಲ್ಲಿ ಬಿಡುಗಡೆಯಾದ 'ಚೇತ್ನಾ' ಚಿತ್ರ ವಿವಾದಕ್ಕೊಳಗಾಗಿತ್ತು. ಆ ಚಿತ್ರದಲ್ಲಿ ನಟಿಸಿದ್ದ ರೆಹನಾ ಸುಲ್ತಾನ್‌ಗೆ ಆ ಚಿತ್ರ ಆಕೆಯ ಪ್ರತಿಷ್ಠೆ ಮತ್ತು ವೃತ್ತಿಗೆ ಶಾಶ್ವತ ಧಕ್ಕೆ ತಂದಿತ್ತು ಎಂದು ಆರೋಪಿಸಿದ್ದರು. ಇತ್ತೀಚಿನ ಚಿತ್ರ 'ಡರ್ಟಿ ಪಿಕ್ಚರ್' ಕೂಡಾ ಇದೇ ರೀತಿಯ ವಿವಾದಕ್ಕೊಳಗಾಗಿತ್ತು.

೧೯೭೫ರಲ್ಲಿ ಬಿಡುಗಡೆಯಾದ ಗುಲ್ಜಾರ್ ನಿರ್ದೇಶನದ 'ಆಂಧಿ' ಚಿತ್ರ ರಾಜಕೀಯ ವಿವಾದಕ್ಕೊಳಗಾದ ಮೊದಲ ಚಿತ್ರ. ಆ ಚಿತ್ರ ತನ್ನ ಜೀವನ ಆಧಾರಿತ ಎಂಬ ಗಾಳಿಸುದ್ದಿಯಿಂದ ಇಂದಿರಾ ಗಾಂಧಿ ನಿಷೇಧಿಸಿದ್ದರು. ಅದರಲ್ಲಿದ್ದ ಸುಚಿತ್ರಾ ಸೇನ್ ಪಾತ್ರ ಇಂದಿರಾ ಗಾಂಧಿಯನ್ನು ಹೋಲುತ್ತಿತ್ತು. ಕೆಲವು ಚಿತ್ರಮಂದಿರಗಳು ಇಂದಿರಾ ಗಾಂಧಿ ನೋಡಲು ಚಿತ್ರಮಂದಿರಕ್ಕೆ ಬನ್ನಿ ಎಂದು ಪ್ರಕಟಿಸಿದ್ದವು. ಇದರಿಂದಾಗಿ ೨೩ನೇ ವಾರದಲ್ಲಿ ಈ ಚಿತ್ರವನ್ನು ನಿಷೇಧಿಸಲಾಯಿತು. ಚಿತ್ರ ನಿರ್ಮಾಪಕರು ನಿಷೇಧವನ್ನು ತೆಗೆದು ಹಾಕಲು ಮಾಡಿದ ಪ್ರಯತ್ನಗಳು ಸಫಲವಾಗಲಿಲ್ಲ. ಅಲ್ಲದೆ ಚಿತ್ರದ ನಾಯಕಿ ಆರತಿ ತನಗೆ ಇಂದಿರಾ ಗಾಂಧಿ ಮಾದರಿ. ಆಕೆಯ ಹಾಗೆ ದೇಶ ಸೇವೆ ಮಾಡಬೇಕು ಎಂದು ಹೇಳುವ ದೃಶ್ಯವನ್ನು ಸೇರಿಸುವ ಮೂಲಕ ಅದು ಇಂದಿರಾ ಜೀವನಕ್ಕೆ ಸಂಬಂಧಿಸಿದ್ದಲ್ಲ ಎಂದು ಬಿಂಬಿಸುವ ಪ್ರಯತ್ನ ಮಾಡಿದರು. ೧೯೭೭ರ ಚುನಾವಣೆಯಲ್ಲಿ ಕಾಂಗ್ರೆಸ್ ಸೋತು ಜನತಾ ಸರಕಾರ ಅಧಿಕಾರಕ್ಕೆ ಬಂದ ನಂತರ ನಿಷೇಧವನ್ನು ಹಿಂತೆಗೆದುಕೊಳ್ಳಲಾಯಿತು.

೧೯೮೦ರಲ್ಲಿ ಬಿಡುಗಡೆಯಾದ 'ಇನ್ ಸಾಫ್ ಕಾ ತರಾಝು' ಚಿತ್ರದಲ್ಲಿ ೧೩ ವರ್ಷದ ಹುಡುಗಿಯ ಅತ್ಯಾಚಾರದ ಭಯಾನಕ ದೃಶ್ಯಗಳಿವೆ ಎಂಬ ಕಾರಣಕ್ಕೆ ವಿವಾದಕ್ಕೊಳಗಾಯಿತು. ದೀಪಾ ಮೆಹ್ತಾ ನಿರ್ದೇಶನದ 'ಫಯರ್' (೧೯೯೬), 'ಅರ್ಥ್' (೧೯೯೮) ಮತ್ತು 'ವಾಟರ್' (೨೦೦೫) ಚಿತ್ರಗಳು ಚಿತ್ರೀಕರಣದ ಸಮಯದಿಂದಲೇ ವಿವಾದಕ್ಕೊಳಗಾದವು. 'ಫಯರ್' ಚಿತ್ರ ಸಲಿಂಗ ಕಾಮದ ಕಥೆಯನ್ನು ಬಿಂಬಿಸುತ್ತದೆ ಎಂಬ ಕಾರಣಕ್ಕೆ ದೇಶದಾದ್ಯಂತ ಅದರ ವಿರುದ್ಧ ಪ್ರತಿಭಟನೆಗಳಾಗುತ್ತವೆ. ಸೆನ್ಸಾರ್ ಮಂಡಳಿ ಚಿತ್ರದಲ್ಲಿರುವ ಸೀತಾ ಪಾತ್ರದ ಹೆಸರನ್ನು ನೀತಾ ಎಂದು ಬದಲಾಯಿಸುವ ಕರಾರಿನ ಮೇಲೆ ಚಿತ್ರಕ್ಕೆ 'ಎ' ಪ್ರಮಾಣಪತ್ರ ನೀಡುತ್ತದೆ. ಹಿಂದೂ ಮೂಲಭೂತ ವಾದಿಗಳು ಚಿತ್ರ ಮಂದಿರಗಳ ಮೇಲೆ ದಾಳಿ ಮಾಡಿದ ಕಾರಣ ಚಿತ್ರ ಸ್ವಲ್ಪ ಸಮಯ ನಿಷೇಧಕ್ಕೊಳಗಾಗುತ್ತದೆ. ಆನಂತರ ಪ್ರದರ್ಶನ ಆರಂಭವಾಗುತ್ತದೆ.

'ವಾಟರ್' ಚಿತ್ರವು ೧೯೩೦ರ ದಶಕದ ಭಾರತದ ವಿಧವೆಯ ಕಥೆಯನ್ನು ಒಳಗೊಂಡಿದ್ದು, ಚಿತ್ರದ ಚಿತ್ರೀಕರಣದ ದಿನದಿಂದಲೇ ವಿವಾದಕ್ಕೊಳಗಾಗುತ್ತದೆ. ಅದರಲ್ಲಿ ಹಿಂದೂ ವಿರೋಧಿ ಭಾವನೆಗಳಿವೆ ಮತ್ತು ಹಿಂದೂ ಸಂಸ್ಕೃತಿಯನ್ನು ಋಣಾತ್ಮಕವಾಗಿ ಬಿಂಬಿಸಲಾಗಿದೆ ಎಂಬ ಸಂಶಯದಿಂದ ೨೦೦೦ಕ್ಕೂ ಹೆಚ್ಚು ಪ್ರತಿಭಟನೆಕಾರರು ಚಿತ್ರೀಕರಣದ ಸ್ಥಳದ ಮೇಲೆ ದಾಳಿ ಮಾಡಿ ಸೆಟ್‌ಗಳನ್ನು ಹಾಳುಮಾಡುತ್ತಾರೆ. ಇದರಿಂದಾಗಿ ಶ್ರೀಲಂಕಾದಲ್ಲಿ ಚಿತ್ರೀಕರಣ ನಡೆಸಬೇಕಾಗುತ್ತದೆ. ಚಿತ್ರದಲ್ಲಿ ಶಬಾನಾ ಆಜ್ಮಿ ಮತ್ತು ನಂದಿತಾ ದಾಸ್ ಬದಲಾಗಿ ಸೀಮಾ ಬಿಸ್ವಾಸ್ ಮತ್ತು ಲಿಸಾ ರೇ ನಟಿಸುತ್ತಾರೆ. ಕೆಲವು ಕಾರಣಗಳಿಗಾಗಿ ಚಿತ್ರವನ್ನು ೨೦೦೫ರಲ್ಲಿ ಭಾರತದಲ್ಲಿ ನಿಷೇಧಿಸಲಾಗುತ್ತದೆ.

'ಸತ್ಯಂ ಶಿವಂ ಸುಂದರಂ' ಚಿತ್ರದಲ್ಲಿ ನಟಿ ಜೀನತ್ ಅಮಾನ್ ಮತ್ತು ಶಶಿ ಕಪೂರ್ ನಡುವೆ ಪ್ರಚೋದಕ ಲೈಂಗಿಕ ದೃಶ್ಯಗಳಿವೆ ಎಂಬ ಕಾರಣಕ್ಕೆ ವಿವಾದಕ್ಕೊಳಗಾಗಿತ್ತು. ೧೯೯೩ರ ಮುಂಬಯಿ ಬಾಂಬ್ ಸ್ಫೋಟದ ಕಥೆಯಾಧಾರಿತ ೨೦೦೪ರ 'ಬ್ಲಾಕ್ ಫ್ರೈಡೇ' ಚಿತ್ರ ಬಿಡುಗಡೆಯಾಗಲು ಎರಡು ವರ್ಷ ಕಾಯಬೇಕಾಯಿತು. ಅದು ಬಾಂಬ್ ಸ್ಫೋಟದ ಪ್ರಕರಣದ ವಿಚಾರಣೆ ಮೇಲೆ ಪ್ರಭಾವ

ಬೀರುತ್ತದೆ ಎಂಬ ಕಾರಣಕ್ಕೆ ಅದರ ಬಿಡುಗಡೆಗೆ ತಡೆ ಕೋರಿ ದಾವೆ ಹೂಡಲಾಯಿತು. ಕೊನೆಗೆ ಕೆಲವು ದೃಶ್ಯಗಳನ್ನು ಕತ್ತರಿಸಿ ಚಿತ್ರ ಬಿಡುಗಡೆ ಮಾಡಲಾಯಿತು. ಖ್ಯಾತ ಪತ್ರಕರ್ತ ವಿನೋದ್ ಪಾಂಡೆ ೨೦೦೫ರಲ್ಲಿ ನಿರ್ದೇಶಿಸಿದ 'ಸಿನ್ಸ್' ಎಂಬ ಚಿತ್ರದಲ್ಲಿ ಕ್ಯಾಥೊಲಿಕ್ ಧರ್ಮಗುರು ಯುವತಿಯೊಬ್ಬಳೊಂದಿಗೆ ಲೈಂಗಿಕ ಸಂಬಂಧ ಹೊಂದಿರುವಂತೆ ಬಿಂಬಿಸಲಾಗಿದೆ ಎಂದು ಕ್ರೈಸ್ತ ಸಮುದಾಯ ಪ್ರತಿಭಟಿಸಿದ ಕಾರಣ ಆ ಚಿತ್ರವನ್ನು ನಿಷೇಧಿಸಲಾಯಿತು. ಆ ಚಿತ್ರ 'ಎ' ಪ್ರಮಾಣ ಪತ್ರದೊಂದಿಗೆ ಬಿಡುಗಡೆಯಾದರೂ ದೇಶದ ಕೆಲವು ಭಾಗಗಳಲ್ಲಿ ನಿಷೇಧಿಸಲ್ಪಟ್ಟಿತು.

೧೯೭೭ರಲ್ಲಿ ಬಿಡುಗಡೆಯಾದ ಅಮೃತ ನಹಾತ ನಿರ್ದೇಶನದ ರಾಜಕೀಯ ವಿಡಂಬನೆಯ 'ಕಿಸ್ಸಾ ಕುರ್ಸಿ ಕಾ' ಚಿತ್ರವನ್ನು ಭಾರತ ಸರಕಾರ ನಿಷೇಧಿಸಿತು. ಆ ಚಿತ್ರ ಗಾಂಧಿ ಕುಟುಂಬವನ್ನು ವ್ಯಂಗ್ಯವಾಗಿ ಬಿಂಬಿಸಿತ್ತು. ಮುಖ್ಯವಾಗಿ ಸಂಜಯ್ ಗಾಂಧಿ ಮಾರುತಿ ಕಾರು ಯೋಜನೆಯ ಹಿಂದಿರುವುದನ್ನು ಟೀಕಿಸುವ ಸನ್ನಿವೇಶಗಳಿತ್ತು. ಆ ಚಿತ್ರ ಬಿಡುಗಡೆಯಾದಾಗ ಅದರ ರೀಲುಗಳನ್ನು ಮುಟ್ಟುಗೋಲು ಹಾಕಿಕೊಂಡು ಸುಟ್ಟು ಹಾಕಲಾಯಿತು. ನಂತರ ನಿರ್ದೇಶಕರು ಹೊಸ ತಾರಾಗಣದೊಂದಿಗೆ ಚಿತ್ರವನ್ನು ಮರು ನಿರ್ಮಿಸಿದರೂ ಯಾವುದೇ ಪ್ರಯೋಜನವಾಗಲಿಲ್ಲ. ತುರ್ತುಪರಿಸ್ಥಿತಿ ನಂತರ ನೇಮಕವಾದ ಆಯೋಗದ ಮೂಲಕ ಸಂಜಯ್ ಗಾಂಧಿ ಅಪರಾಧಿಯೆಂದು ಸಾಬೀತಾಗಿ ಒಂದು ತಿಂಗಳ ಜೈಲು ಶಿಕ್ಷೆ ವಿಧಿಸಲಾಯಿತು.

ಭಾರತದ ಕುಖ್ಯಾತ ಡಕಾಯಿತಿ ಮತ್ತು ರಾಜಕಾರಣಿ ಫೂಲನ್ ದೇವಿ ಜೀವನವನ್ನು ಆಧರಿಸಿದ ಶೇಖರ್ ಕಪೂರ್ ನಿರ್ದೇಶನದ 'ಬ್ಯಾಂಡಿಟ್ ಕ್ವೀನ್' ಚಿತ್ರದಲ್ಲಿ ನಗ್ನತೆ, ಲೈಂಗಿಕತೆ ಮತ್ತು ಹಿಂಸೆಯನ್ನು ವೈಭವೀಕರಿಸಲಾಗಿದೆ ಮತ್ತು ಕ್ರೂರವಾದ ಅತ್ಯಾಚಾರದ ದೃಶ್ಯಗಳಿವೆ ಎಂದು ತೀವ್ರ ಟೀಕೆಗೊಳಗಾಯಿತು. ಸ್ವತಃ ಫೂಲನ್ ದೇವಿಯೇ ಚಿತ್ರದ ಬಿಡುಗಡೆಯನ್ನು ತಡೆಯಲು ತಡೆಯಾಜ್ಞೆ ತರಲು ಪ್ರಯತ್ನಿಸಿದಳು. ತೀವ್ರ ಪ್ರತಿಭಟನೆಯಿಂದ ಚಿತ್ರ ನಿಷೇಧಕ್ಕೊಳಗಾದರೂ ನಂತರ ಕೆಲವು ದೃಶ್ಯಗಳನ್ನು ಕತ್ತರಿಸಿ ಬಿಡುಗಡೆ ಮಾಡಲಾಯಿತು. ಇದೇ ಚಿತ್ರ ೧೯೯೪ರ ಕೇನ್ಸ್ ಸಿನೇಮಾ ಉತ್ಸವದಲ್ಲಿ ಪ್ರಶಂಸೆಗೊಳಗಾಯಿತು.

ಆಶುತೋಷ್ ಗೋವರಿಕರ್ ನಿರ್ದೇಶನದ 'ಜೋಧಾ ಅಕ್ಬರ್' ಚಿತ್ರ ಬಿಡುಗಡೆಗೆ ಮೊದಲೇ ವಿವಾದಕ್ಕೊಳಗಾಯಿತು. ಕೆಲವು ಧಾರ್ಮಿಕ ಮತ್ತು ರಾಜಕೀಯ ಪಕ್ಷಗಳು ಆ ಚಿತ್ರ ಐತಿಹಾಸಿಕ ವಾಸ್ತವಗಳನ್ನು ತಪ್ಪಾಗಿ ಬಿಂಬಿಸಿದೆ ಎಂದು ಪ್ರತಿಭಟಿಸಿದರು. ಆ ಚಿತ್ರದಲ್ಲಿ ಜೋಧಾಳನ್ನು ಅಕ್ಬರ್ ಪತ್ನಿಯಾಗಿ ಬಿಂಬಿಸಲಾಗಿದೆ. ವಾಸ್ತವವಾಗಿ ಜೋಧಾ ಅಕ್ಬರ್ ಸೊಸೆ, ಪತ್ನಿಯಲ್ಲ ಎಂಬುದು ಅವರ ವಾದ. ರಾಜಸ್ಥಾನ ಮತ್ತು ಮಧ್ಯಪ್ರದೇಶಗಳಲ್ಲಿ ನಿಷೇಧಕ್ಕೊಳಗಾದ ಈ ಚಿತ್ರ ಉಳಿದ ಕಡೆ ಅಭೂತಪೂರ್ವ ಯಶಸ್ಸನ್ನು ಸಾಧಿಸಿತು. ನರ್ಮದಾ ಅಣೆಕಟ್ಟಿನ ಎತ್ತರವನ್ನು ಹೆಚ್ಚಿಸುವುದರ ವಿರುದ್ಧದ ಪ್ರತಿಭಟನೆಯಲ್ಲಿ ಭಾಗಿಯಾಗಿದ್ದಾರೆ ಎಂಬ ಕಾರಣಕ್ಕೆ ಅಮೀರ್ ಖಾನ್ ನಟಿಸಿದ 'ಫನಾ' ಚಿತ್ರಕ್ಕೆ ಪ್ರತಿಭಟನೆ ವ್ಯಕ್ತವಾಗಿ ಅದು



ಗುಜರಾತಿನಲ್ಲಿ ಸ್ವಲ್ಪ ಸಮಯ ನಿಷೇಧಕ್ಕೊಳಗಾಯಿತು. ಐಪಿಎಲ್‌ನಿಂದ ಪಾಕಿಸ್ತಾನದ ಕ್ರಿಕೆಟ್ ತಾರೆಗಳನ್ನು ಹೊರಗಿಟ್ಟ ಕ್ರಮವನ್ನು ಟೀಕಿಸಿದ ಕಾರಣಕ್ಕೆ ಶಾರುಖ್ ಖಾನ್ ನಟಿಸಿದ 'ಮೈ ನೇಮ್ ಈಸ್ ಖಾನ್' ಚಿತ್ರದ ವಿರುದ್ಧ ಮಹಾರಾಷ್ಟ್ರದಲ್ಲಿ ಶಿವಸೇನೆ ಪ್ರತಿಭಟಿಸಿತು. ಕೊನೆಗೆ ಸರಕಾರ ಭದ್ರತೆ ನೀಡುವ ಭರವಸೆ ನೀಡಿದ ಕಾರಣ ಮೂರು ವರ್ಷಗಳ ನಂತರ ಚಿತ್ರ ಬಿಡುಗಡೆಯಾಗಿ ಅಂತರರಾಷ್ಟ್ರೀಯ ಮಟ್ಟದಲ್ಲೂ ಯಶಸ್ಸು ಕಂಡಿತು.

ಪಟ್ಟಾಭಿರಾಮ ರೆಡ್ಡಿ ನಿರ್ದೇಶನದ 'ಸಂಸ್ಕಾರ' ಚಿತ್ರವು ಒಂದು ಸಮುದಾಯದ ಆಚರಣೆಗಳನ್ನು ಟೀಕಿಸಿದೆ ಎಂಬ ಕಾರಣಕ್ಕೆ ಒಂದು ವರ್ಷ ತಡವಾಗಿ ಪ್ರಮಾಣಪತ್ರ ನೀಡಲಾಯಿತು. ಆ ಚಿತ್ರ ರಾಷ್ಟ್ರೀಯ ಪ್ರಶಸ್ತಿ ಪಡೆಯಿತು. ಉಪೇಂದ್ರ ನಿರ್ದೇಶನದ, ಶಿವರಾಜ್ ಕುಮಾರ್ ನಟಿಸಿದ 'ಓಂ' ಚಿತ್ರದಲ್ಲಿರುವ ಹಿಂಸೆಯ ದೃಶ್ಯಗಳು ಮತ್ತು ನಿಜವಾದ ಭೂಗತ ಜಗತ್ತಿನ ವ್ಯಕ್ತಿಗಳು ನಟಿಸಿದ ಕಾರಣಕ್ಕೆ ವಿವಾದಕ್ಕೊಳಗಾಯಿತು. ಈ ಚಿತ್ರದ ಬಗ್ಗೆ ವಿಶೇಷ ಲೇಖನ ಪ್ರಕಟಿಸಿದ 'ದಿ ವೀಕ್' ನಿಯತಕಾಲಿಕ ರಾಜ್‌ಕುಮಾರ್ ಬ್ಯಾನರ್‌ನಲ್ಲಿ ಇಂಥ ಚಿತ್ರಗಳು ಬರಬಾರದಿತ್ತೆಂದು ಟೀಕಿಸಿತು. ಚಿತ್ರದ ಕ್ಲೈಮ್ಯಾಕ್ಸ್ ಬದಲಾಯಿಸದೆ ಪ್ರಮಾಣ ಪತ್ರ ನೀಡಲು ಸೆನ್ಸಾರ್ ಮಂಡಳಿ ನಿರಾಕರಿಸಿತು. ಕೊನೆಗೆ ಕ್ಲೈಮ್ಯಾಕ್ಸ್ ಬದಲಾಯಿಸಿ ಚಿತ್ರ ಬಿಡುಗಡೆ ಮಾಡಲಾಯಿತು. ರಾಜೇಂದ್ರ ಸಿಂಗ್ ಬಾಬು ನಿರ್ದೇಶನದ 'ಅಂತ' ಚಿತ್ರವೂ ಪ್ರಮಾಣಪತ್ರ ಪಡೆಯುವಾಗ ಸಮಸ್ಯೆಗಳನ್ನು ಎದುರಿಸಿತು. ಕೊನೆಗೆ ಅದರ ಬಿಡುಗಡೆಗೆ ಆಗಿನ ಪ್ರಧಾನಿ ಇಂದಿರಾ ಗಾಂಧಿ ಮಧ್ಯಪ್ರವೇಶ ಮಾಡಬೇಕಾಯಿತು. ಗಂಧದ ಗುಡಿ, ನಾಗರಹಾವು, ಚಿತೆಗೂ ಚಿಂತೆ, ಅವಸ್ಥೆ, ಚಕ್ರವ್ಯೂಹ, ಸ್ವಾಭಿಮಾನ, ಭಾರತ್ ೨೦೦೦, ಹೆಚ್೨ಒ, ಮಸ್ತಿ, ವೀರ ಬಸವಣ್ಣ, ವಿಷ್ಣುವರ್ಧನ, ಪ್ರೀತಿ ಏಕೆ ಭೂಮಿ ಮೇಲಿದೆ? ಮುಂತಾದವು ವಿವಾದಕ್ಕೊಳಗಾದ ಇತರ ಚಿತ್ರಗಳು.

ಸಿಕ್ಕಿಂನ ಸಾರ್ವಭೌಮತೆಗೆ ಸಂಬಂಧಿಸಿದ ಸತ್ಯಜಿತ್ ರೇ ನಿರ್ದೇಶನದ 'ಸಿಕ್ಕಿಂ' ಸಾಕ್ಷ್ಯಚಿತ್ರವನ್ನು ೧೯೭೫ರಲ್ಲಿ ಭಾರತ ಸರಕಾರ ನಿಷೇಧಿಸಿತು. ೨೦೧೦ರ ಸೆಪ್ಟೆಂಬರ್‌ನಲ್ಲಿ ಸರಕಾರ ನಿಷೇಧವನ್ನು ಹಿಂತೆಗೆದುಕೊಂಡರೂ ಅದೇ ವರ್ಷದ ನವಂಬರ್‌ನಲ್ಲಿ ನ್ಯಾಯಾಲಯ ಚಿತ್ರವನ್ನು ನಿಷೇಧಿಸುವಂತೆ ಆದೇಶಿಸಿತು. ರಾಜೀವ್ ಗಾಂಧಿ ಹತ್ಯೆಯ ನಂತರದ ಘಟನೆಗಳನ್ನು ಆಧರಿಸಿದ 'ಕುಟ್ರಪಥಿರಿಕ್ಕೈ' ಚಿತ್ರ ಎಲ್‌ಟಿಟಿಇ ಚಟುವಟಿಕೆಗಳನ್ನು ಸಮರ್ಥಿಸುತ್ತದೆ ಎಂದು ಆರೋಪಿಸಿ ೧೫ ವರ್ಷಗಳವರೆಗೆ ನಿಷೇಧಿಸಲ್ಪಟ್ಟಿತ್ತು. ಕೊನೆಗೆ ೨೦೦೭ರಲ್ಲಿ ಕೆಲವು ದೃಶ್ಯಗಳನ್ನು ಕತ್ತರಿಸಿ ಚಿತ್ರ ಬಿಡುಗಡೆ ಮಾಡಲಾಯಿತು. ರೊಲ್ಯಾಂಡ್ ಜಾಫೆ ನಿರ್ದೇಶನದ 'ಸಿಟಿ ಆಫ್ ಜಾಯ್' ಚಿತ್ರ ಕೋಲ್ಕತ್ತ ನಗರವನ್ನು ಕೆಟ್ಟದಾಗಿ ಬಿಂಬಿಸಿದೆ ಎಂದು ಆರೋಪಿಸಿ ಕೋಲ್ಕತ್ತಾದಲ್ಲಿ ನಿಷೇಧಿಸಲಾಯಿತು.

ಮೀರಾ ನಾಯರ್ ನಿರ್ದೇಶನದ 'ಕಾಮಸೂತ್ರ: ಎ ಟೇಲ್ ಆಫ್ ಲವ್' ಚಿತ್ರದಲ್ಲಿ ಉದ್ರೇಕಕಾರಿ ಲೈಂಗಿಕ ದೃಶ್ಯಗಳಿವೆ ಎಂದು ೧೯೯೬ರಲ್ಲಿ ಭಾರತದಲ್ಲಿ ನಿಷೇಧಿಸಲಾಯಿತು. ಅಟೆನ್ ಬರೋ ನಿರ್ದೇಶನದ 'ಗಾಂಧಿ' ಚಿತ್ರವನ್ನು ನಿಷೇಧಿಸಬೇಕೆಂದು ಒತ್ತಾಯಿಸಿ ಕೆಲವು ಖಾಸಗಿ ಸಂಘಟನೆಗಳು ಕೋರ್ಟ್ ಮೆಟ್ಟಿಲು ಹತ್ತಿದ್ದವು. 'ಅಂಧ ಕಾನೂನು' ಚಿತ್ರದಲ್ಲಿ ನ್ಯಾಯಾಂಗ ನಿಂದನೆಗೆ ಸಂಬಂಧಿಸಿ ದೃಶ್ಯಗಳಿವೆ ಎಂದು ಅಲಹಾಬಾದ್ ಉಚ್ಚ ನ್ಯಾಯಾಲಯ ಚಿತ್ರದ ಬರಹಗಾರ, ನಿರ್ದೇಶಕ ಮತ್ತು ಕಲಾವಿದರಿಗೆ ನೋಟೀಸು ನೀಡಿತ್ತು. 'ನಿಖಾ' ಚಿತ್ರ ಅಲ್ಪಸಂಖ್ಯಾತ ಸಮುದಾಯದ ಕಾನೂನುಗಳಿಗೆ ಅಗೌರವ ತೋರಿಸಿದೆ ಎಂದು ಆರೋಪಿಸಿ ಶ್ರೀನಗರದ ಮುಖ್ಯ ನ್ಯಾಯಾಂಗಾಧಿಕಾರಿ ಅದರ ನಿರ್ಮಾಪಕರಿಗೆ ಜಾಮೀನು ರಹಿತ ವಾರಂಟ್ ನೀಡಿದ್ದರು.

೨೦೦೨ರಲ್ಲಿ ನಿರ್ಮಾಣವಾದ ಅಣ್ವಸ್ತ್ರ ಪರೀಕ್ಷೆಯ ದೃಶ್ಯಗಳನ್ನು ಬಿಂಬಿಸುವ ಆನಂದ ಪಟವರ್ಧನ್ ಅವರ 'ವಾರ್ ಅಂಡ್ ಪೀಸ್' ಚಿತ್ರಕ್ಕೆ ಪ್ರಮಾಣಪತ್ರವನ್ನು ನೀಡಲು ೨೧ ದೃಶ್ಯಗಳನ್ನು ಕತ್ತರಿಸಬೇಕೆಂದು ಸೆನ್ಸಾರ್ ಮಂಡಳಿ ಹೇಳಿದಾಗ 'ಆ ದೃಶ್ಯಗಳನ್ನು ಕತ್ತರಿಸಿದರೆ ಭಾರತೀಯ ಮಾಧ್ಯಮಗಳಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಚರಮಗೀತೆ ಹಾಡಿದಂತೆ' ಎಂದು ಕೋರ್ಟ್ ಮೆಟ್ಟಿಲೇರುತ್ತಾರೆ. ಕೋರ್ಟ್ ಸೆನ್ಸಾರ್ ಮಂಡಳಿ ಕ್ರಮ ಅಸಾಂವಿಧಾನಿಕ ಎಂದು ಅಭಿಪ್ರಾಯಪಟ್ಟು, ಯಾವುದೇ ದೃಶ್ಯಗಳನ್ನು ಕತ್ತರಿಸದೆ ಚಿತ್ರ ಬಿಡುಗಡೆ ಮಾಡುವಂತೆ ಮಾಡುತ್ತದೆ.

ಶ್ರೀಧರ್ ರಂಗಾಯಣ ನಿರ್ದೇಶನದ ಭಾರತದ ತೃತೀಯ ಲಿಂಗಿಗಳಿಗೆ ಸಂಬಂಧಿಸಿದ 'ಗುಲಾಬಿ ಐನಾ' ಚಿತ್ರ ಅಶ್ಲೀಲ ಮತ್ತು ಅಪರಾಧದಿಂದ ಕೂಡಿದೆ

ಎಂದು ಸೆನ್ಸಾರ್ ಮಂಡಳಿ ನಿಷೇಧಿಸಿತು. ಚಿತ್ರ ನಿರ್ಮಾಪಕರು ಮತ್ತೆರಡು ಬಾರಿ ಮಾಡಿದ ಮನವಿಯನ್ನೂ ಮಂಡಳಿ ಪರಿಗಣಿಸಲಿಲ್ಲ. ಆದರೆ ವಿಶ್ವದಾದ್ಯಂತ ಅನೇಕ ಚಲನಚಿತ್ರೋತ್ಸವಗಳಲ್ಲಿ ಪ್ರದರ್ಶನಗೊಂಡ ಈ ಚಿತ್ರ ಅನೇಕ ಪ್ರಶಸ್ತಿಗಳನ್ನು ಪಡೆದು ವಿಮರ್ಶಕರ ಪ್ರಶಂಸೆಗೊಳಗಾಯಿತು. ಗುಜರಾತ್ ಗಲಭೆಗೆ ಸಂಬಂಧಿಸಿದ 'ಫೈನಲ್ ಸೊಲ್ಯೂಷನ್' ಪ್ರಚೋದನಕಾರಿಯಾಗಿದೆ ಎಂಬ ಕಾರಣ ನೀಡಿ ಸೆನ್ಸಾರ್ ಮಂಡಳಿ ನಿಷೇಧಿಸಿತು. ನಿರಂತರ ಆಂದೋಲನದ ನಂತರ ನಿಷೇಧ ತೆಗೆದುಹಾಕಲಾಯಿತು.

೨೦೦೬ರಲ್ಲಿ ಹಾಲಿವುಡ್ ಚಿತ್ರ 'ದಿ ಡಾ ವಿಂಚಿ ಕೋಡ್'ಗೆ ಸೆನ್ಸಾರ್ ಮಂಡಳಿ 'ಎ' ಪ್ರಮಾಣ ಪತ್ರ ನೀಡಿದರೂ ಏಳು ರಾಜ್ಯಗಳು ಚಿತ್ರವನ್ನು ನಿಷೇಧಿಸಿದವು. ಅಮೇರಿಕಾದ ಡೇವಿಡ್ ಫಿಂಚರ್ ನಿರ್ದೇಶನದ 'ದಿ ಗರ್ಲ್ ವಿದ್ ಡ್ರ್ಯಾಗನ್ ಟ್ಯಾಟೂ' ಚಿತ್ರಕ್ಕೆ ಪ್ರಮಾಣ ಪತ್ರ ನೀಡಲು ಐದು ದೃಶ್ಯಗಳನ್ನು ಕತ್ತರಿಸಬೇಕೆಂದು ಸೆನ್ಸಾರ್ ಮಂಡಳಿ ಹೇಳಿದಾಗ ನಿರ್ದೇಶಕರು ಒಪ್ಪದೆ ಆ ಚಿತ್ರವನ್ನು ಭಾರತದಲ್ಲಿ ನಿಷೇಧಿಸಲಾಯಿತು. ೨೦೦೩ರಲ್ಲಿ ಲೈಂಗಿಕ ದೃಶ್ಯ ಮತ್ತು ಹಿಂಸೆಗಾಗಿ 'ಪಾಂಚ್' ಚಿತ್ರವನ್ನು ನಿಷೇಧಿಸಲಾಯಿತು. ೨೦೦೭ರಲ್ಲಿ ಗುಜರಾತಿನಲ್ಲಿ 'ಪರ್ಜಾನಿಯಾ' ಚಿತ್ರ, ೨೦೧೧ರಲ್ಲಿ ಪಂಜಾಬ್ ಮತ್ತು ಉತ್ತರಪ್ರದೇಶದಲ್ಲಿ 'ಆರಕ್ಷಣ್' ಚಿತ್ರ, ತಮಿಳುನಾಡಿನಲ್ಲಿ ೧೯೮೭ರಲ್ಲಿ 'ಒರೆ ಒರು ಗ್ರಾಮತ್ತಿಲೆ' ಮತ್ತು ೨೦೧೧ರಲ್ಲಿ 'ಡ್ಯಾಮ್ ೯೯೯' ಚಿತ್ರಗಳು ನಿಷೇಧಿಸಲ್ಪಟ್ಟವು.

'ಮದ್ರಾಸ್ ಕೆಫೆ' ಹಿಂದಿ ಚಿತ್ರದ ತಮಿಳು ಆವೃತ್ತಿ ಶ್ರೀಲಂಕಾದಲ್ಲಿರುವ ತಮಿಳು ಪ್ರತ್ಯೇಕವಾದಿಗಳ ಕಥೆ ಒಳಗೊಂಡಿದೆ ಎಂದು ಬಿಡುಗಡೆಗೆ ತಡೆಯೊಡ್ಡಲಾಯಿತು. ಕೊನೆಗೆ, ಅದರಲ್ಲಿ ಆಕ್ಷೇಪಾರ್ಹ ಅಂಶಗಳಿಲ್ಲವೆಂದು ಪ್ರಮಾಣಪತ್ರ ನೀಡಲಾಯಿತು. ಕಮಲ್ ಹಾಸನ್ ನಿರ್ದೇಶನದ 'ವಿಶ್ವರೂಪಂ' ಚಿತ್ರವನ್ನು ಕೆಲವು ದೃಶ್ಯಗಳನ್ನು ಕತ್ತರಿಸಿ ಬಿಡುಗಡೆ ಮಾಡಲಾಯಿತು. 'ತಲೈವ' ತಮಿಳು ಚಿತ್ರದ ಬಿಡುಗಡೆ ಎರಡು ವಾರಗಳು ತಡವಾಯಿತು. ಮಣಿರತ್ನಂ ನಿರ್ದೇಶನದ 'ಕಡಲ್' ಚಿತ್ರಕ್ಕೆ ಧಾರ್ಮಿಕ ವಿರೋಧ ವ್ಯಕ್ತವಾಗಿತ್ತು. ವಿವಾದಕ್ಕೊಳಗಾದ ಇತರ ಚಿತ್ರಗಳೆಂದರೆ 'ಬಾಂಬೆ', 'ಖಳನಾಯಕ್', 'ಮೇಜರ್ ಸಾಬ್', 'ಇರುವರ್', 'ಖದ್ದರ್', 'ರಾಮ್ ತೇರಿ ಗಂಗಾ ಮೈಲಿ', 'ಅನಾಡಿ', 'ಮಾಚಿಸ್' ಮುಂತಾದವು.

ಪಂಜಾಬ್ ರಾಜ್ಯವನ್ನು ಕೆಟ್ಟದಾಗಿ ಬಿಂಬಿಸಲಾಗಿದೆ ಎಂಬ ಕಾರಣಕ್ಕೆ 'ಉಡ್ತಾ ಪಂಜಾಬ್' ಚಿತ್ರ ವಿವಾದಕ್ಕೆ ಒಳಗಾಗಿತ್ತು. ಜಿಎಸ್‌ಟಿ ಮತ್ತು ಡಿಜಿಟಲ್ ಬ್ಯಾಂಕಿಂಗ್ ಬಗ್ಗೆ ವಿಜಯ್ ಆಕ್ಷೇಪಾರ್ಹವಾಗಿ ಮಾತನಾಡಿದ್ದಾರೆಂದು ತಮಿಳಿನ 'ಮರ್ಸಲ್' ಚಿತ್ರದ ವಿರುದ್ಧ ಪ್ರತಿಭಟನೆಗಳು ನಡೆದವು. ಸಂಜಯ್ ಬನ್ಸಾಲಿಯವರ 'ರಾಮ್ ಲೀಲಾ' ಚಿತ್ರದ ಹೆಸರಿಗೆ ವಿರೋಧ ವ್ಯಕ್ತವಾಗಿ 'ಗಲಿಯೋಂ ಕಿ ರಾಸಲೀಲಾ–ರಾಮ್ ಲೀಲಾ' ಎಂದು ಬದಲಾಯಿಸಬೇಕಾಯಿತು. ಅವರ ಇನ್ನೊಂದು ಚಿತ್ರ 'ಬಾಜಿರಾವ್ ಮಸ್ತಾನಿ'ಯಲ್ಲಿ ಮರಾಠ ಸಾಮ್ರಾಜ್ಯವನ್ನು ಆಳಿದ ಪೇಶ್ವೆಗಳ ಇತಿಹಾಸವನ್ನು ತಿರುಚಲಾಗಿದೆ ಎಂದು ಪ್ರತಿಭಟನೆಗಳು ನಡೆದವು. ಈ ವರ್ಷ ಬಿಡುಗಡೆಯಾದ 'ಲಿಪ್‌ಸ್ಟಿಕ್ ಅಂಡರ್ ಮೈ ಬುರ್ಖಾ' ಹಿಂದೂ ಮತ್ತು ಮುಸ್ಲಿಂ ಸಂಘಟನೆಗಳ ವಿರೋಧಕ್ಕೆ ಒಳಗಾಗಿತ್ತು. ಸೆನ್ಸಾರ್ ಮಂಡಳಿ ಸೂಚಿಸಿದ ಕಟ್‌ಗಳಿಗೆ ಚಿತ್ರರಂಗವೇ ವಿರೋಧ ವ್ಯಕ್ತಪಡಿಸಿತ್ತು.

ಅಶ್ಲೀಲ ಮತ್ತು ಅಸಭ್ಯ ಸಿನೇಮಾ ಭಿತ್ತಿಪತ್ರಗಳ ಪ್ರದರ್ಶನ ಕೂಡಾ ಅಪರಾಧವಾಗುತ್ತದೆ. ಅದು ಭಾರತೀಯ ದಂಡ ಸಂಹಿತೆಯಡಿ ಬರುತ್ತದೆ. ಜಾಹೀರಾತಿನಲ್ಲಿ ಸಿನೇಮಾದ ವರ್ಗೀಕರಣ ತೋರಿಸಬೇಕು. ೧೯೯೦ರ ಏಪ್ರಿಲ್‌ನಲ್ಲಿ ಸಿನೇಮಾ ಪ್ರಚಾರ ಪರಿಶೀಲನಾ ಸಮಿತಿಯನ್ನು ರಚಿಸಲಾಗಿದೆ. ಅಶ್ಲೀಲತೆ, ಮಹಿಳೆಯರನ್ನು ಕೆಟ್ಟದಾಗಿ ಬಿಂಬಿಸುವುದು ಮತ್ತು ಹಿಂಸೆಯನ್ನು ವೈಭವೀಕರಿಸುವುದನ್ನು ತಡೆಯಲು ಈ ಸಮಿತಿ ಸಿನೇಮಾ ಪೋಸ್ಟರ್ ಮತ್ತು ಇತರ ಪ್ರಚಾರ ಸಾಮಗ್ರಿಗಳನ್ನು ಪರಿಶೀಲಿಸುತ್ತದೆ.

ಭಾರತದಲ್ಲಿ ೧೩೦೦೦ಕ್ಕೂ ಹೆಚ್ಚು ಚಿತ್ರಮಂದಿರಗಳಿವೆ. ಲಕ್ಷಗಟ್ಟಲೆ ವಿಡಿಯೋ ಲೈಬ್ರರಿ ಮತ್ತು ಪಾರ್ಲರ್‌ಗಳಿವೆ. ಇದರಿಂದಾಗಿ ಸೆನ್ಸಾರ್‌ಶಿಪ್ ಕಾನೂನುಗಳ ಉಲ್ಲಂಘನೆಯನ್ನು ನಿಯಂತ್ರಿಸುವುದು ಕಷ್ಟಕರ. ಕೇಂದ್ರ ಸರಕಾರವು ರಾಜ್ಯ ಸರಕಾರಗಳು ಮತ್ತು ಕೇಂದ್ರಾಡಳಿತ ಪ್ರದೇಶಗಳು ಸೂಕ್ತಕ್ರಮ ತೆಗೆದುಕೊಳ್ಳುವಂತೆ ನಿರ್ದೇಶಿಸುತ್ತದೆ. ಕೇಂದ್ರ ಸರಕಾರವು ಒಂದು ಚಲನಚಿತ್ರದ ಪ್ರಮಾಣಪತ್ರವನ್ನು ಒಂದು ನಿರ್ದಿಷ್ಟ ಅವಧಿಗೆ ಅಮಾನತ್ತಿನಲ್ಲಿಡಬಹುದು ಅಥವಾ ಹಿಂತೆಗೆದುಕೊಳ್ಳಬಹುದು. ಆದರೆ ಅರ್ಜಿದಾರ ಆ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಬಹುದು. ಸಿಬಿಎಫ್‌ಸಿಯ ನಿರ್ಧಾರದ ವಿರುದ್ಧ ಮೇಲ್ಮನವಿ ಸಲ್ಲಿಸಲು ಮಾರ್ಚ್ ೧೯೮೩ರಲ್ಲಿ ಚಲನಚಿತ್ರ ಪ್ರಮಾಣಪತ್ರ ಮೇಲ್ಮನವಿ ನ್ಯಾಯಾಲಯವನ್ನು ನವದೆಹಲಿಯಲ್ಲಿ ಸ್ಥಾಪಿಸಲಾಯಿತು.

ಸೆನ್ಸಾರ್‌ಶಿಪ್ ಕಾನೂನುಗಳ ಉಲ್ಲಂಘನೆಗೆ ಸಂಬಂಧಿಸಿದ ಅಪರಾಧಗಳು ಜಾಮೀನು ರಹಿತವಾಗಿವೆ. ಅಪರಾಧಿಗಳಿಗೆ ಮೂರು ವರ್ಷಗಳ ತನಕ ಜೈಲುಶಿಕ್ಷೆ, ಅದರ ಜೊತೆಗೆ ಒಂದು ಲಕ್ಷ ರೂಪಾಯಿಗಳ ತನಕ ದಂಡ ಅಥವಾ ಎರಡನ್ನೂ ವಿಧಿಸಬಹುದು. ಮುಂದುವರಿದ ಅಪರಾಧಕ್ಕೆ ಪ್ರತೀ ದಿನಕ್ಕೆ ೨೦೦೦೦ ರೂಪಾಯಿಗಳ ತನಕ ದಂಡ ವಿಧಿಸಬಹುದು. ವಿಡಿಯೋ ಚಿತ್ರಗಳಿಗೆ ಕನಿಷ್ಠ ಮೂರು ತಿಂಗಳಿಂದ ಮೂರು ವರ್ಷಗಳ ತನಕ ಜೈಲು ಶಿಕ್ಷೆ, ಕನಿಷ್ಠ ೨೦೦೦೦ ರೂಪಾಯಿಯಿಂದ ಒಂದು ಲಕ್ಷ ರೂಪಾಯಿಗಳ ತನಕ ದಂಡ ವಿಧಿಸಬಹುದು. ಮುಂದುವರಿದ ಅಪರಾಧಕ್ಕೆ ಪ್ರತೀ ದಿನ ೨೦,೦೦೦ ರೂಪಾಯಿ ತನಕ ದಂಡ ವಿಧಿಸಬಹುದು. ವಿಚಾರಣಾ ನ್ಯಾಯಾಲಯ ಅಪರಾಧಿ ಸಿನೇಮಾವನ್ನು ಮುಟ್ಟುಗೋಲು ಹಾಕಿಕೊಳ್ಳುವಂತೆ ನಿರ್ದೇಶನ ನೀಡಬಹುದು. ಯಾವುದೇ ಪೊಲೀಸ್ ಅಧಿಕಾರಿ ಅಪರಾಧಿ ಸಿನೇಮಾ ಪ್ರದರ್ಶನದ ಚಿತ್ರಮಂದಿರಕ್ಕೆ ಪ್ರವೇಶಿಸಬಹುದು, ಸ್ಥಳವನ್ನು ಪರಿಶೀಲಿಸಬಹುದು ಮತ್ತು ಚಿತ್ರದ ಪ್ರತಿಯನ್ನು ವಶಕ್ಕೆ ತೆಗೆದುಕೊಳ್ಳಬಹುದು. ಯಾವುದೇ ವ್ಯಕ್ತಿ ಸಿನೇಮಾದ ವಿರುದ್ಧ ದೂರು ಸಲ್ಲಿಸಬಹುದು.

ಸೆನ್ಸಾರ್‌ಶಿಪ್‌ನ ಅಂತರರಾಷ್ಟ್ರೀಯ ನಿಯಮಗಳನ್ನು ಪಾಲಿಸುವ ಉದ್ದೇಶದಿಂದ ಈ ಮಸೂದೆಯನ್ನು ರಚಿಸಲಾಗಿದೆ. ಇದರ ಪ್ರಕಾರ ಈಗಿನ ಪ್ರಮಾಣ ಪತ್ರಗಳ ಬದಲಾಗಿ ೧೨+, ೧೫+, ೧೮+, ಯು ಮತ್ತು ಎಸ್ ಪ್ರಮಾಣಪತ್ರಗಳನ್ನು ನೀಡಲಾಗುತ್ತದೆ. ಇಲ್ಲಿರುವ ೧೨, ೧೫, ೧೮ ಸಂಖ್ಯೆಗಳು ವೀಕ್ಷಕರ ಕನಿಷ್ಠ ವಯಸ್ಸನ್ನು ಪ್ರತಿಬಿಂಬಿಸುತ್ತವೆ. ಈ ಮಸೂದೆ ಅಂಗೀಕಾರಗೊಂಡರೆ ಈವರೆಗೆ ವಿವಾದಕ್ಕೊಳಗಾದ ದೃಶ್ಯಗಳ ಬಗೆಗೆ ಸೆನ್ಸಾರ್ ಮಂಡಳಿ ಮೃದುವಾಗಬಹುದು. ಭಾರತೀಯ ಚಲನಚಿತ್ರ ಉದ್ಯಮ ಮತ್ತು ಪ್ರಮಾಣೀಕರಣ ಪ್ರಕ್ರಿಯೆಯನ್ನು ಆಮೂಲಾಗ್ರವಾಗಿ ಬದಲಾಯಿಸುವ ಅಂಶಗಳು ಸಮಗ್ರವಾದ ಈ ಮಸೂದೆಯಲ್ಲಿವೆ.

ಈ ಮಸೂದೆಯಲ್ಲಿ ಪ್ರಸ್ತಾಪಿಸಿರುವ ಮೂರು ಅಂಶಗಳೆಂದರೆ ವಿಷಯಗಳನ್ನು ಸಮಕಾಲೀನಗೊಳಿಸುವುದಕ್ಕೆ ಒತ್ತು ನೀಡುವುದು, ತಾಂತ್ರಿಕ ಬದಲಾವಣೆಗಳನ್ನು ಅಳವಡಿಸಿಕೊಳ್ಳುವುದು ಮತ್ತು ಕೃತಿಸ್ವಾಮ್ಯ ಹಕ್ಕಿನ ಉಲ್ಲಂಘನೆಗಳಿಗೆ ತುಂಬ ಕಠಿಣ ಶಿಕ್ಷೆ ವಿಧಿಸುವುದು. ಈ ಮಸೂದೆಯಂತೆ ಸಿಬಿಎಫ್‌ಸಿ ಮತ್ತು ಅದರ ಪ್ರಾದೇಶಿಕ ಕೇಂದ್ರಗಳಲ್ಲಿರುವ ಸದಸ್ಯರಲ್ಲಿ ಕಡ್ಡಾಯವಾಗಿ ಮೂರನೇ ಒಂದರಷ್ಟು ಮಹಿಳೆಯರಿರಬೇಕು. ಈ ಮಸೂದೆಯು ಚಿತ್ರಗಳಲ್ಲಿ ಮಹಿಳಾ ದೃಷ್ಟಿಕೋನಕ್ಕೆ ಮಹತ್ವ ನೀಡಿದೆ. ಪೈರಸಿ ಸಮಸ್ಯೆಯನ್ನೂ ಈ ಮಸೂದೆ ಚರ್ಚಿಸುತ್ತದೆ. ಕಾನೂನು ಬಾಹಿರವಾಗಿ ಚಿತ್ರಗಳನ್ನು ಕಾಪಿ ಮಾಡುವವರಿಗೆ ಮೂರು ವರ್ಷಗಳ ತನಕ ಜೈಲು ಶಿಕ್ಷೆಯೊಂದಿಗೆ ಐದರಿಂದ ೨೫ ಲಕ್ಷ ರೂಪಾಯಿ ತನಕ ದಂಡ ವಿಧಿಸಬೇಕೆಂದು ಈ ಮಸೂದೆ ಹೇಳುತ್ತದೆ. ಈ ಮಸೂದೆ ಕಾಯ್ದೆಯಾಗಿ ಜಾರಿಗೆ ಬಂದರೆ ಸೆನ್ಸಾರ್ ನಿಯಮಗಳಲ್ಲಿ ಬದಲಾವಣೆಗಳನ್ನು ನಿರೀಕ್ಷಿಸಬಹುದು.

**ಡಾ॥ ಸತೀಶ್ ಕುಮಾರ್ ಅಂಡಿಂಜೆ**
ಸಹಾಯಕ ಪ್ರಾಧ್ಯಾಪಕರು, ಪತ್ರಿಕೋದ್ಯಮ ಮತ್ತು ಸಮೂಹ ಸಂವಹನ ವಿಭಾಗ, ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ – ೫೭೭ ೪೫೧, ಶಿವಮೊಗ್ಗ ಜಿಲ್ಲೆ

## ಜೋರು ಮಳೆ

ತನ್ನಿರುಳು ಬಚ್ಚಿಟ್ಟ ಅಕ್ಕನೆದೆಯ ನಾ ಹೆಂಗ ಅರಿಯಲಿ...
ದನಿಸದ ನಾಲ್ಕು ಗೋಡೆಯ ಒಳಗು ಅವಳ ಕೂಗು ನಾ ಹೆಂಗ ಹುಡುಕಲಿ...
ಆಲಿಸದ ಎರಡು ಕೂಸು ಕಂದಮ್ಮಗಳ ಮಡಿಲ ಇಟ್ಟು ಕಂಗೆಟ್ಟ
ಅವಳ ಜಗವ ನಾ ಹೆಂಗ ತಾಳಲಿ...

ಒಬ್ಬಂಟಿ ಕಂಗಳು ಕತ್ತಲು ಕಾಣುತ್ತಿದೆ...
ಒದೆವ ಕಾಲುಗಳ ನೋವು ಹೃದಯ ಅಳಿಸುತ್ತಿವುದು...
ಬೆಂದು ನೊಂದು ಅವಳ ಕರಿ ಮೊಗದೊಳಗ ಜೋರು ಮಳೆ ಸುರಿಯುತ್ತಿದೆ...

**ಅಶೋಕ್ ಕುಮಾರ್**, ಉಡುಪಿ



# ಬಡಾಯಿಕೋರ ಟ್ರಂಪ್ ಆಡಳಿತದ ಒಂದು ವರ್ಷ

ಉಗ್ರ ಬಲಪಂಥೀಯ, ಅಬ್ಬರದ ಪ್ರಚಾರಕ ಅಮೆರಿಕದ ಪ್ರತಿಷ್ಠೆಯನ್ನು ಪುನರ್‌ಸ್ಥಾಪಿಸುವ ಭರವಸೆಯೊಂದಿಗೆ ಅಧಿಕಾರಕ್ಕೇರಿದ ಟ್ರಂಪ್ ಆಡಳಿತೆಯ ಒಂದು ವರ್ಷ ಮುಗಿದಿದೆ. ಅಭಿವೃದ್ಧಿಯ ಹೆಸರಿನಲ್ಲಿ ನಾಲ್ಕನೇ ವರ್ಷ ಮುಗಿಸುತ್ತಿರುವ ಭಾರತದ ಪ್ರಧಾನಿ ಮೋದಿಯಂತೆಯೇ ಟ್ರಂಪ್ ಸಾಧನೆಯೂ ಕೂಡ ಹೇಳಿಕೊಳ್ಳುವಂಥದ್ದೇನಿಲ್ಲ. ಮೋದಿ ನೀಡಿದ್ದ ಭರವಸೆಗಳಂತೆಯೇ ಚುನಾವಣೆ ಸಮಯದಲ್ಲಿ ಟ್ರಂಪ್ ಅಮೆರಿಕದ ಜನರಿಗೆ ನೀಡಿದ ಆಶ್ವಾಸನೆಗಳೆಲ್ಲ ಹುಸಿಯಾಗಿದೆ. ಬೇರೆ ಬೇರೆ ಅಧ್ಯಕ್ಷರುಗಳ ಅಧಿಕಾರದ ಅವಧಿಯಲ್ಲಿ ೨೭ ವರ್ಷ ಸೇವೆ ಸಲ್ಲಿಸಿರುವ ಅಮೆರಿಕದ ರಾಜತಂತ್ರಜ್ಞ ನಿಕೊಲಾಸ್ ಬರ್ನ್ಸ್ ಪ್ರಕಾರ "ಅಧ್ಯಕ್ಷ ಟ್ರಂಪ್ ಒಂದು ವರ್ಷದಲ್ಲಿ ಅಮೆರಿಕವನ್ನು ದುರ್ಬಲಗೊಳಿಸಿದ್ದಾರೆ ಮತ್ತು ದೇಶವನ್ನು ತಪ್ಪು ದಾರಿಯಲ್ಲಿ ಕೊಂಡೊಯ್ಯುತ್ತಿದ್ದಾರೆ. ಕೆಲವು ಮಿತ್ರರಾಷ್ಟ್ರಗಳ ಜೊತೆ ಸಂಬಂಧದಲ್ಲಿ ಅಮೆರಿಕದ ಬದ್ಧತೆಯನ್ನು ಶಿಥಿಲಗೊಳಿಸಿದ್ದಾರೆ." ಮುಂದುವರಿದು ಅವರು "ಟ್ರಂಪ್ 'ಅಮೆರಿಕ ಮೊದಲು' ಎಂಬ ನೀತಿ ಪಾಲಿಸಿ ಅಮೆರಿಕದ ವಿದೇಶೀ ನೀತಿಯನ್ನೇ ಬದಲಿಸಲು ಹೊರಟಿದ್ದಾರೆ" ಎಂದು ಆಪಾದಿಸಿದ್ದಾರೆ.

ಅಧಿಕಾರವಹಿಸಿಕೊಂಡ ಕೆಲವೇ ದಿನಗಳಲ್ಲಿ ಟ್ರಂಪ್ ಹೊರಡಿಸಿದ ಫರ್ಮಾನು ಎಂದರೆ ಹಲವು ದೇಶಗಳಿಂದ ವಲಸೆ ಬರುವವರ ಮೇಲೆ ನಿಷೇಧ. ಪ್ರಧಾನವಾಗಿ ಇದು ಮುಸ್ಲಿಮ್ ದೇಶಗಳಿಗೆ ಅನ್ವಯವಾಗಿತ್ತು. ಹಾಗೆಯೇ ಮೆಕ್ಸಿಕೋದಿಂದ ವಲಸೆಯನ್ನು ತಡೆಯಲು ಗೋಡೆ ನಿರ್ಮಿಸಲು, ಅದರ ವೆಚ್ಚವನ್ನು ಮೆಕ್ಸಿಕೋ ರಾಷ್ಟ್ರವೇ ವಹಿಸಿಕೊಳ್ಳಬೇಕೆಂದು ಬೆದರಿಕೆ ಹಾಕಿದರು. ಇದಾವುದೂ ಕಾರ್ಯಗತವಾಗಲಿಲ್ಲ. ಅಮೆರಿಕಕ್ಕೆ ನಿರಾಶ್ರಿತರು ಬಾರದಂತೆ ಮಾಡಿದರು ಅಷ್ಟೆ. ಕೆಲವು ಮುಸ್ಲಿಮ್ ರಾಷ್ಟ್ರಗಳು ಮಾತ್ರ ಅಮೆರಿಕಕ್ಕೆ ಪ್ರವೇಶದ ನಿರ್ಬಂಧ ಅನುಭವಿಸುತ್ತಿವೆ. ಅಮೆರಿಕದ ದೇಶವೇ ವಲಸೆಗಾರರ ಬೀಡು ಎಂಬುದನ್ನು ಅಧ್ಯಕ್ಷರು ಮರೆತಿರುವಂತೆ ತೋರುತ್ತದೆ. ಅಮೆರಿಕದ ಆರ್ಥಿಕ ಕ್ಷೇತ್ರದಲ್ಲಿ, ಅದರಲ್ಲೂ ಮಾಹಿತಿ ತಂತ್ರಜ್ಞಾನ ಕ್ಷೇತ್ರದಲ್ಲಿ ದೊಡ್ಡ ಸಂಖ್ಯೆಯಲ್ಲಿ ತೊಡಗಿಕೊಂಡಿರುವವರು ವಲಸೆಗಾರರೆ, ಹೆಚ್ಚಾಗಿ ಭಾರತೀಯರು ಮತ್ತು ಚೀಣೀಯರೆ. ಅಮೆರಿಕನ್ನರಿಗೇ ಉದ್ಯೋಗಗಳನ್ನೂ ನೀಡುವಂತೆ ಮಾಡಲು ಟ್ರಂಪ್ ಬಗೆಬಗೆಯ ನಿರ್ಬಂಧಗಳನ್ನು ಹೇರಿ, ಕಿರುಕುಳ ನೀಡುತ್ತಿದ್ದಾರೆ. ಇದರಿಂದಾಗಿ ಭಾರತದ ಐಟಿ ಉದ್ಯಮ ತೊಂದರೆಗೀಡಾಗಿದೆ.

ಪರಿಸರ ಮಾಲಿನ್ಯ ಕುರಿತ ಪ್ಯಾರಿಸ್ ಒಪ್ಪಂದದಿಂದ ಹಿಂದೆ ಸರಿದಿದ್ದು ಟ್ರಂಪ್ ಮಾಡಿದ ಒಂದು ಘನಂದಾರಿ ಕಾರ್ಯ. ಮಾಲಿನ್ಯಕಾರಕ ಕಾರ್ಬನ್ ಹೊರಸೂಸುವುದರಲ್ಲಿ ಅಮೆರಿಕ ಯಾವತ್ತೂ ಅಗ್ರಸ್ಥಾನದಲ್ಲಿದೆ. ವಿಶ್ವಸಂಸ್ಥೆಯ ಆಶ್ರಯದಲ್ಲಿ ಜರುಗಿದ ಹಲವು ಸಭೆಗಳಲ್ಲಿ ಅಮೆರಿಕ ಯಾವುದೇ ಒಪ್ಪಂದಕ್ಕೆ ಬರಲು ಸಿದ್ಧವಿರಲಿಲ್ಲ. ಹಾಗಾಗಿ ಅಮೆರಿಕ ಪ್ಯಾರಿಸ್ ಒಪ್ಪಂದದಿಂದ ಕಳಚಿಕೊಂಡದ್ದು ಅನಿರೀಕ್ಷಿತವೇನಲ್ಲ. ಒಂದೊಂದಾಗಿ ಹಿಂದಿನ ಅಮೆರಿಕದ ಅಧ್ಯಕ್ಷರುಗಳ ಅಧಿಕಾರಾವಧಿಯಲ್ಲಿ ಮಾಡಿಕೊಂಡಿದ್ದ ಒಪ್ಪಂದಗಳಿಂದ ಹಿಂದೆ ಸರಿಯಲು ಅಧ್ಯಕ್ಷ ಟ್ರಂಪ್ ಮುಂದಾಗಿದ್ದಾರೆ. ಮಧ್ಯಪ್ರಾಚ್ಯದಲ್ಲಿ ಇರಾನಿನೊಂದಿಗೆ ವಿರಸ ಹಳೆಯದು. ಷಾ ಪತನಾನಂತರ ಪ್ರಾರಂಭವಾದ್ದು ಅದು. ಸದ್ದಾಮ್ ಹುಸೇನ್‌ರನ್ನು ಇರಾನಿನ ವಿರುದ್ಧ ಎತ್ತಿಕಟ್ಟಿದ್ದು ಹಳೆಯ ಕತೆ. ನ್ಯೂಕ್ಲಿಯರ್ ಮಾರಕಾಸ್ತ್ರಗಳನ್ನು ನಿರ್ಮಿಸಲು ಇರಾನ್ ಹೊರಟಿದೆ ಎಂಬ ಆಪಾದನೆ ಜಾರ್ಜ್ ಬುಷ್ ಆಡಳಿತ ಕಾಲದಿಂದ ಇದ್ದದ್ದೆ. ಅಂತರರಾಷ್ಟ್ರೀಯ ಪರಮಾಣು ಏಜನ್ಸಿ ಅಂಥ ಪ್ರಯತ್ನವೇನೂ ನಡೆಯುತ್ತಿಲ್ಲ ಎಂದು ತನಿಖೆ ನಂತರ ವರದಿ ನೀಡಿದರೂ ಅಮೆರಿಕ ಮಾತ್ರ ಮೊಂಡುತನ ಮುಂದುವರಿಸಿತು. ಬರಾಕ್ ಒಬಾಮ ತಮ್ಮ ಎರಡನೇ ಅವಧಿಯಲ್ಲಿ ಇರಾನಿನೊಂದಿಗೆ ಮಾತುಕತೆ ನಡೆಸಿ ನ್ಯೂಕ್ಲಿಯರ್ ಒಪ್ಪಂದವೊಂದಕ್ಕೆ ಸಹಿಹಾಕಿ, ಸುದೀರ್ಘಕಾಲ ಇರಾನಿನ ಮೇಲೆ ಹೊರಿಸಿದ್ದ ಆರ್ಥಿಕ ದಿಗ್ಬಂಧನವನ್ನು ರದ್ದುಗೊಳಿಸಿದರು. ಈಗ ಟ್ರಂಪ್ ಒಪ್ಪಂದವನ್ನು ನಿರಾಕರಿಸಲು, ಮತ್ತೆ ದಿಗ್ಬಂಧನ ವಿಧಿಸಲು ಪ್ರಯತ್ನಿಸಿದ್ದಾರೆ.



ಉತ್ತರ ಕೊರಿಯಾದ ನ್ಯೂಕ್ಲಿಯರ್ ಪ್ರಯೋಗಗಳು, ಕ್ಷಿಪಣಿಗಳ ಉಡಾವಣೆ ಟ್ರಂಪ್ ರಕ್ತದೊತ್ತಡ ವರ್ಧಿಸಿದೆ. ಪ್ರತೀಕಾರದ ಆರ್ಭಟಗಳಾದಮೇಲೆ ಟ್ರಂಪ್‌ಗೆ ಈಗ ಜ್ಞಾನೋದಯವಾದಂತೆ ತೋರುತ್ತಿದೆ. ಯುದ್ಧೋನ್ಮಾದದಿಂದ ಪ್ರಯೋಜನವಾಗದು ಎಂಬ ಎಚ್ಚರ ಮೂಡುತ್ತಿದೆ. ಅಮೆರಿಕ ಮತ್ತು ಉತ್ತರ ಕೊರಿಯಾದ ಹಗೆತನ ಇಂದು ನಿನ್ನೆಯದಲ್ಲ, ಅವರವತ್ತು ಎಪ್ಪತ್ತು ವರ್ಷಗಳದ್ದು. ಇನ್ನೇನು ನ್ಯೂಕ್ಲಿಯರ್ ಯುದ್ಧವಾದೀತೇನೋ ಎನ್ನುವವರೆಗೆ ಹೋಗಿತ್ತು ಎರಡೂ ದೇಶಗಳ ವಾಕ್ಸಮರ. ಇನ್ನೊಂದೆಡೆ ಉತ್ತರ ಮತ್ತು ದಕ್ಷಿಣ ಕೊರಿಯಾಗಳ ಮಧ್ಯೆ ಮಾತುಕತೆಯಾಗಿದ್ದು ಚಳಿಗಾಲದ ಒಲಂಪಿಕ್ಸ್‌ಗೆ ಬೆಂಬಲದ ನಿರೀಕ್ಷೆ ಉಂಟಾಗಿದೆ. ಇದೊಂದು ಸ್ವಾಗತಾರ್ಹ ಬೆಳವಣಿಗೆ. ಇಸ್ರೇಲಿನ ರಾಜಧಾನಿ ಟೆಲ್ ಅವೀವ್‌ನಿಂದ ಜೆರೂಸಲೆಂಗೆ ಅಮೆರಿಕದ ರಾಯಭಾರಿ ಕಛೇರಿಯನ್ನು ವರ್ಗಾವಣೆ ಮಾಡುವ ನಿರ್ಧಾರ ಪ್ರಕಟಿಸಿ ಟ್ರಂಪ್ ಹೊಸ ಕಿಚ್ಚು ಎಬ್ಬಿಸಿದ್ದಾರೆ ಈ ಪ್ರದೇಶದಲ್ಲಿ. ವಿಶ್ವಸಂಸ್ಥೆಯ ಮಹಾಸಭೆಯು ಟ್ರಂಪ್ ನಿರ್ಧಾರವನ್ನು ಅತ್ಯಧಿಕ ಬಹುಮತದಿಂದ ತಿರಸ್ಕರಿಸಿದೆ. ಪಶ್ಚಿಮ ಏಶಿಯದ ಮುಸ್ಲಿಮ್ ರಾಷ್ಟ್ರಗಳು ಅಮೆರಿಕದ ಈ ನಿರ್ಧಾರವನ್ನು ಪ್ರತಿಭಟಿಸಿವೆ.

ಆರ್ಥಿಕವಾಗಿ, ಸೈನಿಕವಾಗಿ ಏಶಿಯಾ ಖಂಡದಲ್ಲಿ ಪ್ರಬಲಶಕ್ತಿಯಾಗಿ ಬೆಳೆಯುತ್ತಿರುವ ಚೀಣಾ ಅಮೆರಿಕದ ಅಧಿನಾಯಕತ್ವಕ್ಕೆ ಅತಿ ದೊಡ್ಡ ಸವಾಲಾಗಿದೆ. ಮತ್ತೆ ರಷ್ಯ, ಚೀಣಾಗಳೊಂದಿಗೆ ದ್ವೇಷ ಕಟ್ಟಿಕೊಂಡು ಶೀತಯುದ್ಧದ ವಾತಾವರಣ ಸೃಷ್ಟಿಸಲು ಟ್ರಂಪ್ ಪ್ರಯತ್ನಿಸುತ್ತಿದ್ದಾರೆ. ಇದರಲ್ಲಿ ಭಾರತವನ್ನು ಈ ಪ್ರದೇಶದಲ್ಲಿ ಎತ್ತಿಕಟ್ಟಲು ಅಮೆರಿಕ ಸಜ್ಜಾಗಿದೆ. ಇದಕ್ಕೆ ಮೋದಿ ಸರಕಾರ ಸಿದ್ಧವಾಗಿದೆ. ಅಮೆರಿಕದೊಂದಿಗೆ ಸಹಯೋಗವನ್ನು ವಿಸ್ತರಿಸಿರುವ ಮೋದಿ ಸರಕಾರ ಈಗ ಅಮೆರಿಕದ 'ಸಮರ ತಂತ್ರದ ಭಾಗಿ' (ಸ್ಟ್ರಾಟೆಜಿಕ್ ಪಾರ್ಟನರು). ಇಸ್ರೇಲಿನೊಂದಿಗೆ ಸಂಬಂಧಗಳನ್ನು ವರ್ಧಿಸುತ್ತಿರುವುದೇ ಅದಕ್ಕೆ ಸಾಕ್ಷಿ. ಸೂಪರ್ ಪವರ್ ಆಗುವ ಗುಂಗಿನಲ್ಲಿರುವ ಮೋದಿ, ಟ್ರಂಪ್ ಬೀಸಿರುವ ಬಲೆಗೆ ಬೀಳುತ್ತಿದ್ದಾರೆ. ಚೀಣಾದ ಹಗೆತನ ಕಟ್ಟಿಕೊಳ್ಳುತ್ತಿದ್ದಾರೆ. ಆಸ್ಟ್ರೇಲಿಯ, ಜಪಾನ್, ಅಮೆರಿಕ, ಭಾರತ, ಇಸ್ರೇಲ್ ಆಕ್ಸಿಸ್ ಸ್ಥಾಪನೆಯಾಗಿದೆ. ಭಾರತ ಪರಂಪರಾಗತ ಮೈತ್ರಿ ಸಂಬಂಧಗಳನ್ನು ಶಿಥಿಲಗೊಳಿಸಿ ಟ್ರಂಪ್ ಅಮೆರಿಕ ಜೊತೆ ಕೈಜೋಡಿಸಿದೆ. ಇದು ದೇಶವನ್ನು ಎಲ್ಲಿಗೆ ಕೊಂಡೊಯ್ಯುತ್ತದೆ ನೋಡಬೇಕು. ಪಾಕಿಸ್ತಾನದ ವಿಚಾರದಲ್ಲಿ ಟ್ರಂಪ್ ಅನುಸರಿಸುತ್ತಿರುವ ನೀತಿಯಿಂದ ಭಾರತಕ್ಕೆ ಯಾವ ಪ್ರಯೋಜನವೂ ಆಗದು. ಭಯೋತ್ಪಾದಕರ ಮೇಲೆ ಕ್ರಮಕೈಗೊಳ್ಳದ ಪಾಕಿಸ್ತಾನಕ್ಕೆ ನೀಡುತ್ತಿರುವ ನೆರವನ್ನು ಸ್ಥಗಿತಗೊಳಿಸುವುದಾಗಿ ಹೇಳುತ್ತಿರುವುದು ಕೇವಲ ಪ್ರಚಾರಕ್ಕಾಗಿ. ಅಫ್ಘಾನಿಸ್ತಾನದಲ್ಲಿ ಸಿಕ್ಕಿಕೊಂಡಿರುವ ಅಮೆರಿಕಕ್ಕೆ ಪಾಕಿಸ್ತಾನವೇ ಆಸರೆ. ಅಲ್ಲದೆ ಪಾಕಿಸ್ತಾನ ಯಾವತ್ತೂ ಅಮೆರಿಕದ ನೆಚ್ಚಿನ ಭಂಟ. ಇದನ್ನು ಮರೆಯಲಾಗದು.

ಬೇಕಾದಷ್ಟು ಬೊಬ್ಬೆ ಹೊಡೆಯುತ್ತಿರುವ ಟ್ರಂಪ್ ಕಾರ್ಪೊರೇಟ್ ವಲಯದ ಕೈಗೂಸು. ಅದಕ್ಕೆ ಅಹಿತವಾಗುವ ಯಾವುದೇ ಕ್ರಮವನ್ನು ಆತ ಕೈಗೊಳ್ಳಲಾರ. ಪ್ರಪಂಚದಾದ್ಯಂತ ಹಲವು ಕಡೆಗಳಲ್ಲಿರುವ ಸೇನಾ ನೆಲೆಗಳನ್ನು ತೆರವುಗೊಳಿಸಲು ಪ್ರಯತ್ನಿಸಿದರೆ ಟ್ರಂಪ್ ಉಳಿಯಲಾರ. ಅಮೆರಿಕದ ಮಿಲಿಟರಿ–ಇಂಡಸ್ಟ್ರಿಯಲ್ ಕಾಂಪ್ಲೆಕ್ಸ್ ಅಷ್ಟು ಪ್ರಬಲವಾಗಿದೆ, ಪ್ರಭಾವಶಾಲಿಯಾಗಿದೆ.

ಮುಂದಿನ ವರ್ಷಗಳಲ್ಲಿ ಟ್ರಂಪ್ ಇನ್ನಷ್ಟು ಕಿರಿಕಿರಿ ಉಂಟುಮಾಡುವ ಸಂಭವ ಹೆಚ್ಚು. ವರ್ಲ್ಡ್ ಟ್ರೇಡ್ ಸಂಸ್ಥೆ, ಯುನೆಸ್ಕೋ, ಮುಂತಾದ ಸಂಘಟನೆಗಳಿಂದ ದೂರವಾಗುವ ಸೂಚನೆ ಈಗಾಗಲೇ ಇದೆ. ಇನ್ನೂ ಮೂರು ವರ್ಷ ಅಧಿಕಾರದಲ್ಲಿರುವ ಈತ ಸೃಷ್ಟಿಸುವ ಅವಾಂತರಗಳನ್ನು ಜಗತ್ತು ಸಹಿಸುವುದು ಅನಿವಾರ್ಯ.

**ಸೀಯಾರ್ಕೆ**

'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫

# ಅನುಭಾವದ ದನಿ ಬದುಕಿಗೆ ಬನಿ



ಮನುಷ್ಯ ಮೂಲತಃ ಪ್ರಾಣಿಗಳ ಸ್ವಭಾವದಿಂದ ಸ್ವಲ್ಪ ಭಿನ್ನವಾಗಿ ತನ್ನನ್ನು ಸಮಾಜವೆಂಬ ಪರಿಕಲ್ಪನೆಯಡಿ ಗುರುತಿಸಿಕೊಂಡಿದ್ದಾನೆ. ಪ್ರಾಣಿಗಳ ಅಭಿವ್ಯಕ್ತಿಗೆ, ಮನುಷ್ಯನ ಅಭಿವ್ಯಕ್ತಿಗೆ ದಕ್ಕಿದಷ್ಟು ವಿವಿಧ ಪರಿಕರಗಳಿಲ್ಲ. ಇಲ್ಲಿ ಭಾವನೆಗಳ ಭಿನ್ನ ಆಯಾಮಗಳು ಮನುಷ್ಯನನ್ನು ಭಿನ್ನವಾಗಿ, ವಿಶಿಷ್ಟವಾಗಿ ಬದುಕುವಂತೆ ಲೋಕದಲ್ಲಿ ಉಳಿಸಿವೆ. ಭಾವನೆಗಳ ಚೈತನ್ಯಮಯ ಶಕ್ತಿಯಿಂದಲೇ ಮನುಷ್ಯ ತನ್ನ ಬದುಕನ್ನು ಉತ್ತಮಿಕೆಯಾಗಿಯೂ ರೂಪಿಸಿಕೊಂಡಿದ್ದಾನೆ, ಜೊತೆಗೆ ತಾನೇ ಬದುಕಲಾರದಷ್ಟು ಕಷ್ಟದ ಬದುಕನ್ನೂ ರೂಢಿಸಿಕೊಂಡಿದ್ದಾನೆ. ಅದನ್ನೇ ವಚನಕಾರರು 'ಆಚಾರವೇ ಸ್ವರ್ಗ ಅನಾಚಾರವೇ ನರಕ' ಎಂದಿದ್ದಾರೆ. ಉತ್ತಮ ನಡವಳಿಕೆಯ ಆಚಾರ ವಿಚಾರಗಳು ಸಮಾಜವನ್ನು ಉತ್ತಮಗೊಳಿಸಿದರೆ, ಮನುಷ್ಯ ತನ್ನ ಸುತ್ತಲು ಬದುಕುವ ಸ್ವರ್ಗೀಯ ಸಮಾನವಾದ ನೆಮ್ಮದಿಯ ಬದುಕನ್ನು ಸೃಷ್ಟಿಸಿಕೊಳ್ಳುತ್ತಾನೆ. ಆದರೆ ಅನೈತಿಕ, ವಿಕ್ಷಿಪ್ತಮನಸ್ಥಿತಿಯ ಸ್ವಾರ್ಥದ ಬದುಕು, ಸಂಕೀರ್ಣವಾದ ಸಂಕುಚಿತ ಮನೋಭಾವದಲ್ಲಿ ನರಕವಾಗುತ್ತದೆ. ಇಂತಹ ಸಂಕೀರ್ಣ ಮನಸ್ಥಿತಿಯ ಭಾವನೆಗಳನ್ನು ಹೋಗಲಾಡಿಸಲು ಕನ್ನಡದ ಅನೇಕ ತತ್ವಪದಕಾರರು, ಕವಿಗಳು, ದಾರ್ಶನಿಕರು ತಾವು ಬದುಕಿನಲ್ಲಿ ಕಂಡ ಅನುಭವಗಳನ್ನು ತಮ್ಮ ಬದುಕಿನಲ್ಲಿ ಅಳವಡಿಸಿಕೊಂಡು, ಪರಿಪಾಕಗೊಳಿಸಿ, ನುಡಿದಂತೆ ಬದುಕಿ ಅನುಭಾವದ ನಡೆಯನ್ನು ಅನುಭಾವದ ನುಡಿಯನ್ನು ನೀಡುವ ಮೂಲಕ ಅನುಭಾವ ಸಾಹಿತ್ಯವನ್ನು ರಚಿಸಿ ಕನ್ನಡ ಸಾಹಿತ್ಯವನ್ನು ಸಮೃದ್ಧಗೊಳಿಸಿದ್ದಾರೆ. ಇಂತಹ ಕನ್ನಡ ಸಾಹಿತ್ಯದ ಅನುಭಾವಿ ಕವಿಗಳಲ್ಲಿ ಬೇಂದ್ರೆ ಮತ್ತು ಮಧುರಚೆನ್ನರು ಪ್ರಮುಖರು.

*ಹದಾ ಒಳಗಾ ಇಲ್ದಾ ತಮ್ಮ*
*ಪದ ಹೊರಗಾ ಬರೋದಿಲ್ಲಾ*
*ಕದ ತೆರೆಯೋದಿಲ್ಲ ಅಂತಃಕರಣ* – **ಬೇಂದ್ರೆ**

ಕವಿಯೊಬ್ಬನ ಅಂತಃಕರಣ ಮಾತ್ರವಲ್ಲ ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಮನಸ್ಸನ್ನು ಶುದ್ಧವಾಗಿಟ್ಟುಕೊಂಡಲ್ಲಿ, ನೈತಿಕತೆಯನ್ನು ಕಾಪಾಡಿಕೊಂಡಲ್ಲಿ ಭಾವಶುದ್ಧವಾಗುತ್ತದೆ. ತನ್ನ ಸುತ್ತಲವರೊಡನೆ ವ್ಯವಹರಿಸುವ ಆತನ ಮಾತು, ಬದುಕಿನ ಬದ್ಧತೆ, ಭವಿಷ್ಯದ ಕಾಳಜಿ, ನಾಳಿನ ನಂಬಿಕೆಗಳು ಚಿಗುರೊಡೆಯುತ್ತವೆ. ಆಗ ವ್ಯಕ್ತಿ ವಿಕ್ಷಿಪ್ತನಾಗುವುದಿಲ್ಲ, ಹಂತಕನಾಗುವುದಿಲ್ಲ, ಆತ್ಮಹತ್ಯೆಗೂ ಪ್ರಯತ್ನಿಸುವುದಿಲ್ಲ. ಸಕಲ ಜೀವರಾಶಿಗಳಿಗೂ ಒಳಿತನ್ನು ಬಯಸುವ ಉತ್ತಮಿಕೆ ಆತನಲ್ಲಿ ನೆಲೆಸುತ್ತದೆ. ಇಂತಹ ಭಾವ ಹದಗೊಂಡಾಗ ಮಾತ್ರ ಅಂತಃಕರಣದ ಕದ ತೆರೆಯುತ್ತದೆ ಎಂಬುದು ಬೇಂದ್ರೆಯವರ ನಿಲುವು.

ಮತ್ತೊಬ್ಬ ಅನುಭಾವಿ ಕವಿ ಮಧುರಚೆನ್ನರ ಮೂಲ ಹೆಸರು 'ಹಲಸಂಗಿ ಚನ್ನಮಲ್ಲಪ್ಪ ಗಲಗಲಿ'. ಬಿಜಾಪುರ ಜಿಲ್ಲೆಯ ಹಲಸಂಗಿಯವರು. ಭಾವ ಶುದ್ಧತೆಯ ಬಗ್ಗೆ ಈ ರೀತಿ ಹೇಳಿದ್ದಾರೆ.

*"ಬುದ್ಧಿಯೇ ಬಾಧಕವು ಬುದ್ಧಿಯೇ ಸಾಧಕವು*
*ಬುದ್ಧಿಯೇ ಮಾನವನ ಭಿತ್ತಿಯಯ್ಯ*
*ಬುದ್ಧಿಯಿಂದಲೆ ಭಾವ ಬೀಳುತೇಳುತ ಸಾಗಿ*
*ನಿಷ್ಠೆ ನಿಬ್ಬೆರಗಾಗಿ ನಿಲುವುದಯ್ಯಾ"*

ಕವಿ, ಬದುಕಿನ ನಿಷ್ಠೆಯ ಬಗ್ಗೆ ಮಾತನಾಡುತ್ತಾ ಭಾವದ ಅಭಿವ್ಯಕ್ತಿ ಮನಸ್ಸಿನ ಅನುಭವದ ಮೇಲೆ ನಿರ್ಧಾರವಾಗುತ್ತದೆ, ಬುದ್ಧಿಯ ಕಾರಣದಿಂದ ಚರ್ಚೆ, ವಿಮರ್ಶೆ, ತರ್ಕಗಳ ಪರಿಣಾಮವಾಗಿ ಬುದ್ಧಿ ಭಾವದ ಭಿತ್ತಿಯಾಗಿ ಇರುತ್ತದೆ. ಹೀಗೆ ವಿವೇಚಿಸಿ ಒಪ್ಪಿಕೊಳ್ಳುವ ಭಾವ ತನ್ನ ಏಳು ಬೀಳುಗಳಲ್ಲಿ ಸಾಗಿ ಜೀವನ ನಿಷ್ಠೆಗೆ ಮಾತ್ರ ಅದು ಸೋಲುತ್ತದೆ. ಅಂದರೆ ಮಾನವ ತನ್ನ ಬದುಕಿನಲ್ಲಿ ತಾನು ನಂಬಿದ ತತ್ವ ಸಿದ್ಧಾಂತಗಳನ್ನು, ತರ್ಕಬದ್ಧವಾಗಿ ವಿವೇಚಿಸಿಯೂ, ಅವನ ಭಾವ ಮಾತ್ರ ಜೀವನಿಷ್ಠವಾದ ತಾತ್ವಿಕತೆಗೆ ಮಾತ್ರ ಬೆರಗುಗೊಂಡು ನೆಲೆಸುತ್ತದೆ ಎಂಬುದು ಇಲ್ಲಿ ಕವಿಯ ನಿಲುವು.

ಮನುಷ್ಯನ ಅನುಭವದ ಸಾತತ್ಯತೆಯ ಫಲವಾಗಿ ಉಂಟಾದ ಭಾವದ ಅನಾವರಣ ಆತನನ್ನು ಅನುಭಾವದ ಹಂತಕ್ಕೆ ಒಯ್ಯುತ್ತದೆ. ಉದಾ: 'ಮಾ ನಿಷಾದ' ಬೇಡನೇ ಕೊಲ್ಲಬೇಡ ನಿಲ್ಲು. ಎನ್ನುವ ಮಾತು ವಾಲ್ಮೀಕಿ ಮಹರ್ಷಿಯಲ್ಲಿ ಆ ಕ್ಷಣದಲ್ಲಿ ಉಂಟುಮಾಡಿದ ಭಾವ, ಉದ್ವೇಗದಿಂದ ಶಪಿಸಿದ್ದು, ದುಃಖ ಮತ್ತು ಕರುಣಾ ರಸಗಳ ಸ್ಥಾಯಿಯಾಗಿ ವರ್ತಿಸಿದ್ದು ಮನಸ್ಸು. ಈ ಮನಸ್ಸಿನಲ್ಲಿ ಮೂಡಿದ ಭಾವದಿಂದಾಗಿಯೇ ವಾಲ್ಮೀಕಿಗೆ ಒಂದು ಅದ್ಭುತ ಮಹಾಕಾವ್ಯವನ್ನು ಬರೆಯಲು ಪ್ರೇರಣೆಯಾಯಿತು. ಒಟ್ಟಾರೆಯಾಗಿ ವ್ಯಕ್ತಿಯೊಬ್ಬನಲ್ಲಿ ಉಂಟಾಗುವ ಅನುಭವದ ಸಾತತ್ಯ, ಇದರಿಂದ ವ್ಯಕ್ತಿ ತನ್ನ ಅನುಭವದಲ್ಲಿ ಕಂಡುಕೊಂಡ ಪೂರ್ಣದೃಷ್ಟಿ 'ಅನುಭಾವ'ವನ್ನು ತಂದುಕೊಡಬಲ್ಲದು.

'ಅನುಭಾವ' ಎಂಬ ಪದ ೧೨ನೇ ಶತಮಾನದಲ್ಲಿ ಕನ್ನಡದ ನೆಲದಲ್ಲಿ 'ವಚನಕಾರರು' ತಮ್ಮ ಅನುಭವತ್ಮಕ ಚಿಂತನೆಗಳ ಚರ್ಚೆಗಳ ನಿಲುವುಗಳಿಗೆ ಕಂಡುಕೊಂಡ ಒಂದು ಪಾರಿಭಾಷಿಕ ಪದ.

*ಅನುಭಾವ ಅನುಭಾವ ಎಂದೆಂಬಿರಿ*
*ಅನುಭಾವವೆಂಬುದು ನೆಲದ ಮರೆಯ ನಿಧಾನ*
*ಕಾಣಿಭೋ !*
*ಅನುಭಾವವೆಂಬುದು ಶಿಶುಕಂಡ ಕನಸು ಕಾಣಿಭೋ !*
*ಅನುಭಾವವೆಂಬುದು ಅಂತರಂಗದ ರತ್ನ ಕಾಣಿಭೋ !*
*ಅನುಭಾವವೆಂಬುದು ರಚ್ಚೆಯ ಮಾತೆ*
*ಅನುಭಾವವೆಂಬುದು ಸಂತೆಯ ಸುದ್ದಿಯೇ*
*ಅನುಭಾವವೆಂಬುದು ಬೀದಿಯ ಪಸರವೇ*

*ಏನೆಂಬೆ ಹೇಳಾ ಮಹಾ ಘನವನು*
*ಆನೆಯ ಮಾನದೊಳಿಕ್ಕಿದಡಡಗುವುದೆ –*
*ದರ್ಪಣದೊಳಡಗುವುದಲ್ಲದೆ* – **ಚನ್ನಬಸವಣ್ಣ**

ಶ್ರಮಸಂಸ್ಕೃತಿ ಹಿನ್ನೆಲೆಯ ಶರಣರ ಆಲೋಚನೆ ಅನುಭವದಿಂದ ಪಡೆದ ಬದುಕಿನ ಸಾತತ್ಯವನ್ನು ಗ್ರಹಿಸಿ

**ಮಹದೇವ ಆರ್.**

ಸತ್ಯದ ಕಡೆ ತಮ್ಮ ತನುಮನವನ್ನು ತರಬೇತು ಗೊಳಿಸಿಕೊಳ್ಳುವುದಾಗಿದೆ. ವಚನಕಾರರಾದ ಚನ್ನಬಸವಣ್ಣನವರು 'ಅನುಭಾವ' ಎನ್ನುವ ಪದ ನಮ್ಮ ದೃಷ್ಟಿಗೆ, ಕಣ್ಣಿನ ನೋಟಕ್ಕೆ ಕಾಣದೇಯಿರುವ ಭೂಮಿಯ ಚಲನೆಯು ಹೇಗೆ ಸದಾ ಚಲನೆಯ ಸ್ಥಿತಿಯಲ್ಲಿರುತ್ತದೆಯೋ ಹಾಗೆಯೇ ಅನುಭಾವ ಎನ್ನುವ ಪದ ಜನರ ನಡುವೆ ಚಾಲ್ತಿಯಲ್ಲಿದ್ದರೂ ಅದು ಅರಿವಿದ್ದವಗೆ, ಕಂಡುಕೊಂಡವಗೆ ಮಾತ್ರ ಗೋಚರವಾಗುವ ಭಾವಸ್ಥಿತಿ. ಹಾಗೂ ಜನನದ ನಂತರದಲ್ಲಿ ಶಿಶು ಭೌತಿಕ ಜಗತ್ತಿನ ಯಾವ ಪರಿವೆಯೂ ಇಲ್ಲದೆ ಮಲಗಿರುವಾಗ ತನ್ನ ತುಟಿಯ ಚಲನೆಯ ಮೂಲಕ ನಗು ಸೂಸುತ್ತದೆ. ಜೊತೆಗೆ ಕಣ್ಣಿನ ಚಲನೆ ಮಗುವಿನ ಕನಸು ಕಾಣುತ್ತಿರುವ ರೀತಿಯನ್ನು ನಮಗೆ ಗೋಚರವಾಗಿಸುತ್ತದೆ. ಆದರೆ ಶಿಶು ಕಂಡ ಕನಸು ಶಿಶುವಿನ ಅನುಭವಕ್ಕೆ ಬರುತ್ತದೆಯೇ ಹೊರತು ಇತರರಿಗೆ ಅಲ್ಲ.



ಮನುಷ್ಯ ಭೌತಿಕವಾಗಿ ಬಾಹ್ಯ ಪ್ರಪಂಚದೊಟ್ಟಿಗೆ ವ್ಯವಹರಿಸಿದಾಗ್ಯೂ, ತನ್ನೊಳಗಿನ ಭಾವ ಪ್ರಪಂಚದ ಚಿಂತನ, ಧ್ಯಾನಗಳೊಡನೆ ಏಕಕಾಲದಲ್ಲಿ ಮುಖಾಮುಖಿಯಾಗುತ್ತಿರುತ್ತಾನೆ. ಇಂತಹ ಅಂತರಂಗದ ಆಲೋಚನೆಗಳು ಮನುಷ್ಯನನ್ನು ಸರಳಜೀವಿಯಾಗಿಯೂ, ಸಂತನಂತೆಯೂ, ಉತ್ತಮ ಗುಣವುಳ್ಳವನಂತೆಯೂ ಬದುಕಿಸುತ್ತವೆ. ಈ ನೆಲದ ಬದುಕಿಗೆ ಜೀವಸೆಲೆಗಳ ಭಾವಾಭಿವ್ಯಕ್ತಿಯಾಗಿಯೂ ಕೂಡ ಲೋಕದ ಹಿತ ಬಯಸುತ್ತದೆ. ಅದು ಅಂತರಂಗದ ರತ್ನ ಎಂದು ಹೇಳಿದ್ದಾರೆ.

ಘನವಾದ ಮಹತ್ತಾದ ವಿಚಾರವನ್ನು ಬೀದಿಯಲ್ಲಿ ನಿಂತು ಹರಟುವಂತೆ ಆಡಲು ಬರುವುದಿಲ್ಲ. ಸಂತೆಯಲ್ಲಿ ಆಡಿದ ಯಾವ ಮಾತುಗಳು ಆ ಕ್ಷಣಕ್ಕೆ ಮಾತ್ರ ವ್ಯಾಪಾರದ ಮಾತುಗಳಾಗಿರುತ್ತವೋ ಹಾಗೆ ಆತುರಕ್ಕೆ, ಆಕ್ಷಣಕ್ಕೆ ಆಡಿದ ಮಾತುಗಳಂತೆ 'ಅನುಭಾವ'ವನ್ನು ಗುರುತಿಸಲಾಗದು. ಅನುಭಾವದ ವಿಚಾರವು ತಾತ್ವಿಕವೂ ಘನವೂ, ಗಹನವೂ ಆದದ್ದು. ಆದುದರಿಂದ 'ಆನೆಯಮಾನದೊಳಿಕ್ಕಿ ದೊಡಡಗುವುದೇ' ಎನ್ನುವ ಮಾತು ಇಲ್ಲಿ ಹೆಚ್ಚು ಪರಿಣಾಮಕಾರಿಯಾದ ರೂಪಕವಾಗಿದೆ. ದೊಡ್ಡ ದೊಡ್ಡ ಮಾತುಗಳಿಂದ ಅನುಭಾವದ ಮಹತ್ತನ್ನು ಅಳೆಯಲು ಸಾಧ್ಯವಿಲ್ಲ. ಹೇಗೆ ದರ್ಪಣದಲ್ಲಿ ರೂಪವನ್ನು ಪ್ರತಿಬಿಂಬಿಸಬಹುದೋ ಹಾಗೆ ನಿರ್ಮಲವಾದ, ಪಾರದರ್ಶಕವಾದ ನೈತಿಕ ಶುದ್ಧಿಯ ಮನಸ್ಸಿನಲ್ಲಿ 'ಅನುಭಾವ'ವನ್ನು ಪ್ರತಿಬಿಂಬಿಸಲು ಸಾಧ್ಯವಿದೆ ಎನ್ನುವುದು ಚೆನ್ನಬಸವಣ್ಣನವರ ನಿಲುವು. ಇದು ಸತ್ಯವೂ ಕೂಡಾ ಆಗಿದೆ.

ಅನುಭಾವ ಎಂಬ ಪದವನ್ನು ನಾವು ಗ್ರಹಿಸುವಾಗ ಕೆಲವರು ಮಾತ್ರ ಅನುಭಾವಿಗಳಾಗುತ್ತಾರೆ. ಅನುಭಾವಿಗಳಾಗುವುದಕ್ಕೆ ಸಂಸಾರ ಬಂಧನ ಗಳಿಂದ ಮುಕ್ತಿಹೊಂದಿ ಸನ್ಯಾಸಿಗಳು ಪಡೆಯುವ ಜ್ಞಾನ ಎಂದು ಹೆಚ್ಚಾಗಿ ಭಾವಿಸುತ್ತೇವೆ. ಅದು ಅಕ್ಷರಶಃ ತಪ್ಪು. ಏಕೆಂದರೆ ನಮಗೆ ನಮ್ಮ ನೆಲದ ಶರಣರ ನಿದರ್ಶನಗಳು, ಬದುಕನ್ನು ಗಂಭೀರವಾಗಿ ಪರಿಗಣಿಸಿ, ಮಾನವತೆಯ ನೆಲೆಯಿಂದ ಚಿಂತಿಸುವವರು ಯಾರು ಬೇಕಾದರೂ ಅನುಭಾವಿಗಳಾಗಬಹುದು, ಅದಕ್ಕೆ ಪರಿಶ್ರಮ ಮುಖ್ಯ ಎನ್ನುವುದನ್ನು ನಿರೂಪಿಸುತ್ತವೆ. ಇದಕ್ಕೆ ಪೂರಕವಾಗಿ ಕನ್ನಡದ ಅನುಭಾವಿ ಪರಂಪರೆಯ ಕುರಿತಾಗಿ ತತ್ವಜ್ಞಾನಿ ಡಾ॥ ಆರ್. ಡಿ. ರಾನಡೆಯವರು ಬರೆದಿರುವ "ಕನ್ನಡ ಸಂತರ ಪರಮಾರ್ಥ ಪಥ" ಎನ್ನುವ ಗ್ರಂಥವು ಅನುಭಾವಿಗಳ ಲಕ್ಷಣದ ಕುರಿತು ಹೆಚ್ಚು ಮಾಹಿತಿಗಳನ್ನು ಒದಗಿಸುತ್ತದೆ.

ಅನುಭಾವಿ ಎಂದರೆ ಯಾರು ? ಎನ್ನುವ ಪ್ರಶ್ನೆಯನ್ನು ಕೇಳಿಕೊಂಡಾಗ ಎಲ್ಲಾ ದಾರ್ಶನಿಕರ ನಿರೂಪಣೆಗಳಿಂದ ನಮಗೆ ವೇದ್ಯವಾದರೂ ಅನುಭಾವಿ ಸರಳ ಜೀವಿಯಾಗಿರುತ್ತಾನೆ, ತಾನು ಪಡೆದ ಎಲ್ಲಾ ಜ್ಞಾನವನ್ನು ಸಮಾಜಕ್ಕೆ ನೀಡಿ ಸಮಾಜವನ್ನು ಸಮಾನತೆಯ ಮನುಷ್ಯತ್ವದ ನೆಲೆಬೀಡಾಗಿ ಮಾಡುವುದು ಆತನ ಉದ್ದೇಶವಾಗಿರುತ್ತದೆ. ಸಾಮಾನ್ಯನೂ ಅನುಭಾವಿಯ ಮಟ್ಟಕ್ಕೆ ತಲುಪಬಹುದು. ಸಾಮಾನ್ಯವ್ಯಕ್ತಿ ತನ್ನ ನಿತ್ಯದ ಬದುಕಿನಲ್ಲಿ ದುಃಖವಿದೆ, ಸುಖ ಬರುವುದೇಯಿಲ್ಲ ಎಂದು ಭಾವಿಸುವ ಅವಶ್ಯಕತೆಯಿಲ್ಲ ಎಂಬುದನ್ನು ಕವಿ 'ಮಧುರಚೆನ್ನರು' ದುಃಖವನ್ನು ಕುರಿತು "ದುಃಖವಿಲ್ಲದಿದ್ದರೆ ಮಾನವನ ಆತ್ಮೋನ್ನತಿಯೇ ಆಗುತ್ತಿರಲಿಲ್ಲ. ಸ್ವೇಚ್ಛಾಚಾರಿ ಯಾಗಬೇಕೆಂಬ ಮಾನವನ ಪ್ರಾಣಿತಃ ಸ್ವಭಾವನ್ನು ದಮನ ಮಾಡಲಿಕ್ಕೆ, ದೋಷವನ್ನು ತಡೆಯಲಿಕ್ಕೆ ದುಃಖದ ಅವಶ್ಯಕತೆಯಿದೆ. ಆಯಾಸವಿಲ್ಲದ ಸುಖವನ್ನು ಬಯಸುವ, ಶ್ರಮವಿಲ್ಲದೆ ಅನ್ಯರ ಲಾಭವನ್ನು ಅಪಹರಿಸಿ ಕೊಂಡು ಬದುಕುವ ತಮೋಮಯ ಬದುಕನ್ನು ಅಡ್ಡಗಟ್ಟಿ, ಬದುಕಿಗೆ ಧೀರತೆಯನ್ನೂ ತೇಜಸ್ಸನ್ನೂ ತಂದುಕೊಡುವುದು ದುಃಖದ ಉದ್ದೇಶವಾಗಿದೆ. ದುಃಖದ ಹೊಡೆತದಿಂದ ಬದುಕು ಜರ್ಜರಿತವಾದಂತೆ ಕಾಣುವುದೇನೋ ನಿಜ, ಆದರೆ ಅದು ಮುಂದಿನ ಬಲದ ಬೀಜವಾಗಿದೆ. ಅಂತೆಯೇ ಮಾನವ ಜೀವನದ ಉನ್ನತಿಗಾಗಿಯೇ ಸೃಷ್ಟಿಯು ದುಃಖವೆಂಬ ಪರಮೋಪಾಯವನ್ನು ಯೋಜಿಸಿದೆ" ಎಂದು ಹೇಳಿದ್ದಾರೆ.

ಅನುಭಾವಿಗಳ ಆಲೋಚನೆ ಈ ರೀತಿಯಾದದ್ದು. ಅನುಭಾವಿಗಳ ಭಾಷೆ ಕೂಡಾ ಅಂತ್ಯದಿಂದಲೇ ಆರಂಭವಾಗುವ ವಿಶಿಷ್ಟ ರೀತಿಯದು. ಮಧುರಚೆನ್ನರ ಅಂತಿಮ ಸಂಸ್ಕಾರದ ಸಂದರ್ಭದಲ್ಲಿ 'ಬೇಂದ್ರೆ'ಯವರು ಹೇಳಿದ್ದು "ಚನ್ನಮಲ್ಲಪ್ಪನನ್ನು ಹೂತಿಲ್ಲ ಬಿತ್ತಿದ್ದೇವೆ"– ಈ ಬಿತ್ತುವಿಕೆಯೇ ಅಧ್ಯಾತ್ಮ ಜೀವನದ ಉದ್ದೇಶ ಹಾಗೂ ಅನುಭಾವಿಗಳ ಧನಾತ್ಮಕ ಅಭಿವ್ಯಕ್ತಿ. ಸಾವು ಎನ್ನುವ ಶಬ್ದವನ್ನು ಅನುಭಾವಿಗಳು ತಮ್ಮ ಪರಿಭಾಷೆಯಲ್ಲಿ ಬಳಸುವ ರೀತಿಯನ್ನು ಗಮನಿಸಿದಾಗ 'ಶಿಶುನಾಳ ಶರೀಫರು' "ಬಿಡತೇನಿ ದೇಹ ಬಿಡತೇನಿ" ಎಂದು ಹೇಳುವ ಈ ಮಾತು ಹಾಗೂ ನಮ್ಮ ಜನಪದರಲ್ಲಿ "ಸಂತೆ ತೀರಿತು, ಕಂತೆ ಒಗೆದ" ಎನ್ನುವ ಮಾತು ಅನುಭಾವಿಗಳ ಭಾವನೆಗಳು ಎಂದೂ ಅಂತ್ಯವನ್ನು ಸೂಚಿಸುವುದೇಯಿಲ್ಲ ಎಂಬುದನ್ನು ಸೂಚಿಸುತ್ತವೆ. ಅದು ಅಂತ್ಯವೆನ್ನುವ ಲೌಖಿಕ ಬದುಕಿನಿಂದಾಚೆಗೆ ವಾಸ್ತವದಲ್ಲಿ ಚಿಗುರಲ್ಪಟ್ಟ ಒಂದು ಭಾವದ ಸ್ಥಿತಿ. ಹೀಗೆ ಅನುಭಾವಿಗಳು ದೇವರು–ಧರ್ಮ ಹುಟ್ಟು–ಸಾವು ಎನ್ನುವ ಪದಗಳಿಗೆ ಹೊಸಹುಟ್ಟನ್ನು ನೀಡಿದವರು. ಕೆಲವೇ ಕೆಲವರ ಸ್ವತ್ತೆಂದು ಭಾವಿಸುವ ಪ್ರಕೃತಿಯ ಅನಂತಶಕ್ತಿಯನ್ನು ಎಲ್ಲರದೂ ಎಂದು ಪ್ರತಿಪಾದಿಸಿದವರು, ಈ ಜಗತ್ತಿನಲ್ಲಿ ನಾನು ಏನು ಅಲ್ಲ ಎಂದು ಬದುಕುವ ವ್ಯಕ್ತಿಗಳ ಕೀಳರಿಮೆಯನ್ನು ಹೋಗಲಾಡಿಸಿ ಆತ್ಮದ ಘನತೆಯನ್ನು ಸಾರಿದವರು ಅನುಭಾವಿಗಳು.

ಹೀಗೆ ಕನ್ನಡ ಸಾಹಿತ್ಯದಲ್ಲಿ ಅನುಭಾವಿ ಕವಿಗಳೆನಿಸಿಕೊಂಡ ಬೇಂದ್ರೆ ಮತ್ತು ಮಧುರಚೆನ್ನರ ಕಾವ್ಯಗಳು 'ಅನುಭಾವ ಸಾಹಿತ್ಯ'ದ ವಿಪುಲ ಆಗರಗಳಾಗಿವೆ. ಅನುಭಾವ ಎನ್ನುವ ಪದ, ಅನುಭಾವಿ ಎನ್ನುವ ವ್ಯಕ್ತಿತ್ವ, ಇಂದಿನ ಜಾಗತೀಕರಣದ ಬದುಕಿನಲ್ಲಿ ನಿರ್ಜೀವ ಭಾವನೆಗಳಲ್ಲಿ ಬದುಕುತ್ತಿರುವ ಜನರಿಗೆ ಸತ್ವಯುತವಾದ ಧೀರತೆಯ ಬದುಕನ್ನು ಸಾಮಾಜಿಕ ಸ್ವಾಸ್ಥ್ಯವನ್ನು ಕಾಪಾಡುವ ಮನುಷ್ಯನ ಬದುಕಿನ ನೈತಿಕ ಎತ್ತರವನ್ನು ಗಳಿಸಿಕೊಡುವ ಮಾರ್ಗವಾಗಿವೆ. ಇಂತಹ ವ್ಯಕ್ತಿತ್ವವನ್ನು ಕನ್ನಡದ ಶ್ರೇಷ್ಠ ಸಾಹಿತಿಗಳಾದ ಬೇಂದ್ರೆ ಮತ್ತು ಮಧುರಚನ್ನರ ಕಾವ್ಯದ ಓದು ನಮ್ಮ ಬದುಕಿಗೆ ಬನಿಕೊಡಬಲ್ಲದು.

**ಮಹದೇವ ಆರ್.**
ಸಂಶೋಧನಾ ವಿದ್ಯಾರ್ಥಿ, ರೇವಾ ವಿಶ್ವವಿದ್ಯಾಲಯ
ಕಟ್ಟಿಗೇನಹಳ್ಳಿ, ಯಲಹಂಕ, ಬೆಂಗಳೂರು – ೫೬೦ ೦೬೪

Printed & published by Dr. Siddanagouda Patil on behalf of Navakarnataka Publications (P) Ltd., Embassy Centre, Crescent Road, Bengaluru-1 and printed at Sri Vinayaka Printers, No. 738/10, 60th Cross, 5th Block, Rajajinagar, Bengaluru-560 010. Published at Bengaluru. Editor : Dr. Siddanagouda Patil. 

